ಪ್ರಕಟನೆ—೬೦

# ಸಮರಭೂಮಿ

ಐತಿಹಾಸಿಕ ಕಾದಂಬರಿ

ಕಾಣಿಕೆ.

2-2-59.

ಬಸವರಾಜ ಕಟ್ಟೀಮನಿ



ಮುದ್ರಣ ಮತ್ತು ಪ್ರಕಾಶನ

ಶಾರದಾ ಪ್ರಕಟನಾಲಯ

ಅರಳೇಪೇಟೆ :: ಬೆಂಗಳೂರು ೨

# ಮೊದಲ ಮಾತು

ನೂರು ವರ್ಷಗಳ ಹಿಂದೆ, ೧೮೫೭ರಲ್ಲಿ ಭಾರತದಲ್ಲಿ ನಡೆದ ಬಂಡಾಯದ ವಿಚಾರ ಎಲ್ಲರೂ ಬಲ್ಲರು. ಆಂಗ್ಲರಾಳಿಕೆಯನ್ನು ಕಿತ್ತೆಸೆಯಲು ಉತ್ತರ ಭಾರತ ದಲ್ಲಿ ಸಂಘಟಿತ ಸ್ವರೂಪದಲ್ಲಿ ಹೋರಾಟ ನಡೆದಂತೆ ದಕ್ಷಿಣ ಭಾರತದಲ್ಲಿ ನಡೆಯು ಲಿಲ್ಲವಾದರೂ ಅಂದಿನ ಕಂಪನಿ ಸರಕಾರವನ್ನು ಕೆಲದಿನಗಳ ಮಟ್ಟಿಗಾದರೂ ನಡುಗಿಸುವಂಥ ಪುಟ್ಟ ಬಂಡಾಯವೊಂದು ನಮ್ಮ ಕರ್ನಾಟಕದಲ್ಲೂ ನಡೆಯಿತು.

ಇಂದು ಧಾರವಾಡ ಜಿಲ್ಲೆಯಲ್ಲೊಂದು ಪಟ್ಟಣವಾಗಿರುವ ನರಗುಂದಕ್ಕೆ ಅಂದು ಅಧಿಪತಿಯಾಗಿದ್ದು, ನಿಪುತ್ರಕನಾಗಿದ್ದ ಭಾಸ್ಕರರಾಯನಿಗೆ ಕಂಪನಿ ಸರಕಾರದಿಂದ ದತ್ತು ಸ್ವೀಕಾರಕ್ಕೆ ಅನುಮತಿ ದೊರೆಯಲಿಲ್ಲವಾದುದರಿಂದ ಆತ ಕೆರಳಿ ಬಂಡಾಯದ ಬಾವುಟವೆತ್ತಿದ. ಆ ಚಾರಿತ್ರಿಕ ಬಂಡಾಯವೇ ಈ ಕಾದಂಬರಿಯ ವಸ್ತುವಾಗಿದೆ.

ಈ ವಿಷಯದ ಬಗೆಗೆ ಲಭ್ಯವಿರುವ ಸಾಹಿತ್ಯವೆಲ್ಲವನ್ನೂ ಅಭ್ಯಸಿಸಿ, ನಾಲ್ಕಾರು ಬಾರಿ ನರಗುಂದಕ್ಕೂ ಹೋಗಿ ಅಲ್ಲಿನ ಅನೇಕ ಜನರನ್ನೂ, ಅಂದಿನ ಹೋರಾಟದಲ್ಲಿ ಭಾಗವಹಿಸಿದ್ದ ಕೆಲವು ಜನರ ವಂಶಜರನ್ನೂ ಕಂಡು ವಿವರಗಳನ್ನು ಸಂಗ್ರಹಿಸಿದ ತರುವಾಯವೆ ಈ ಕೃತಿಯನ್ನು ರಚಿಸಲಾಗಿದೆ.

ಭಾಸ್ಕರರಾಯನ ಪ್ರಯತ್ನ ವಿಫಲವಾಗಲು ಅನೇಕ ಕಾರಣಗಳಿದ್ದುವು. ಮೊದಲನೆಯದಾಗಿ, ಪರಪ್ರಾಂತೀಯರಾದ ಆಳುವ ವರ್ಗದವರ ಬಗೆಗೆ ಜನ ಸಾಮಾನ್ಯರಲ್ಲಿ ಪ್ರೀತಿಯೇ ಇರಲಿಲ್ಲ. ಪದೇ ಪದೇ ನಡೆದ ಯುದ್ಧ-ಲೂಟಿ-ಸುಲಿಗೆಗಳಿಂದಾಗಿ ಪ್ರಜರಿಗೆ ಯುದ್ಧವೆಂದರೇನೇ ಬೇಸರವಾಗಿತ್ತು. ಅವರು ಶಾಂತವಾಗಿ ಬದುಕಲಾಶಿಸುತ್ತಿದ್ದರು. ವೈಯಕ್ತಿಕ ಕಾರಣಗಳಿಗಾಗಿ ಭಾಸ್ಕರರಾಯ ಹೂಡಿದ ಬಂಡಾಯಕ್ಕೆ ಬಹು ಜನರ ಸಹಾನುಭೂತಿಯಾಗಲಿ ಸಹಕಾರವಾಗಲಿ ಲಭಿಸಲಿಲ್ಲ- ದೇಶಪ್ರೇಮದಿಂದ ಪ್ರೇರಿತರಾಗಿ ಯುದ್ಧದಲ್ಲಿ ಭಾಗವಹಿಸಲು ಮುಂದೆ ಬಂದ ಕೆಲವು ಜನರನ್ನೂ ದರಬಾರದವರು ಸರಿಯಾಗಿ ನಡಸಿಕೊಳ್ಳಲಿಲ್ಲ. ಭಾಸ್ಕರರಾಯನ ಸ್ವಭಾವ-ವೈಚಿತ್ರ್ಯವೂ ಅವನ ಶೀಘ್ರಪತನಕ್ಕೆ ಕಾರಣ ವಾಯಿತು. ಇಂಥ ಸಂದರ್ಭಗಳಲ್ಲಿ ಎಲ್ಲಾ ಕಡೆಗಳಲ್ಲಿಯೂ ನಡೆಯುವಂತೆ ನರಗುಂದದಲ್ಲಿಯೂ ಪಿತೂರಿ ನಡೆಯಿತು. ಅದರಿಂದಾಗಿ ಹತಾಶನಾದ ಭಾಸ್ಕರ

ರಾಯ, ಇಂಗ್ಲಿಷರ ದಂಡು ನರಗುಂದದ ಮೇಲೇರಿ ಬಂದಾಗ ಅದನ್ನೆದುರಿಸದೆ ಅತ್ಯಂತ ಅವಸರದಿಂದ ಪಲಾಯನ ಮಾಡಿದ.

ಅಂತೂ ಅದೊಂದು ದುರಂತದ ಕಥೆ. ಇಂದಿನ ಕಾಲದವರಾದ ನಾವು ಹೆಮ್ಮೆಪಟ್ಟುಕೊಳ್ಳುವಂಥ ಘಟನೆ ಯಾವುದೂ ಅಲ್ಲಿ ನಡೆಯಲಿಲ್ಲ. ನರಗುಂದದ ಹೊರಗೆ ನಡೆದ ಸಮರಕ್ಕಿಂತ ನರಗುಂದದ ಒಳಗೆ – ಬೇರೆ ಬೇರೆ ಮಾರ್ಗಗಳಲ್ಲಿ – ನಡೆದ ಸಮರವೇ ಆ ರಾಜ್ಯದ ನಾಶಕ್ಕೆ ಕಾರಣವಾಯಿತೆಂಬುದೊಂದು ಐತಿಹಾಸಿಕ ಸತ್ಯ. ಆ ಸತ್ಯದ ಚಿತ್ರಣವೇ ಈ ಕಾದಂಬರಿಯಲ್ಲಿ ನಡೆದಿದೆ. ಐತಿಹಾಸಿಕ ಕಾದಂಬರಿಗಳಲ್ಲಿ ಚಾರಿತ್ರಿಕ ವಿಷಯಗಳ ಯಥಾರ್ಥ ಹಾಗು ಪ್ರಾಮಾಣಿಕ ಚಿತ್ರಣವಿರಬೇಕಾದುದು ಅತ್ಯಗತ್ಯ. ಈ ವಿಚಾರವನ್ನು ನೆನಪಿನಲ್ಲಿಟ್ಟುಕೊಂಡೇ ವಾಚಕರು ಈ ಕಾದಂಬರಿಯನ್ನೋದಬೇಕೆಂದು ಅರಿಕೆ.

ಮಲಾಮರಡಿ
ಗಾಂಧಿ ಜಯಂತಿ ೧೯೫೬

ಬಸವರಾಜ ಕಟ್ಟೀಮನಿ

# ೧

ಸುತ್ತಲಿನ ಬಯಲುಸೀಮೆಯ ಮೇಲೆಲ್ಲ ಸಾಯಂಕಾಂತಿಯು ಚೆಲುವು ಪಸರಿಸುತ್ತಿದ್ದ ಹಾಗೆ ರಾಜಶೇಖರ ತನ್ನ ಜನ್ಮಸ್ಥಳದ ಬಳಿ ಬಂದು ಮುಟ್ಟಿದ. ಇನ್ನೇನು, ಒಂದು ಕೂಗಳತೆಯ ದಾರಿ ಅಷ್ಟೆ. ಅಂತೂ ಮುಟ್ಟಿದುದಾಯಿತು ತನ್ನ ಪ್ರೀತಿಯ ನರಗುಂದವನ್ನು....ತನ್ನ ವೃದ್ಧ ತಂದೆ ಇದ್ದ ಸ್ಥಳವನ್ನು....ತನ್ನ ಪ್ರೇಯಸಿ....

ಅವಳ ನೆನಪು ಬಂದೊಡನೆ ಅವನ ಹೃದಯ ಪುಲಕಿತವಾಯಿತು. ದೇಹದಲ್ಲೆಲ್ಲ ಕಾವೇರಿ ಮುಖ ಆರಕ್ತವಾಯಿತು. ಕುಣಿಯುತ್ತ ಕುಣಿಯುತ್ತ ನಡೆದಿದ್ದ ಕುದುರೆಯನ್ನು ನಿಲ್ಲಿಸಿ, ದೂರದಲ್ಲಿ ಕಾಣುತ್ತಿದ್ದ ನಗರದ ಮನೆಗಳತ್ತ ದೃಷ್ಟಿ ಹರಿಸಿದ ರಾಜಶೇಖರ. ಮನೆಗಳ ಆ ಗುಂಪಿನಲ್ಲಿ ಯಾವುದು ಆಕೆಯ ಮನೆ? ಆ ಓಣಿಯಲ್ಲೆಲ್ಲ ಅವರದೇ ಏಕಮಾತ್ರ ಮಹಡಿಯ ಮನೆ. ಆದರೂ ಇಷ್ಟು ದೂರದಿಂದ ಅದು ಎದ್ದು ಕಾಣುವಂತಿರಲಿಲ್ಲ.

ಅವಳ ಮನೆಯನ್ನು ಶೋಧಿಸುತ್ತಿದ್ದ ರಾಜಶೇಖರನ ದೃಷ್ಟಿ ಹಠಾತ್ತಾಗಿ ಅರಮನೆಯನ್ನು ಗುರುತಿಸಿತು, ಅದರ ಮೇಲೆ ಹಾರಾಡುತ್ತಿದ್ದ ಬಾವುಟವನ್ನು ಗಮನಿಸಿತು, ಮತ್ತೆ ಎಡಕ್ಕೆ ಹೊರಳಿ ನಿಧಾನವಾಗಿ ಮೇಲಕ್ಕೇರಿ, ಗುಡ್ಡದ ತುದಿಯ ಮೇಲೆ ಬಿಂಕದಿಂದ ನಿಂತುಕೊಂಡಿದ್ದ ಭವ್ಯಕೋಟೆಯನ್ನು ವೀಕ್ಷಿಸಿತು. ಅಲ್ಲಿನ ಬತೇರಿಯ ಮೇಲೆ ಸಾಯಂಕಾಲದ ಸ್ವಚ್ಛಂದ ಗಾಳಿಯಲ್ಲಿ ಡೌಲಿನಿಂದ ಫಡಫಡಿಸುತ್ತಿದ್ದ ಆ ಬಾವುಟ....

ಎರಡು ವರ್ಷಗಳ ಹಿಂದಿನ ಅನೇಕ ದೃಶ್ಯಗಳು ರಾಜಶೇಖರನ ದೃಷ್ಟಿಯೆದುರು ಸುಳಿಯತೊಡಗಿದುವು. ಎರಡು ವರ್ಷಗಳ ಹಿಂದೆ – ಎರಡೇ ಎರಡು ವರ್ಷಗಳ ಹಿಂದೆಯಷ್ಟೆ – ಆ ಬಾವುಟದ ಪಕ್ಕದಲ್ಲಿ ನಿಲ್ಲುವ ಭಾಗ್ಯ ತನ್ನದಾಗಿತ್ತು. ವೈರಿಗಳಿಂದ ಅದನ್ನು ರಕ್ಷಿಸುವ ಹೊಣೆಗಾರಿಕೆ ತನ್ನದಾಗಿತ್ತು. ಕರ್ನಾಟಕದ ಕೋಟೆಗಳಲ್ಲೆಲ್ಲಾ ಭದ್ರವಾದುದೂ ಭವ್ಯವಾದುದೂ ಎಂದು ಪ್ರಸಿದ್ಧಿ ಪಡೆದ ಈ ಇತಿಹಾಸಪ್ರಸಿದ್ಧ ಕೋಟೆಯಲ್ಲಿ ಅಧಿಕಾರಿಯಾಗಿರುವ ಭಾಗ್ಯ ತನ್ನದಾಗಿತ್ತು. ನರಗುಂದ ಸಂಸ್ಥಾನದ ಪುಟ್ಟ ಪಡೆಗೆ ತಾನೇ ದಳಪತಿಯಾಗಿದ್ದ. ತನ್ನ ಕೈಕೆಳಗೆ

ಮಡಿಯುತ್ತಿದ್ದ ರಾವುತರು, ಕಾಲಾಳುಗಳು....ತನ್ನ ನೇತೃತ್ವದಲ್ಲಿ ದಿನವೂ ನಡೆಯುತ್ತಿದ್ದ ಕವಾಯತು....ಕುದುರೆ ಸವಾರಿ....ಕತ್ತಿ ವರಸೆ....ದೊಣ್ಣೆ ವರಸೆ.... ಕೋಟೆಯ ಇಳಿಜಾರಿನ ಕಡಿದಾದ ದಾರಿಯಲ್ಲಿ ನಿರ್ಭಯದಿಂದ ಕುದುರೆಯೋಡಿಸುತ್ತಾ ಅರಮನೆಯ ಅಂಗಳಕ್ಕೆ ದುಮುಕುವ ಕಸರತ್ತು....ಎರಡು ವರ್ಷಗಳ ಹಿಂದೆ....

ರಾಜಶೇಖರನ ಮುಖದಿಂದ ನಿಟ್ಟುಸಿರೊಂದು ನಿಧಾನವಾಗಿ ಹೊರಬಂದಿತು. ಕೆನೆಯುತ್ತ ನಿಂತಿದ್ದ ಕುದುರೆಯ ಬೆನ್ನಿನ ಮೇಲೆ ಮೃದುವಾಗಿ ಏಟು ಹಾಕಿ ಅದನ್ನು ಮುಂದೆ ನಡೆಸಿದ. ಒಂದೆರಡು ಕ್ಷಣಗಳ ಹಿಂದೆಯಷ್ಟೆ ಪ್ರಫುಲ್ಲಿತವಾಗಿದ್ದ ಅವನ ಮನಸ್ಸು ಇದ್ದಕ್ಕಿದ್ದಂತೆಯೆ ವ್ಯಗ್ರವಾಯಿತು. ಸಂತೋಷದಿಂದ ಪುಲಕಗೊಂಡಿದ್ದ ಹೃದಯ ಉದಾಸೀನತೆಯಿಂದ ಭಾರವಾಯಿತು.

ಎರಡು ವರ್ಷಗಳ ಹಿಂದೆ ಎಲ್ಲವೂ ಇತ್ತು : ಅಧಿಕಾರವಿತ್ತು, ಜನಬೆಂಬಲವಿತ್ತು, ದೊರೆಯ ವಿಶ್ವಾಸವಿತ್ತು, ಪ್ರೇಯಸಿಯ ಸುಖದಾಯಕ ಸಹವಾಸವಿತ್ತು, ಈ ಊರು ತನ್ನದೆನ್ನುವ ಅಭಿಮಾನವಿತ್ತು, ತನ್ನ ಊರಿಗಾಗಿ ಹೋರಾಡಬೇಕೆನ್ನುವ ಉತ್ಸಾಹವಿತ್ತು, ಸಮರಭೂಮಿಯಲ್ಲಿ ಕಾದಾಡಿ ಬಂದು ತಂದೆಯಿಂದಲೂ ಪ್ರೇಯಸಿಯಿಂದಲೂ ಪ್ರಶಂಸೆ ಪಡೆಯಬೇಕೆನ್ನುವ ತವಕವಿತ್ತು.

ಈ ದಿನ ಮಾತ್ರ....

"ಎಲಾ! ಎಂಥ ಮರೆವುಗೇಡಿ ನಾನು!" ರಾಜಶೇಖರ ತನ್ನಷ್ಟಕ್ಕೆ ತಾನೆ ಹೇಳಿಕೊಂಡ.

"ಮಲಿಕಾ ಈಗ ನನ್ನವಳಲ್ಲ ಎಂಬುದನ್ನೂ ಮರೆತೇಬಿಟ್ಟಿದ್ದೆನಲ್ಲ ಮಡ್ಡ ನಾನು!" ಬಹಳ ದಿನಗಳ ತರುವಾಯ ಊರಿಗೆ ಮರಳುವವರಿಗೆಲ್ಲ ಹೀಗೆಯೆ ಆಗುವುದೋ ಏನೊ....

"ಎಲಾ! ಎಂಥ ಹುಚ್ಚ ನಾನು!" ರಾಜಶೇಖರ ಪುನಃ ತನ್ನಷ್ಟಕ್ಕೆ ತಾನೆ ಉದ್ಗಾರ ತೆಗೆದ.

ಕೆಲವೇ ಕ್ಷಣಗಳಿಗೆ ಹಿಂದೆ ತನ್ನ ಮನಸ್ಸಿನಲ್ಲಿ ಮೂಡಿದ್ದ ವಿಚಾರವೊಂದನ್ನು ಮತ್ತೆ ನೆನೆದು ಆತ ಮೃದುವಾಗಿ ನಕ್ಕ. ಊರು ತಲಪಿದೊಡನೆ ಮೊಟ್ಟಮೊದಲು ತಂದೆಯನ್ನು ಕಾಣುವುದು, ಅವನ ಯೋಗಕ್ಷೇಮ ನೋಡಿಕೊಂಡು, ಅಡುಗೆಯಾಗಿದ್ದರೆ ಊಟ ಮುಗಿಸಿಕೊಂಡು ನೇರವಾಗಿ ಮಲಿಕಾಳ ಮನೆಗೆ ಹೋಗುವುದು; ಆ ವೇಳೆಯೊಳಗಾಗಿ ಅವಳ ಊಟವೂ ಮುಗಿದಿರುವುದು. ಹಠಾತ್ತಾಗಿ

ತಾನು ಅವಳ ಮುಂದೆ ಹೋಗಿ ನಿಂತು ಅವಳನ್ನು ಆಶ್ಚರ್ಯಚಕಿತಳನ್ನಾಗಿ ಮಾಡುವುದು....

"ಇದೇನ್ರೀ ಇದು! ಹೀಗೆ ಇದ್ದಕ್ಕಿದ್ದ ಹಾಗೆ ಎಲ್ಲಿಂದ ಬಂದಿರಿ? ಎಲ್ಲಾದರೂ ಅಡಗಿ ಕೂತಿದ್ದಿರೊ ಏನು ನನಗೆ ಗೊತ್ತಾಗದಂತೆ!" ಎಂದು ಅವಳು ನಗು ನಗುತ್ತಾ ಹೇಳುವಳು.

"ಹೌದು. ಅಡಗಿ ಕೂತಿದ್ದೆ." ತಾನೂ ನಗುನಗುತ್ತಲೇ ಉತ್ತರವೀಯುವನು.

"ಸುಳ್ಳು. ನನಗೆ ಗೊತ್ತಾಗದಂತೆ ಯಾರೂ ಅಡಗಿ ಕೂತಿರಲು ಸಾಧ್ಯವಿಲ್ಲ," ಎಂದು ಅವಳು ವಾದಿಸುವಳು.

"ಯಾರಿಗೂ ಸಾಧ್ಯವಿರದಿದ್ದರೂ ನನಗೆ ಸಾಧ್ಯವಿದೆ," ಎಂದು ತಾನು ಹೇಳುವನು. "ಎರಡು ವರ್ಷಗಳಿಂದ ನಿನ್ನ ಹೃದಯದಲ್ಲಿ......" ಎನ್ನುತ್ತಾ ಅವಳನ್ನು ಎದೆಗೊತ್ತಿಕೊಂಡು....

ಹಾಗೆ ಯೋಚಿಸುತ್ತಾ ತಾನು ಪುಲಕಿತನಾಗಿದ್ದುದನ್ನು ನೆನೆದು ಮತ್ತೆ ನಕ್ಕ ರಾಜಶೇಖರ.

ಅವನ ನಗೆಯಲ್ಲಿ ಹರಿದು ಬಂದ ಖಿನ್ನತೆಯ ಅರಿವು ಅವನ ಕುದುರೆಗೂ ಆಯಿತೇನೊ, ಅದು ತನ್ನ ಕೊರಳನ್ನು ಹಿಂದೆ ಹೊರಳಿಸಿ ಒಡೆಯನ ಮುಖಮುದ್ರೆಯನ್ನು ನಿರೀಕ್ಷಿಸಲು ಯತ್ನಿಸಿತು. ಒಂದು ವರ್ಷದಿಂದಲೂ ಅವನ ಜತೆಗಿದ್ದುದರಿಂದಾಗಿ ಅದಕ್ಕೆ ಅವನ ಮನೋಸ್ಥಿತಿಗಳೆಲ್ಲವೂ ಪರಿಚಿತವಾಗಿದ್ದುವು.

ತನ್ನ ಆ ಅಸಾಧಾರಣ ಕುದುರೆಯ ಮೇಲೆ ರಾಜಶೇಖರನಿಗೂ ಅತಿಶಯವಾದ ಪ್ರೀತಿಯಿತ್ತು. ತನ್ನ ಧೈರ್ಯ ಶೌರ್ಯಗಳನ್ನು ಮೆಚ್ಚಿ ಘೋರ್ಪಡೆ... ತನಗೆ ಬಹುಮಾನವಾಗಿ ಕೊಟ್ಟಿದ್ದ ಆ ಕುದುರೆಯನ್ನು ಆತ ಅತ್ಯಂತ ಮಮತೆಯಿಂದ ಸಾಕಿಕೊಂಡು ಬಂದಿದ್ದ. ಅಂತೆಯೆ, ಜಮಖಂಡಿಯನ್ನು ಬಿಟ್ಟು ಹೊರಡುವ ಸಮಯ ಬಂದಾಗ, ಕುದುರೆಯನ್ನು ತರುವುದು ಗಂಡಾಂತರದ ಕಾರ್ಯವಾಗಿದ್ದರೂ ಆತ ಯಾವುದನ್ನೂ ಗಮನಿಸದೆ ತನ್ನ ಆ ಪ್ರೀತಿಯ ಕುದುರೆಯನ್ನೇರಿಯೇ ಅಲ್ಲಿಂದ ಹೊರಟುಬಂದಿದ್ದ. ಹಿಂದಿನಿಂದ ಗುಂಡುಗಳು ಬೀಸಿ ಬಂದಿದ್ದುವು, ಹತ್ತಿಪ್ಪತ್ತು ಮಂದಿ ರಾವುತರು ಹಿಂಬಾಲಿಸಿ ಬಂದಿದ್ದರು. ಗಂಡಾಂತರದ ಪ್ರಸಂಗವನ್ನು ಗುರುತಿಸಿಕೊಂಡಿದ್ದ ತನ್ನ ಕುದುರೆ ವಾಯುವೇಗದಿಂದ ಧಾವಿಸಿತ್ತು. ತನ್ನನ್ನು ಬೆನ್ನಟ್ಟಿ ಬಂದವರೆಲ್ಲರೂ ಸೋತು ಹಿಂದಿರುಗಿದ್ದರು.

ರಾಜಶೇಖರ ನಸುಬಾಗಿ ತನ್ನ ಕುದುರೆಯನ್ನು ಪ್ರೇಮದಿಂದ ಚಪ್ಪರಿಸಿದ.

" ನರಗುಂದ ಬಂತು ನೋಡು-ಭದ್ರಾ !"

ರಾಜಶೇಖರ ಅದಕ್ಕೆ ವೀರಭದ್ರ ಎಂದು ಹೆಸರಿಟ್ಟಿದ್ದ. ಕರೆಯುವಾಗ ಮಾತ್ರ ಅದು ಸಂಕ್ಷೇಪಗೊಂಡು 'ಭದ್ರ' ಎಂದಾಗುತ್ತಿತ್ತು.

ತನ್ನ ಹೆಸರುಗೊಂಡು ಒಡೆಯ ಕರೆಯುತ್ತಲೂ ಭದ್ರ ಮುಂಗಾಲುಗಳನ್ನು ಮೇಲಕ್ಕೆತ್ತಿ ಹರ್ಷಧ್ವನಿ ತೆಗೆಯಿತು.

ಆ ಧ್ವನಿ ಕೇಳಿ, ದನಗಳನ್ನಟ್ಟಿಕೊಂಡು ಊರಿಗೆ ನಡೆದಿದ್ದ ದನಗಾಹಿಯೊಬ್ಬ ಹಿಂದೆ ಹೊರಳಿ, ಕುದುರೆಯನ್ನೂ ಸವಾರನನ್ನೂ ಕಂಡು, ತನ್ನ ದನಗಳನ್ನು ಬದಿಗೆ ಸರಿಸಿ ದಾರಿ ಮಾಡಿಕೊಟ್ಟು ತಾನೂ ಸರಿದು ನಿಂತ.

ಆ ದನಗಾಹಿಯ ಪಕ್ಕದಲ್ಲಿ ಹೋಗುತ್ತಿದ್ದ ಹಾಗೆ ಕುತೂಹಲದಿಂದ ಅವನತ್ತ ನೋಡಿದ ರಾಜಶೇಖರ. ಎರಡು ವರ್ಷಗಳ ತರುವಾಯ ಊರಿಗೆ ಬರುತ್ತಿದ್ದ ಅವನಿಗೆ ಊರಿನ ಸುದ್ದಿ ತಿಳಿದುಕೊಳ್ಳುವ ಆತುರ ಅತಿಶಯವಾಗಿದ್ದುದೂ ಸಹಜವೇ ಆಗಿತ್ತು. ಆರೇಳು ತಿಂಗಳುಗಳಿಂದ ತಂದೆಯಿಂದಲೂ ಸಮಾಚಾರ ವಿರಲಿಲ್ಲ. ಅವನ ದೇಹಸ್ಥಿತಿ ಹೇಗಿದೆಯೊ ಯಾರು ಬಲ್ಲರು. ಎರಡು ವರ್ಷಗಳ ಹಿಂದೆ ತಾನು ಊರು ತ್ಯಜಿಸಿ ಹೊರಟು ನಿಂತಾಗಲೂ ಆತ ಸ್ವಸ್ಥವಾಗಿರಲಿಲ್ಲ. ಮನೆಯಲ್ಲಿ ಬೇರೆ ಯಾರೂ ಇಲ್ಲ. ಒಬ್ಬನೇ ಒಬ್ಬನಾದ ಮುದುಕ ಮನುಷ್ಯ....

ರಾಜಶೇಖರ ಕುದುರೆಯಿಂದಿಳಿದು ಆ ದನಗಾಹಿಯನ್ನು ಮತ್ತೆ ದಿಟ್ಟಿಸಿ ನೋಡಿದಾಗ ಆತ ತನಗೆ ಪರಿಚಿತನೆಂದೇ ತೋರಿತು. ಮತ್ತೊಂದು ಕ್ಷಣ ಕಳೆಯುತ್ತಲೂ ಅವನಿಗೆ ನೆನಪಾಯಿತು : ತನ್ನ ಕೈಕೆಳಗಿದ್ದ ರಾವುತರ ಪಡೆಯಲ್ಲಿ ಈತನೂ ಒಬ್ಬ ಸೈನಿಕನಾಗಿದ್ದ. ಮಲ್ಲನಾಯಕನೆಂದೋ ಭರಮನಾಯಕನೆಂದೋ ಇರಬೇಕು ಇವನ ಹೆಸರು....

" ಏನಪ್ಪಾ, ನನ್ನ ಗುರುತು ಹತ್ತುವದಿಲ್ಲೇನು ?" ಎಂದು ಸಲುಗೆಯ ಧ್ವನಿಯಲ್ಲಿ ವಿಚಾರಿಸಿದ ರಾಜಶೇಖರ. " ನೀನು ನಮ್ಮ ಮಲ್ಲನಾಯಕ ಅಲ್ಲಾ ?"

" ಹೌದು." ಎನ್ನುತ್ತಾ ಮಲ್ಲನಾಯಕ ಒಂದು ಮುಜುರೆ ಹೊಡೆದು, ಯಾರಾದರೂ ನೋಡುತ್ತಿರುವರೇನೊ ಎಂಬ ಸಂಶಯದಿಂದ ಅತ್ತಿತ್ತ ದೃಷ್ಟಿ ತಿರುಗಿಸಿ, ಮೆಲ್ಲಗಿನ ಧ್ವನಿಯಲ್ಲಿ ಕೇಳಿದ :

" ಎಲ್ಲಿಂದ ಬಂದಿ ದಳವಾಯಣ್ಣ ?"

" ಹೀಗೇ ಬಂದೆನಪ್ಪಾ ಒಂದು ಊರಿಂದ !" ಎಂದು ಉತ್ತರವಿತ್ತು ರಾಜಶೇಖರ ಮತ್ತೆ ವಿಚಾರಿಸಿದ :

"ಯಾಕೋ ನೀನು ಅಂಜುವ ಹಾಗೆ ಕಾಣುತ್ತಿಲ್ಲ ನಾಯಕಾ? ಏನು ಸುದ್ದಿಯಪ್ಪಾ? ಈ ದನ ಕಾಯುವ ಕೆಲಸ ಎಂದಿನಿಂದ ಗಂಟುಬಿತ್ತು ನಿನಗೆ? ಈಗ ನೀನು ದಂಡಿನಲ್ಲಿ ಇಲ್ಲವೇನು?"

"ಎಲ್ಲಿಯ ದಂಡು ದಳವಾಯಣ್ಣಾ? ನೀ ಹೋದ ವ್ಯಾಲ ದಂಡೂ ಹೋತು."

"ಅಂದರೆ? ಈಗ ದಂಡೇ ಇಲ್ಲ ಅಂತೀಯಾ?"

"ಹೂಂ. ದಂಡೇನೋ ಐತಿ ಹೆಸರಿಗೆ. ನೀ ದಳವಾಯಿ ಇದ್ದಾಗ ದನಾ ಕಾಯುತ್ತಿದ್ದವರೆಲ್ಲಾ ಈಗ ದಂಡಿನಾಗಿದಾರ. ದಂಡಿನಾಗಿದ್ದ ನಮ್ಮಂತವರೆಲ್ಲಾ ದನಾ ಕಾಯುವ ಪರಸಂಗ ಬಂದೈತಿ."

"ಅಂದರೆ? ನಿಮ್ಮನ್ನೂ ಓಡಿಸಿಬಿಟ್ಟನೇ ರಾಘೋಬಾ?"

"ನಿನ್ನಂಥಾ ದಳವಾಯಿಯನ್ನೇ ಓಡಿಸಿದವ ನಮ್ಮಂಥಾ ಸಿಪಾಯಿಗಳನ್ನ ಇರಗೊಟ್ಟಾನೇನಣ್ಣಾ? ನಿನ್ನ ವ್ಯಾಲಿನ ಪಿರೀತಿಗಾಗಿ ನಾವು ಆವನ ವ್ಯಾಲ ತಿರುಗಿಬಿದ್ದೇವು ಅಂತ ಅಂಜಿದನಂತೆ ರಾಘೋಬಾ. ಆತು. ಅಂದಿನಿಂದ...."

ಒಂದು ಕ್ಷಣ ಮೌನವಾಗಿ ನಡೆಯುತ್ತಿದ್ದು ಅನಂತರ ರಾಜಶೇಖರ ಕೇಳಿದ:

"ನಿನ್ನ ಕುಟುಂಬ ಮಕ್ಕಳುಮರಿ ಎಲ್ಲಾ ನೆಟ್ಟಗಿದಾರೆ ಹೌದಲ್ಲೋ?"

"ಇದಾರೆ– ಇರುವ ಹಾಂಗೇ."

"ನಮ್ಮ ಅಪ್ಪನ್ನ ನೋಡಿದ್ದಿಯಾ ಇತ್ತೀಚಿಗೆ?"

"ಹೂಂ." ನೋಡಿದ್ದೆನಲ್ಲ. ಮುದುಕನಿಗೂ ತ್ರಾಸ ಐತಿ. ಬಹಳ ಗಟ್ಟಿ ಮನುಷ್ಯಾ. ಯಾತಕ್ಕೂ ಸೊಪ್ಪು ಹಾಕುವವಾ ಅಲ್ಲ...."

"ಮತ್ತೇನಾದರೂ ಜಡ್ಡು ಗಿಡ್ಡು ಆಗಿತ್ತೇನು ನಾಯಕಾ?"

"ಮುದುಕ ಮನುಷ್ಯಾ ಅಂದಮ್ಯಾಲ ಆದೆಲ್ಲಾ ಇರೂದೇ ಅಲ್ಲಣ್ಣಾ? ಒಬ್ಬನೇ ಒಬ್ಬ ಮಗಾ. ನಿನಗೂ ಚಿಂತಿ ಆಗೂದು ಸರಿ. ಆದರೂ ಅಂಥಾದ್ದು ಏನೂ ಇಲ್ಲ."

ಎದೆಯ ಮೇಲೆ ಬಿದ್ದುಕೊಂಡಿದ್ದ ಭಾರವೊಂದು ದೂರವಾದಂತಾಗಿ ರಾಜಶೇಖರನಿಗೆ ಹಾಯೆನಿಸಿತು. ದೇವರ ದಯೆಯಿಂದ, ತನ್ನ ತಂದೆಯಂತೂ ಕ್ಷೇಮದಿಂದಿದ್ದಾನೆ. ಅದೊಂದು ಆನಂದದ ಸಂಗತಿಯೇ ಸರಿ.

"ಮತ್ತೇನು ಸುದ್ದಿ ಮಲ್ಲನಾಯಕಾ? ಊರೆಲ್ಲಾ ತಣ್ಣಗಿದೆಯಲ್ಲವೆ?"

"ತಣ್ಣಗಿದ್ದಾಂಗ ಕಾಣುತ್ತೈತಪಾ. ಒಳಗೊಳಗ ಮಾತ್ರ ಏನೋ ಮಸಲತ್ತು ನಡದಾಂಗ ಕಾಣುತ್ತೈತಿ."

"ಮಸಲತ್ತು ? ಯಾತರದು ?"

"ನಮ್ಮ ರಾಜಾಸಾಹೇಬರೂ ಇಂಗ್ರೇಜಿ ಸರಕಾರದ ಮ್ಯಾಲ ಲಢಾಯಿ ಹೂಡುತಾರಂತ ಸುದ್ದಿ ಐತಪಾ."

ಲಢಾಯಿ ಎಂಬ ಶಬ್ದ ಕಿವಿಗೆ ಬಿದ್ದರೆ ಸಾಕು, ರಾಜಶೇಖರನ ರಕ್ತ ಬಿಸಿಯಾಗುತ್ತಿತ್ತು, ಬಾಹುಗಳು ಸ್ಫುರಿಸುತ್ತಿದ್ದವು, ಎದೆ ತವಕದಿಂದ ಕುಣಿಯುತ್ತಿತ್ತು. ಚಿಕ್ಕ ವಯಸ್ಸಿನಿಂದಲೂ ಹಾಗೆಯೆ. ಸಮರಪ್ರೇಮವೆಂಬುದು ಅವನ ನರನರಗಳಲ್ಲೆಲ್ಲಾ ತುಂಬಿಕೊಂಡಿತ್ತು. ಅವನ ತಂದೆ, ಅವನ ಅಜ್ಜ, ಅಜ್ಜನ ತಂದೆ, ಅಜ್ಜನ ಅಜ್ಜ ಎಲ್ಲರೂ ಸೈನಿಕರಾಗಿದ್ದುದೇ ಅದಕ್ಕೆ ಕಾರಣವಾಗಿರಲು ಸಾಕು. ಯುದ್ಧದಲ್ಲಿ ಹೋರಾಡುವುದೇ ಅವರ ಮನೆತನದ ಉದ್ಯೋಗವಾದ ಹಾಗಿತ್ತು.

ಅಂತೆಯೆ, ಮಲ್ಲನಾಯಕ ಲಢಾಯಿ ಎನ್ನುತ್ತಲೂ ರಾಜಶೇಖರ ಉತ್ಸಾಹ ಭರಿತನಾಗಿ ಕೇಳಿದ:

"ನಿಜವೇ ನಾಯಕಾ? ನಿಜವಾಗಿಯೂ ರಾಜಾಸಾಹೇಬರು ಲಢಾಯಿ ಹೂಡುತಾರೆ ಅಂತೀಯಾ ?"

"ಮಂದಿ ಮಾತಾಡುತಾರಪಾ. ಎಷ್ಟು ಖರೇವೋ ಎಷ್ಟು ಸುಳ್ಳೋ ?"

"ಲಢಾಯಿಯ ತಯಾರಿ ಏನಾದರೂ ನಡೆದಿದೆಯೇನು ?"

"ತಯಾರಿ ?"

"ಅಂದರೆ – ಸೈನಿಕರನ್ನ ಕೂಡಿಸುವುದು, ಕವಾಯತು ಮಾಡಿಸುವದು, ಕತ್ತಿ ಕಠಾರಿ ಮದ್ದು ಗುಂಡು ತಯಾರಿಸುವದು, ಕಾಳು ಕಡ್ಡಿ ಕೂಡಿಸುವದು...."

"ಊಹೂಂ. ನಮಗಂತೂ ಇದ್ಯಾವದೂ ಕಾಣಲಿಲ್ಲಪಾ."

"ಇಂಗ್ರೇಜಿ ಸರಕಾರದ ವಿರುದ್ಧ ಯುದ್ಧಾ ಮಾಡುವದೆಂದರೆ ಹುಡುಗಾಟ ಅಲ್ಲ ನಾಯಕಾ. ನರಗುಂದದಂಥ ಸಣ್ಣ ಸಂಸ್ಥಾನದ ಶಕ್ತಿ ಎಷ್ಟು. ಇಂಥ ಸಾವಿರಾರು ಸಂಸ್ಥಾನಗಳ ಮೇಲೆ ಅಧಿಕಾರ ನಡಸುವ ಇಂಗ್ರೇಜಿ ಸರಕಾರದ ಶಕ್ತಿ ಎಷ್ಟು! ಇಂಥ ದೊಡ್ಡ ವೈರಿಯ ಮೇಲೆ ಬೀಳಬೇಕಾದರೆ ಬಹಳ ಗುಟ್ಟಾಗಿ ತಯಾರಿ ಮಾಡಬೇಕಾಗ್ತದೆ. ರಾಜಾಸಾಹೇಬರೂ ಗುಟ್ಟಾಗಿ ನಡಸಿರಬಹುದು."

"ಇದ್ದರೂ ಇರಬಹುದಪಾ. ನಾವು ಹುಂಬ ಮಂದಿ. ಅಂಥಾದ್ದು ನಮಗ ತಿಳಿಯೂದಾದರೂ ಹ್ಯಾಂಗ?" ಎಂದು ನುಡಿದು ಮಲ್ಲನಾಯಕ ಮೌನವಾದ.

ನಗರದ ಅಗಸೆಯ ಬಾಗಿಲ ಬಳಿ ಅವರು ಬರುತ್ತಿದ್ದ ಹಾಗೆಯೆ ಮತ್ತೂ ಹಲವರು ರಾಜಶೇಖರನನ್ನು ಗುರುತಿಸಿದರು. ರಾಜಶೇಖರ ನರಗುಂದದಲ್ಲಿದ್ದಷ್ಟು ದಿನವೂ ಅವನ ಆತ್ಮೀಯ ಗೆಳೆಯನಾಗಿದ್ದ ಕೆಂಚಣ್ಣನ ಭೆಟ್ಟಿಯೂ ಬಲು ಬೇಗ ಆಯಿತು. ಕೆಂಚಣ್ಣನೂ ಸೈನಿಕನಾಗಿದ್ದವನೆ. ರಾಜಶೇಖರನಿಗಿಂತ ಎಂಟು ಹತ್ತು ವರ್ಷಗಳಿಂದ ಆತ ಹಿರಿಯನಾದರೂ ಹಿರಿತನದ ಜಂಬ ವ್ಯಕ್ತಗೊಳಿಸದೆ, ಓರಗೆಯವರೊಡನೆ ವರ್ತಿಸುವ ಸಲುಗೆಯಿಂದಲೇ ರಾಜಶೇಖರನೊಡನೆಯೂ ವರ್ತಿಸುತ್ತ ಬಂದು ಅವನ ಆದರಾಭಿಮಾನ ಗಳಿಸಿಕೊಂಡಿದ್ದ. ರಾಜಶೇಖರನ ಶೌರ್ಯ ಸಾಹಸಾದಿ ವೀರೋಚಿತ ಗುಣಗಳ ಬಗೆಗೆ ಕೆಂಚಣ್ಣನಿಗೂ ತುಂಬಾ ಅಭಿಮಾನವಿತ್ತು. ದಳವಾಯಿಯ ಕೆಲಸ ಬಿಟ್ಟುಕೊಟ್ಟು ರಾಜಶೇಖರ ನರಗುಂದ ದಿಂದ ಹೊರಡುವ ಪ್ರಸಂಗ ಬಂದಾಗ ಕೆಂಚಣ್ಣನಿಗೂ ಸಹಜವಾಗಿಯೆ ಸಂತಾಪ ವಾಗಿತ್ತು. ತನ್ನ ಮಿತ್ರನ ಮೇಲಾದ ಅನ್ಯಾಯವನ್ನು ಪ್ರತಿಭಟಿಸಿ ಅವನೂ ತನ್ನ ಕೆಲಸಕ್ಕೆ ರಾಜಿನಾಮೆಯಿತ್ತು ಒಕ್ಕಲತನಕ್ಕೆ ನಿಂತುಕೊಂಡಿದ್ದ.

ಅಗಸೆಯ ಬಾಗಿಲಲ್ಲಿ ಹಾಯ್ದು ಬರುತ್ತಿದ್ದ ಹಾಗೆ, ಅಲ್ಲಿ ಕಾವಲು ಮಾಡು ತ್ತಿದ್ದ ಸಿಪಾಯಿಯೂ ರಾಜಶೇಖರನನ್ನು ಗುರುತಿಸಿ, ಬಂದೂಕವನ್ನೆತ್ತಿ ಹೆಗಲ ಮೇಲಿಟ್ಟುಕೊಂಡು ಸೈನಿಕ ಸಲಾಮು ಸಲ್ಲಿಸಿದ. ನಗರದ ಮಹಾದ್ವಾರದಲ್ಲಿ ತನಗೆ ಲಭಿಸಿದ ಈ ಸ್ವಾಗತವೂ ಒಂದು ಶುಭಚಿಹ್ನೆಯೆಂದೇ ರಾಜಶೇಖರ ನಿಗನ್ನಿಸಿತು. ಆತ ಅಭಿಮಾನದಿಂದ ಮುಗುಳ್ನಗುತ್ತಾ ಕೆಂಚಣ್ಣನತ್ತ ದೃಷ್ಟಿ ತಿರುಗಿಸಿದ.

ಆ ವೇಳೆಯೊಳಗಾಗಿ ರಾತ್ರಿಯ ಆಡಳಿತಕ್ಕಾರಂಭವಾಗಿ ಕತ್ತಲು ಕವಿಯ ತೊಡಗಿತ್ತು. ಸನಿಯದಲ್ಲಿಯೆ ಇದ್ದ ವೆಂಕಟೇಶ್ವರನ ದೇವಾಲಯದಿಂದ ಗಂಟೆಯ ಸದ್ದು ಕೇಳಬರುತ್ತಿತ್ತು. ಮಧ್ಯೆ ಮಧ್ಯೆ, ಅರ್ಚಕರ ಉಚ್ಚಕಂಠದಿಂದ ಹೊರಡು ತ್ತಿದ್ದ ಮಂತ್ರಘೋಷಗಳೂ ಹರಿದುಬರುತ್ತಿದ್ದುವು.

"ದೇವಾಲಯದಲ್ಲೇನಾದರೂ ವಿಶೇಷವೇನಪ್ಪಾ ಇವತ್ತು?" ಎಂದು, ಕೆಂಚಣ್ಣನನ್ನು ಕೇಳಿದ ರಾಜಶೇಖರ.

"ಇವತ್ತೇ ಯಾಕೆ? ಎಂಟು ಹತ್ತು ದಿನನಿಂದಲೂ ಅಲ್ಲಿ ಗದ್ದಲ ನಡೆದೇ ಅದೆ."

"ಅದೇನು ಗದ್ದಲ?"

"ಗೊತ್ತಿದೆಯಲ್ಲ ನಿನಗೂ! ಪೂಜೆ ಪುರಸ್ಕಾರ, ಬ್ರಾಹ್ಮಣ ಭೋಜನ, ಪುರಾಣವಾಚನ...."

"ಅದಂತೂ ಎಂದಿನಿಂದಲೂ ಇದ್ದದ್ದೇ. ರಾಜಮನೆತನದ ಕುಲದೇವರು ಅಂವ ಮೇಲೆ ವೆಂಕಟೇಶನಿಗೇನು ಕೊರತೆ! ಅದಿರಲಿ, ಈಗೇನು ವಿಶೇಷ?"

"ಮೊದಲು ಮನೆಗೆ ಹೋಗೋಣ. ಆಮೇಲೆ ಎಲ್ಲಾ ಹೇಳುವೆನಂತೆ," ಎಂದ ಕೆಂಚಣ್ಣ. ರಾಜಮನೆತನಕ್ಕೆ ಸಂಬಂಧಪಟ್ಟ ಮಾತುಗಳನ್ನು ಹಾಗೆ, ಬೀದಿಯಲ್ಲಿ ಆಡುವುದು ಕ್ಷೇಮಕರವಲ್ಲವೆಂದೇ ಅವನಿಗನ್ನಿಸಿತು.

ಸುದ್ದಿಗಾಗಿ ಹಸಿದಿದ್ದ ರಾಜಶೇಖರನಿಗೆ ಮಾತ್ರ ತಾಳ್ಮೆಯೆಂಬುದೆ ಇರಲಿಲ್ಲ. "ಯಾವಾಗಲೂ ಹೀಗೇ ಈ ಕೆಂಚಣ್ಣ!" ಎಂದು ತನ್ನಲ್ಲಿಯೆ ಅಂದುಕೊಂಡ ಆತ ನಕ್ಕುಬಿಟ್ಟ.

"ನಾಳೆ ಬಂದು ಭೆಟ್ಟಿಯಾಗ್ತೀನಿ ದಳವಾಯಣ್ಣಾ!" ಎಂದು ಹೇಳಿ ಮಲ್ಲನಾಯಕ ತನ್ನ ಮನೆಯತ್ತ ಹೊರಟುಹೋದ. ರಾಜಶೇಖರನನ್ನು ಹಿಂಬಾಲಿಸಿಕೊಂಡು ಬರುತ್ತಿದ್ದ ಇತರ ಪರಿಚಿತರೂ ಹೊರಟುಹೋದರು.

"ದಳವಾಯಣ್ಣಾ!" ಎಂದು ಮಲ್ಲನಾಯಕ ರಾಜಶೇಖರನನ್ನು ಸಂಬೋಧಿಸಿದ್ದುದು ಎದುರಿನಿಂದ ಬರುತ್ತಿದ್ದ ಮನುಷ್ಯನೊಬ್ಬನಿಗೆ ಕೇಳಿಸಿತು. ಆತ ತಡೆದು ನಿಂತು, ಮಬ್ಬುಗತ್ತಲಲ್ಲಿ ಅಸ್ಪಷ್ಟವಾಗಿ ಕಾಣುತ್ತಿದ್ದ ರಾಜಶೇಖರನನ್ನು ದಿಟ್ಟಿಸಿ ನೋಡಿದ, ಅವನ ಪಕ್ಕದಲ್ಲಿ ಬಿಂಕದಿಂದ ಹೆಜ್ಜೆ ಹಾಕುತ್ತ ಬರುತ್ತಿದ್ದ ಕುದುರೆಯನ್ನೂ ನೋಡಿದ. ರಾಜಶೇಖರನನ್ನು ಆತ ಗುರುತಿಸಲು ಶಕ್ತನಾಗಲಿಲ್ಲ. ಎಂತಲೇ, ಕೆಂಚಣ್ಣನನ್ನು ತಡೆದು ನಿಲ್ಲಿಸಿ ಕೇಳಿದ:

"ಇವರು ದಳವಾಯಿಗಳೇ? ಯಾವೂರವರು."

ಪ್ರಶ್ನೆ ಕೇಳಿದವನಾರೆಂಬುದು ಕೆಂಚಣ್ಣನಿಗೂ ಗೊತ್ತಾಗಲಿಲ್ಲ. ನಿಜವನ್ನು ಹೇಳುವುದೇ ಬೇಡವೆ? ಹೇಳಿದರೆ ಪರಿಣಾಮವೇನಾಗಬಹುದು? ಎಂದು ಆತ ಒಂದು ಕ್ಷಣ ಯೋಚಿಸಿದ, ನಗರದ ಸೂಕ್ಷ್ಮ ವಾತಾವರಣವನ್ನು ನೆನಪಿಗೆ ತಂದುಕೊಂಡ, ರಾಘೋಬನಿಗೂ ರಾಜಶೇಖರನಿಗೂ ಇದ್ದ ವೈರವನ್ನು ಜ್ಞಾಪಿಸಿಕೊಂಡ, ಈ ಸಂದರ್ಭದಲ್ಲಿ ಈ ದಾರಿಕಾರನ ಪ್ರಶ್ನೆಯನ್ನು ಅಲಕ್ಷಿಸುವುದೇ ಸರಿಯೆಂದು ನಿಶ್ಚಯಿಸಿ ಮಾತನಾಡದೆ ಮುಂದೆ ಸಾಗಿದ.

ತನ್ನ ಪ್ರಶ್ನೆಗೆ ಉತ್ತರ ದೊರೆಯದಿದ್ದುದನ್ನು ಕಂಡೊಡನೆಯೆ ಆ ಮನುಷ್ಯ ನಿಗೆ ಏನೋ ಅನುಮಾನ ಬಂತು. ಕೆಂಚಣ್ಣನೂ ರಾಜಶೇಖರನೂ ಕೊಂಚ ದೂರ ಹೋಗುವವರೆಗೂ ಸುಮ್ಮನಿದ್ದು ಅನಂತರ ಅವನೂ ಹಿಂದಿರುಗಿ ಅವರನ್ನು ಹಿಂಬಾಲಿಸಿಕೊಂಡು ನಡೆದ.

## ೨

ತನ್ನ ಪಾದತ್ರಾಣಗಳನ್ನು ಹೊರಗೆ ಬಿಟ್ಟು ರಾಜಶೇಖರ ಹನುಮನ ಗುಡಿಯಲ್ಲಿ ಅಡಿಯಿರಿಸಿದ, ಬಲಗೈಯೆತ್ತಿ ವೀರಭಂಗಿಯಲ್ಲಿ ನಿಂತುಕೊಂಡಿದ್ದ ಹನುಮನ ಮೂರ್ತಿಯೆದುರು ಅಡ್ಡಬಿದ್ದ, ಒಂದು ನಿಮಿಷದ ತರುವಾಯ ನಿಧಾನ ವಾಗಿ ಎದ್ದು ಅಂಗಾರವನ್ನು ಹಣೆಗೂ ಕೊರಳಿಗೂ ಹಚ್ಚಿಕೊಂಡ, ಮೂರ್ತಿಯ ಮೈಗೆ ಬಳಿದಿದ್ದ ಸಿಂಧೂರವನ್ನು ಬೆರಳಿನಿಂದ ತೀಡಿ ತೆಗೆದು ಹುಬ್ಬುಗಳ ಮಧ್ಯ ಭಾಗದಲ್ಲಿ ತೊಡೆದುಕೊಂಡ, ಅನಂತರ ಕೈಗಳೆರಡನ್ನೂ ಜೋಡಿಸಿ ವೀರಮಂಡಿ ಯೂರಿ ಕುಳಿತು ನಾಲ್ಕೈದು ನಿಮಿಷಗಳ ಕಾಲ ಮನಸ್ಸಿನಲ್ಲಿಯೆ ಪ್ರಾರ್ಥನೆ ಮಾಡಿದ.

"ಎರಡು ವರ್ಷಗಳ ತರುವಾಯ ನಿನ್ನ ದರ್ಶನ! ಮಾರುತಿರಾಯಾ, ನಿನ್ನ ಈ ಭಕ್ತನನ್ನು ಮರೆತಿಲ್ಲವಷ್ಟೆ?" ಎನ್ನುತ್ತಾ ಮತ್ತೊಂದು ಬಾರಿ ಸಾಷ್ಟಾಂಗ ಪ್ರಣಾಮಗೈಯ್ದು ಆತ ಮೇಲಕ್ಕೇಳುತ್ತಿದ್ದ ಹಾಗೆ ಸಮೀಪದಲ್ಲಿಯೆ ಯಾರೋ ಕೆಮ್ಮಿದಂತಾಗಲು ಅತ್ತಿತ್ತ ದೃಷ್ಟಿಯೋಡಿಸಿದ. ಕೆಮ್ಮಿದ ವ್ಯಕ್ತಿ ಕಾಣಿಸಲಿಲ್ಲ. ಕತ್ತಲಲ್ಲಿ ಯಾರಾದರೂ ಅಡಗಿ ಕುಳಿತಿರಬಹುದೆಂದು ಬಗೆದು ದೇವರ ಮುಂದಿನ ದೀಪ ತೆಗೆದುಕೊಂಡು ಗರ್ಭಗುಡಿಯಲ್ಲೆಲ್ಲಾ ಹುಡುಕಿ ನೋಡಿದ. ಆಗಲೂ ಯಾರೂ ಕಾಣಿಸದಿರಲು ರಾಜಶೇಖರ ಚಕಿತನಾದ. ಹೇಳಿ ಕೇಳಿ ಹನುಮನ ಗುಡಿ. ನಗರದ ಒಂದು ಮೂಲೆಯಲ್ಲಿ ಪರದೇಶಿಯಂತೆ ನಿಂತಿದ್ದ ಚಿಕ್ಕ ದೇವಾಲಯ. ಗರ್ಭಗುಡಿಯೂ ಚಿಕ್ಕದಾಗಿದ್ದುದೇ. ಅಲ್ಲಿ ನಾಲ್ಕು ಜನರೂ ಕೂಡ ನಿಂತು ಸರಾಗವಾಗಿ ಉಸಿರಾಡಿಸುವಂತಿರಲಿಲ್ಲ. ಮೂರ್ತಿಯ ಹಿಂಭಾಗದಲ್ಲೂ ವಿಶೇಷ ಸ್ಥಳವಿರಲಿಲ್ಲ. ಒಂದು ಮೊಳದ ಅಂತರದಲ್ಲಿಯೆ ಗೋಡೆಯಿತ್ತು.

ರಾಜಶೇಖರನ ತೀಕ್ಷ್ಣದೃಷ್ಟಿ ಮತ್ತೊಂದು ಬಾರಿ ಗುಡಿಯನ್ನೆಲ್ಲಾ ಶೋಧಿಸಿತು. ಶಿಲಾಮೂರ್ತಿ ಹನುಮನನ್ನುಳಿದು ಅಲ್ಲಿ ಬೇರಾರೂ ಇಲ್ಲದಿದ್ದುದು

ಖಚಿತವಾಯಿತು. ಆದರೂ, ಯಾರೋ ಕೆಮ್ಮಿದುದಂತೂ ನಿಜ. ಗುಡಿಯಲ್ಲಿ ಯಾರೂ ಇಲ್ಲದಿರುವಾಗ, ಮತ್ತೇನು ಈ ದೇವರು ಕೆಮ್ಮುವುದುಂಟೇ?

ರಾಜಶೇಖರನ ಕೈ, ಅಭ್ಯಾಸಬಲದಿಂದ ಸೊಂಟದಲ್ಲಿನ ಕಿರುಗತ್ತಿಯತ್ತ ಹೋಯಿತು. ಆತ ಥಟ್ಟನೆ ಹಿಂದಿರುಗಿ ದೇವಾಲಯದ ಅಂಗಳದಲ್ಲೂ ಹಿಂಭಾಗ ದಲ್ಲೂ ಸುತ್ತಾಡಿ ಬಂದ. ಅಲ್ಲಿಯೂ ಯಾರು ಕಾಣಲಿಲ್ಲ. ಆಗ ಮಾತ್ರ ಅವನಿಗೆ ಪರಮಾಶ್ಚರ್ಯವಾಯಿತು. ಕೆಮ್ಮಿನ ಧ್ವನಿಯನ್ನಂತೂ ತಾನು ಸ್ಪಷ್ಟವಾಗಿ ಕೇಳಿದ್ದ. ತನ್ನ ಕಿವಿಗಳೇನೂ ತನ್ನನ್ನು ಮೋಸಗೊಳಿಸುವಂತಿರಲಿಲ್ಲ. ಮೂವತ್ತರ ಗಡಿಯೊಳಗೇ ಇರುವ ಯುವಕನಾದ ತಾನು ಹಾಗೆಲ್ಲ ಭ್ರಾಂತಿಗೊಳಗಾಗುವುದೂ ಶಕ್ಯವಿರಲಿಲ್ಲ. ಯಾರೋ ಕೆಮ್ಮಿದುದಂತೂ ಸತ್ಯ, ಹಾಗೆ ಕೆಮ್ಮಿದವರು ಇಲ್ಲಿಯೆ ಎಲ್ಲಾದರೂ ಅವಿತುಕೊಂಡಿರುವುದೂ ಸತ್ಯ....

ಆತ ಪುನಃ ಗರ್ಭಗುಡಿಯಲ್ಲಿ ಪ್ರವೇಶಿಸಿ, ಮೂರ್ತಿಯ ಹಿಂಬದಿಯಲ್ಲಿ ಪರೀಕ್ಷಿಸುತ್ತಿದ್ದ ಹಾಗೆಯೆ ಮಾತೊಂದು ಕೇಳಬಂದಿತು.

"ಅಂಜಬ್ಯಾಡ ದಳವಾಯಣ್ಣಾ. ನಾ ನಿನ್ನ ಶಿಷ್ಯನೇ ಅದೇನು."

"ಶಿಷ್ಯನಾದರೆ ಹೀಗೇಕೆ ಅಡಗಿದ್ದೀ? ಮುಖ ತೋರಿಸು," ಎಂದ ರಾಜ ಶೇಖರ. ಆ ಧ್ವನಿ ತನ್ನ ಗುರುತಿನದಾಗಿದ್ದುದೂ ನಿಜ. ರಾಜಶೇಖರ ಕೊಂಚ ಬೆಚ್ಚಿದ. ಆದರೆ ಆ ಬೆಚ್ಚುಗೆಯಲ್ಲಿ ಭೀತಿಯು ಲವಲೇಶವೂ ಇರಲಿಲ್ಲ. ಭೀತಿ ಯೆಂಬ ಭಾವನೆ ಅವನಿಗೆ ಅಪರಿಚಿತವಾಗಿತ್ತು.

ಹನುಮನ ಮೂರ್ತಿ ನಿಧಾನವಾಗಿ ಬಲಗಡೆಗೆ ಸರಿದಂತಾಯಿತು. ರಾಜ ಶೇಖರ ನೋಡುತ್ತಿದ್ದಂತೆಯೆ ನಲವತ್ತು ನಲವತ್ತೈದರ ಬಲಶಾಲಿಯಾದ ಆಳೊಬ್ಬ, ಮೂರ್ತಿಯಿದ್ದ ಸ್ಥಳದಿಂದೆದ್ದು ಬಂದ.

ವೈರಿಗಳ ದಾಳಿಯ ಕಾಲಕ್ಕೆ ಉಪಯೋಗವಾಗಲೆಂದು ದೇವಾಲಯಗಳಲ್ಲಿ ಆ ಪ್ರಕಾರ ಗುಪ್ತಸ್ಥಳಗಳನ್ನು ನಿರ್ಮಿಸುವ ಪದ್ಧತಿ ಆಗ ಬಳಕೆಯಲ್ಲಿತ್ತು. ಎಂತಲೇ ಮೂರ್ತಿ ತನ್ನ ಸ್ಥಳದಿಂದ ಸರಿದಾಗಲೂ ಅನಂತರ ಅಲ್ಲಿಂದ ಆ ಮನುಷ್ಯ ಎದ್ದು ಬಂದಾಗಲೂ ರಾಜಶೇಖರನಿಗೆ ಆಶ್ಚರ್ಯವೇನೂ ಆಗಲಿಲ್ಲ. ಆದರೆ, ಆ ಹನುಮನ ಗುಡಿಯಲ್ಲಿ ಅಂಥ ಗುಪ್ತಸ್ಥಳವಿದ್ದುದು ಅವನಿಗೆ ಗೊತ್ತಾಗುತ್ತಿದ್ದುದು ಮಾತ್ರ ಅದೇ ಪ್ರಥಮಸಲವಾಗಿತ್ತು.

ಆ ಮನುಷ್ಯ ಅಲ್ಲಿ ಅವಿತುಕೊಂಡಿದ್ದುದಕ್ಕೆ ಎಷ್ಟು ದಿನಗಳ ಕಾಲ ಸಂದಿ ದ್ದಿತೋ. ಕಿರುಬೆರಳಿನುದ್ದವಷ್ಟು ಗಡ್ಡ ಅವನ ಮುಖದ ಮೇಲೆ ಬೆಳೆದಿತ್ತು,

ಅವನ ಮೈಮೇಲಿದ್ದ ಅಂಗರೇಖು ಮಲಿನವಾಗಿತ್ತು, ಅಲ್ಲಲ್ಲಿ ಹರಿದುಹೋಗಿತ್ತು. ಅವನಿಗೆ ಸಮಯಕ್ಕೆ ಸರಿಯಾಗಿ ಅನ್ನ ನೀರೂ ದೊರಕಿದಂತಿರಲಿಲ್ಲ, ಎಂತಲೇ, ಅವನ ಮುಖದ ಮೇಲೆ ಬಳಲಿಕೆಯ ಮೋಡ ಕವಿದಿತ್ತು.

ಅವನ ಧ್ವನಿ ಪರಿಚಿತವಾಗಿದ್ದಂತೆ ತೋರಿದರೂ ರಾಜಶೇಖರನಿಗೆ ಅವನ ಗುರುತು ಮಾತ್ರ ತಿಳಿಯಲಿಲ್ಲ. ತನ್ನ ಶಿಷ್ಯನೆಂದು ಅವನು ಹೇಳಿಕೊಂಡಿದ್ದು ದೇನೊ ಸರಿಯೆ. ಆದರೆ, ಒಂದು ಕಾಲದಲ್ಲಿ ಇಲ್ಲಿ ದಳವಾಯಿಯಾಗಿದ್ದ ತನಗೆ ಈ ನಗರದಲ್ಲಿ ಸಾಕಷ್ಟು ಮಂದಿ ಶಿಷ್ಯರಿರುವುದೂ ಸಹಜವೆ. ಹಾಗೆಂದು, ಎಲ್ಲರ ಜತೆಯಲ್ಲಿಯೂ ಮನಸ್ಸು ತೆರೆದು ಮಾತನಾಡುವುದು ಮುತ್ಸದ್ದಿತನವಲ್ಲವೆಂದು ಸ್ವಲ್ಪ ಹೊತ್ತಿನ ಹಿಂದೆಯೇ ಉಪದೇಶಿಸಿಲ್ಲವೇ ಕೆಂಚಣ್ಣ? "ಇಂಗ್ರೇಜಿ ಸರಕಾರ ದವರ ಗೂಢಚಾರರು ನರಗುಂದದಲ್ಲೆಲ್ಲಾ ನೊಣಗಳಂತೆ ಹರಡಿಕೊಂಡಿದ್ದಾರೆ. ಹೊಲ ಮನೆ ಜಾಗೀರು ಅಧಿಕಾರ ಹಣ ಕೊಡುವ ಆಸೆ ತೋರಿಸಿ ನರಗುಂದದ ಎಷ್ಟೋ ಜನರನ್ನು ಇಂಗ್ರೇಜರು ತಮ್ಮ ಕಡೆ ಒಡೆದುಕೊಂಡಿದ್ದಾರೆ. ದೇಶ ಪ್ರೇಮಿ ಯಾರು, ದೇಶದ್ರೋಹಿ ಯಾರು ಅಂತ ತಿಳಿದುಕೊಳ್ಳುವದೂ ಕಠಿಣ. ನೆರೆಹೊರೆಯ ಜನರನ್ನು ಕೂಡಾ ಯಾರೂ ನಂಬುತ್ತಿಲ್ಲ. ಅದಕ್ಕಾಗಿ ನೀನು ಬಹಳ ಹುಷಾರಾಗಿರು. ಅಪರಿಚಿತರ ಸಂಗಡ ಆಗಲಿ, ಪರಿಚಿತರ ಸಂಗಡ ಆಗಲಿ, ಒಮ್ಮೆಲೇ ಮನಸ್ಸು ಬಿಚ್ಚಿ ಮಾತಾಡಬೇಡ," ಎಂದು ಸಲಹೆಯಿತ್ತಿದ್ದ ಕೆಂಚಣ್ಣ. ತನ್ನ ತಂದೆ ಬಾಯಿ ಬಿಟ್ಟು ಏನನ್ನೂ ಹೇಳಿರಲಿಲ್ಲವಾದರೂ ಅವನ ಅಭಿಮತವೂ ಹಾಗೆಯೆ ಇದ್ದಿತೆಂಬುದನ್ನು ಅವನ ಮೌನವೆ ಸಾರಿ ಹೇಳಿತ್ತು. ಸ್ವಲ್ಪ ಹೊತ್ತು ಮನೆಯಲ್ಲಿ ಕುಳಿತಿದ್ದು, ಹನುಮನ ದರ್ಶನಾಶೀರ್ವಾದ ಪಡೆದುಕೊಂಡು ಮಲಿಕಾಳ ಭೆಟ್ಟಿಗೆ ಹೋಗುವುದೆಂದು ನಿಶ್ಚಯಿಸಿ ಆತ ಇತ್ತ ಬಂದಿದ್ದ.

"ನನ್ನ ಮ್ಯಾಲ ನಂಬಿಗೆ ಬರೋದಿಲ್ಲೇನು ದಳವಾಯಣ್ಣಾ?" ಆ ಮನುಷ್ಯ ಮತ್ತೆ ಮಾತನಾಡಿದ.

"ನಂಬಿಗೆಯ ಮಾತಿರಲಿ, ನೀನು ಯಾರೆಂಬುದನ್ನು ಮೊದಲು ಹೇಳು."

ತನ್ನ ಗಡ್ಡದ ಮೇಲೆ ಕೈಯಾಡಿಸಿಕೊಳ್ಳುತ್ತ ಆ ಮನುಷ್ಯ ನಕ್ಕು ನುಡಿದ:

"ಹೂಂ., ನನ್ನ ಈ ಅವತಾರದಾಗ ನೀನು ಗುರುತಿಸೂದೂ ಕಠಿಣ. ನಾನು ಹೊನ್ನ ಅಲ್ಲೇನಪಾ, ನಿನ್ನ ಕೈಯಾಗ ಕತ್ತೀವರಸೆ ಕಲಿತು ರಾಘೋಬನ್ನ ಸೋಲಿಸಿದವಾ...."

ವಾರ್ಷಿಕ ಪಂದ್ಯಾಟವೊಂದರಲ್ಲಿ ರಾಘೋಬನನ್ನು ಸೋಲಿಸಿದ ಬಿಚ್ಚು ಗತ್ತಿಯು ಹೊನ್ನನಾಯಕ ಇವನೇಯೇ ? ಎಂದು ಅಚ್ಚರಿಪಟ್ಟುಕೊಳ್ಳುತ್ತಾ ರಾಜ ಶೇಖರ, ತನ್ನೆದುರು ನಿಂತಿದ್ದ ಆ ಮನುಷ್ಯನನ್ನು ಪತ್ತೆ ದಿಟ್ಟಿಸಿ ನೋಡಿದ. ಹೌದು. ಈತ ಹೊನ್ನನಾಯಕನೇ ಸರಿ. ಅದೇ ಪಂದ್ಯಾಟದ ಕಾಲಕ್ಕೆ ಕತ್ತಿಯ ಏಟಿ ನಿಂದಾದ ಆ ಕಲೆ ಇನ್ನೂ ನಿಚ್ಚಳವಾಗಿದೆ ಇವನ ಹಣೆಯ ಮೇಲೆ. ಅಂದು ತೆಳ್ಳಗೆ, ಕತ್ತಿಯ ಹಾಗೆಯೆ ಇದ್ದ ಮೈ ಇಂದು ತುಂಬಿಕೊಂಡು ಬೆಳೆದಿದೆ, ಅಷ್ಟೆ. ಗಡ್ಡ ಮೀಸೆ ಬೆಳೆದಿರುವುದರಿಂದಲೂ ಇವನ ಗುರುತು ಕೂಡಲೆ ತಿಳಿಯುವಂತಿಲ್ಲ.

"ಈಗಾದರೂ ಖಚಿತವಾಯಿತೇ ದಳವಾಯಣ್ಣಾ ?" ಹೊನ್ನನಾಯಕ ಕಾತರದ ಧ್ವನಿಯಲ್ಲಿ ಕೇಳಿದ.

"ಆಯ್ತು. ಆಯ್ತು. ಇಲ್ಲಿಗೆ ಬಂದು ಎಷ್ಟು ದಿನ ಆಯ್ತು ಹೊನ್ನ ನಾಯಕಾ ? ಇಲ್ಲ್ಯಾಕೆ ಅಡಗಿ ಕೂತಿದ್ದೀ ?"

"ನಾನೊಂದು ಕೆಲಸಕ್ಕಂತ ಇಲ್ಲಿಗೆ ಬಂದಿದ್ದೀನಿ. ಅದನ್ನ ಸಾಧಿಸುವ ಹಾದಿ ಕಾಣಲೊಲ್ಲದು. ನಡುವೆ ರಾಘೋಬನ ಆಳುಗಳು ನನ್ನ ನೋಡಿದರು. ನನ್ನ ಮ್ಯಾಲ ಅವಗೆಷ್ಟು ಸಿಟ್ಟು ಅನ್ನೂದು ನಿನಗೂ ಗೊತ್ತೈತಲ್ಲ ? ನನ್ನನ್ನು ಹೊಡೆಸಿ ಬಡೆಸಿ ಇಲ್ಲಿಂದ ಓಡಿಸಬೇಕಂತ ಮೂರು ನಾಲ್ಕು ಬಾರಿ ಪ್ರಯತ್ನ ಮಾಡಿದರು. ಬಂದ ಕೆಲಸ ಮುಗಿಸದೆ ಹಂಗೇ ಹೊರಟುಹೋಗೂದಕ್ಕೂ ಮನಸಿಲ್ಲ. ಅದಕ್ಕ ಇಲ್ಲಿ ನಿಂತೀನಿ—"

"ಅಂದರೆ ? ಅದೇನು ಅಂಥ ಗುಟ್ಟಿನ ಕೆಲಸವೋ ಏನು ? ನಿನ್ನ ಸ್ವಂತ ಕೆಲಸವೋ, ಅಥವಾ ಬೇರೆ ಯಾರದ್ದೊ ?"

"ನನ್ನ ಸ್ವಂತದ್ದು ಏನೂ ಉಳಿದಿಲ್ಲ ದಳವಾಯಣ್ಣಾ. ನನ್ನ ಮ್ಯಾಲಿನ ಸಿಟ್ಟಿನಿಂದ ರಾಘೋಬ ನನ್ನ ಇಲ್ಲಿಂದ ಓಡಿಸಿದ ಮ್ಯಾಲ ಈ ಊರಿನ ಮಾಯಾನೇ ಹೋಗಿಬಿಟ್ಟಿತು. ನನ್ನವರನ್ನುವ ಮಂದಿಯಾದರೂ ಯಾರಿದಾರ ಇಲ್ಲಿ ? ಮನೆ ಯಾಕೆ ಯಾವಾಗಲೋ ತೀರಿಕೊಂಡಿದ್ದಳು. ಮಕ್ಕಳಿಲ್ಲದ ಮರಿಯಿಲ್ಲದ ಬಾವಾ. ನನ್ನ ಸ್ವಂತದ್ದು ಏನಿದ್ದೀತು ಇಲ್ಲಿ ?"

"ಹಾಗಾದರೆ...."

"ಹೂಂ. ಅದನ್ನೇ ಹೇಳುತೀನಿ ಆದರೆ, ಹೀಂಗ ಗುಡಿಯೊಳಗ ಕುಂತು ಮಾತಾಡುವಂಥಾ ಮಾತಲ್ಲ ಅದು. ಗುಡಿ ಅಂದ ಮ್ಯಾಲ ಮಂದಿ ಬರುವವರು, ಹೋಗುವವರು. ಅದಲ್ಲದೆ ಈಗ ಈ ಊರಾಗ ಪಿತೂರಿ ಮಂದೀನೂ ಬಹಳ

ಆಗಿದಾರು. ಯಾವಾಗ ಯಾರು ಎಲ್ಲಿ ಹೊಂಚಿ ಕುಂತು ಕೇಳಿಯಾರೆಂಬ ನೇಮ ಇಲ್ಲ. ಅದಕ್ಕ...."

ಹೊನ್ನನಾಯಕನ ಮಾತು ರಾಜಶೇಖರನಿಗೂ ಸಮಂಜಸವೆನಿಸಿತು. ಕೆಂಚಣ್ಣನೂ ಅದೇ ಬಗೆಯಾಗಿ ಹೇಳಿರಲಿಲ್ಲವೆ? ಮಾತಿಗೂ ರೆಕ್ಕೆಗಳುಂಟು— ಎಚ್ಚರವಾಗಿರಬೇಕು.

"ನಾನೂ ಇವತ್ತೇ, ಎರಡು ಮೂರು ತಾಸಿನ ಹಿಂದೆಯಷ್ಟೇ ಇಲ್ಲಿಗೆ ಬಂದಿದ್ದೇನೆ ಹೊನ್ನಾ. ನನಗೂ ಇಲ್ಲಿಯ ವಿಷಯ ಸರಿಯಾಗಿ ಗೊತ್ತಿಲ್ಲ."

"ಜಮುಖಂಡಿಯಲ್ಲೋ ಎಲ್ಲೋ ಇದ್ದಿ ಅಂತ ಸುದ್ದಿಯಿತ್ತಲ್ಲ ಅಣ್ಣ?"

"ಹೌದು. ಜಮಖಂಡಿಯಲ್ಲೇ ಇದ್ದೆ...." ಎಂದು ರಾಜಶೇಖರ ಹಠಾತ್ತಾಗಿ ಮಾತು ನಿಲ್ಲಿಸಿದ. ಹೊರಗಣ ಅಂಗಳದಲ್ಲಿ ಹೆಜ್ಜೆಗಳ ಸದ್ದಾದ ಹಾಗೆ ಕೇಳಿಸುತ್ತಿತ್ತು.

ಹೊನ್ನನೂ ತಕ್ಷಣವೆ ಜಾಗೃತನಾದ. ಎರಡು ನಿಮಿಷಗಳ ಕಾಲ ಇಬ್ಬರೂ ಉಸಿರು ಬಿಗಿಹಿಡಿದು ಮೌನವಾಗಿದ್ದರು. ಹೊರಗಡೆ ಮತ್ತೆ ಅಡಿಗಳ ಸಪ್ಪಳಾಗಲಿಲ್ಲ. ಬಂದವರು ಅಡಗಿ ಕುಳಿತಿದ್ದರೊ ಏನೊ....

ಮತ್ತೆ ನಾಲ್ಕು ನಿಮಿಷ ಮೌನದಲ್ಲಿಯೆ ಕಳೆಯಿತು. ಅಸಹನೀಯವಾದ ಮೌನ. ಅಪಾಯವನ್ನು ಕಂಡೊಡನೆಯೆ ನಿರ್ಲಕ್ಷ್ಯದಿಂದ ದುಮುಕಿ ಅದನ್ನೆದುರಿಸುವುದು ರಾಜಶೇಖರನ ಸ್ವಭಾವ. ಅಡಗಿ ಕುಳಿತಿರುವುದೆಂದರೆ ಹೇಡಿತನವೆಂದೇ ಅವನ ತಿಳಿವಳಿಕೆ.

ಆತ ಮಾತನ್ನೇನೂ ಆಡದೆ ಕಠಾರಿಯನ್ನು ಹಿರಿದು ಗುಡಿಯಿಂದ ಹೊರ ಹೊರಟ. ಒಂದು ಕ್ಷಣ ಯೋಚಿಸುತ್ತ ನಿಂತಿದ್ದು ಅನಂತರ ಹೊನ್ನನೂ ಅವನ ಹಿಂದೆ ಬಂದ.

ಪಾದತ್ರಾಣಗಳನ್ನು ಮೆಟ್ಟಿಕೊಂಡು ರಾಜಶೇಖರ ಬೀದಿಗಿಳಿಯುತ್ತಿದ್ದ ಹಾಗೇ ಅವನ ಎದುರಿನಲ್ಲಿ ಐದಾರು ಮಾರು ದೂರದಲ್ಲಿ ಮನುಷ್ಯಾಕೃತಿಯೊಂದು ಅವಸರದಿಂದ ಸರಿದು ಹೋದಂತಾಯಿತು.

"ಅವನ್ಯಾರು ಅನ್ನೂದನ್ನ ನೋಡೇ ಬಿಡೋಣೇನು ಅಣ್ಣಾ?" ಎಂದ, ಹಿಂದಿನಿಂದ ಬರುತ್ತಿದ್ದ ಹೊನ್ನ.

"ಇಂಥವರೆಲ್ಲಾ ಏನು ಮಾಡುತಾರೆ ಬಿಡು!" ಎಂದು ಪರಮ ನಿರ್ಲಕ್ಷ್ಯದಿಂದ ಹೇಳಿದ ರಾಜಶೇಖರ.

## ೩

ಅವಳು ಭಯಭೀತಳಾಗಿ ಮೆಲ್ಲಗಿನ ಧ್ವನಿಯಲ್ಲಿ ಕೂಗಿಕೊಂಡಳು.

"ಯಾಕೆ ಮಲ್ಲಿಕಾ ? ಏನಾಯ್ತು ?" ಎಂದು ಕೇಳಿದ ರಾಜಶೇಖರ.

ಮಧ್ಯರಾತ್ರಿ ಹಿಂದುಳಿದು ಬೆಳಗಿನಜಾವ ಸಮೀಪಿಸುತ್ತಿತ್ತು. ರಾಜಶೇಖರ ಅವಳ ಮನೆಗೆ ಬಂದುದಕ್ಕೆ ಆಗಲೇ ಬಹಳ ಹೊತ್ತು ಕಳೆದುಹೋಗಿತ್ತು. ಗಂಡಾಂತರದ ಭಯವಿದ್ದರೂ ಅವನನ್ನು ಆಕೆ ಅತ್ಯಂತ ಉತ್ಸಾಹದಿಂದ ಬರಮಾಡಿ ಕೊಂಡಿದ್ದಳು.

"ಅವರು ಬಂದಿಲ್ಲವಷ್ಟೆ ?" ಎಂದು ಆತ ತಡೆತಡೆಯುತ್ತ, ಕೊಂಚ ಸಂಕೋಚದಿಂದಲೇ ಪ್ರಶ್ನಿಸಿದ್ದ.

"ಇಲ್ಲ. ಈಚೆಗೆ ಅವರು ಇತ್ತ ಬರುವುದಿಲ್ಲ."

"ಮತ್ತೆ ? ಬಿಡುಗಡೆಯಾಯಿತೇ ನಿನಗೆ ?" ಎಂದು ಆತ ಕೊಂಚ ಸಮಾಧಾನದಿಂದಲೇ ಕೇಳಿದ್ದ.

"ಉಹೂಂ. ನನಗೆ ಬಿಡುಗಡೆಯೆನ್ನುವುದು ನಾನು ಸತ್ತಾಗಲೇ."

ಅವಳ ಬಾಯ ಮೇಲೆ ಬೆರಳಿಟ್ಟು ರಾಜಶೇಖರ ಹೇಳಿದ್ದ :

"ಅಂಥ ಅಶುಭ ಆಡಬೇಡ ಮಲಿಕಾ, ನನ್ನಾಣೆ ನಿನಗೆ !"

"ಈ ಜೀವನದಲ್ಲಿ ಏನು ಸುಖವಿದೆಯೆಂದು ನಾನು ಬದುಕಬೇಕೋ !"

ಹಾಗೆ, ಆರಂಭವಾಗಿದ್ದ ಮಾತು ಅಷ್ಟು ಹೊತ್ತಿನವರೆಗೂ ನಡೆದಿದ್ದು ಬಂದಿತ್ತು. ಎರಡು ವರ್ಷಗಳ ಹಿಂದೆ ಅವಳನ್ನಗಲಿ ಹೊರಟಂದಿನಿಂದ ನಡೆದುದೆಲ್ಲವನ್ನೂ ರಾಜಶೇಖರ ವಿವರವಾಗಿ ಹೇಳಿದ್ದ. ತನ್ನ ಎರಡು ವರ್ಷಗಳ ದಿನಚರಿಯನ್ನೂ ಬಗೆಬಗೆಯ ಅನುಭವಗಳನ್ನೂ ಮಲಿಕಾ ವಿವರಿಸಿದ್ದಳು. ಬೆಳಕು ಹರಿಯುವವರೆಗೂ ಮುಗಿಯುವಂತಿರಲಿಲ್ಲ ಆ ಮಾತುಕತೆ. ಅಷ್ಟರಲ್ಲಿಯೆ ಬಾಗಿಲ ಮೇಲೆ ಸದ್ದಾಗಿತ್ತು....ಅವಳು ಭಯಭೀತಳಾಗಿದ್ದಳು.

"ಇಂಥ ಅಪರಾತ್ರಿಯಲ್ಲಿ ಯಾರು ಬರ್‍ತಾರೆ ಹುಚ್ಚೀ ? ಗಾಳಿಗೆ ಚಿಲಕ ಸದ್ದು ಮಾಡಿರಬೇಕು," ಎಂದ ರಾಜಶೇಖರ, ಅವಳ ಭೀತಿಯನ್ನು ನಿವಾರಿಸಲು ಯತ್ನಿಸುತ್ತ.

"ಊಹೂಂ. ಇದು ಗಾಳಿಯ ಕೆಲಸವಲ್ಲ. ಇದು ಅವನದೇ...."

"ಯಾರದು ?"

"ಕೃಷ್ಣಾಜಿಪಂತ...."

ಈಗ ಚಕಿತನಾಗುವ ಸರದಿ ರಾಜಶೇಖರನದಾಯಿತು.

"ಕೃಷ್ಣಾಜಿ? ಅವನೂ....?"

"ಹೌದು. ಆಗಾಗ ಬರುತ್ತಿರುತ್ತಾನೆ. ಅವ್ವನ ಒತ್ತಾಯ. ನಾನು ಬೇಡ ಅಂದರೆ ಅವಳು ಕೇಳುವದಿಲ್ಲ. ಅವಳಿಗೆ ಹಣಪಿಶಾಚ ಹಿಡಿದುಕೊಂಡಿದೆಯಲ್ಲ!"

"ಅದೇನು ಹೊಸ ವಿಷಯವಲ್ಲ....." ಎಂದು ರಾಜಶೇಖರ ಅನ್ನುತ್ತಿದ್ದಂತೆಯೆ ಬಾಗಿಲಿನ ಮೇಲೆ ಮತ್ತೆ ಸದ್ದಾಯಿತು.

"ಶ್ಯೂ! ಸುಮ್ಮನಿರಿ!" ಎಂದು, ರಾಜಶೇಖರನಿಗೆ ಪಿಸುಧ್ವನಿಯಲ್ಲಿ ಹೇಳಿ ಅವಳು ಮಲಗಿದ್ದಲ್ಲಿಂದಲೇ ಕೂಗಿದಳು.

"ಯಾರವರು?"

"ನಾನು. ಮಲಿಕಾ! ಬಾಗಿಲು ತೆಗೆ."

"ನಾನು ಅಂದರೆ ಯಾರು? ಇಂಥ ಅಪರಾತ್ರಿಯಲ್ಲಿ ಯಾಕೆ ಬಂದೀರಿ?"

"ಗೊತ್ತಾಗಲಿಲ್ಲವೇ ಮಲಿಕಾ? ನಾನು....ಕಾರಭಾರಿ ಸಾಹೇಬ್...."

"ನನಗೀಗ ಪೂರಾ ನಿದ್ದೆ. ಎದ್ದು ಬಾಗಿಲು ತೆಗೆಯಲಾರೆ. ಹೋಗಿರಿ. ನಾಳೆ ಬಂದೀರಂತೆ."

"ಇಲ್ಲ ಮಲಿಕಾ. ನಾನು ನಾಳೆ ಬರಲಾರೆ. ಅದಕ್ಕೇ ಈಗ ಬಂದಿದ್ದೇನೆ. ದಯಮಾಡಿ ಬಾಗಿಲು ತೆಗೆ."

"ನನ್ನ ನಿದ್ದೆ ಯಾಕೆ ಕೆಡಿಸುತ್ತೀರಿ? ಸುಮ್ಮನೆ ಹೋಗಬಾರದೇ?"

"ಇಲ್ಲ. ಹೋಗುವುದಿಲ್ಲ."

"ಹಾಗಾದರೆ ನಿಂತುಕೊಂಡಿರ್ರಿ ಅಲ್ಲೇ ಬಾಗಿಲಲ್ಲಿ!" ಎಂದವಳೇ ಮಲಿಕಾ ಸುಮ್ಮನಾದಳು.

"ಯಾಕೆ ಮಲಿಕಾ, ಬಹಳ ಉದ್ಧಟತನ? ಈ ಕಾರಭಾರಿಯು ಕೈ ತೋರಿಸಬೇಕೇನು ನಿನಗೂ!"

ಅವಳು ಉತ್ತರವೀಯಲಿಲ್ಲ.

"ಯಾರಾದರೂ ಇದಾರೇನೊ ಒಳಗೆ? ಅದಕ್ಕೇ ನನಗೆ ಬಾಗಿಲು ತೆಗೆಯುತ್ತಿಲ್ಲ ಅಂತ ಕಾಣ್ತದೆ."

ಅಸ್ವಸ್ಥ ಚಿತ್ತದಿಂದ ಮಲಿಕಾ ಮಂಚದ ಮೇಲೆ ಹೊರಳಿದಳು. ರಾಜಶೇಖರ ಇಲ್ಲಿಗೆ ಬಂದುದು ಆ ಕುಟಿಲಕಾರಸ್ಥಾನಿ ಕಾರಭಾರಿಗೆ ಗೊತ್ತಾಗಿದೆಯೊ ಏನೊ

ಯಾರು ಬಲ್ಲರು. ಅದಕ್ಕೇ ಇಂಥ ಅವೇಳೆಯಲ್ಲಿ ಬಂದು ಆತ ಪರೀಕ್ಷಿಸುತ್ತಿರುವನೊ ಏನೊ....

ಅವಳು ಅತ್ಯಂತ ಪಿಸುಧ್ವನಿಯಲ್ಲಿ ಕೇಳಿದಳು :

" ಇನ್ನೇನು ಮಾಡುವುದು ರಾಜಾ ? ನೀವು ಬಂದದ್ದು ಇವನಿಗೆ ಗೊತ್ತಾಗಿದೆಯೊ ಏನೊ."

" ಗೊತ್ತಾದರೆ ಆಗಲಿ. ಅಂಜಬೇಡ. ಇವನು ಮಾಡುವದಾದರೂ ಏನು?"

" ಇವನು ನಾಗರಹಾವಿನ ಜಾತಿಯವ. ಸೇಡು ತೀರಿಸಿಕೊಳ್ಳದೆ ಬಿಡುವುದಿಲ್ಲ."

" ಇರಲಿರಲಿ. ಅವನನ್ನು ನಾನು ನೋಡಿಕೊಳ್ಳುತ್ತೇನೆ. ಹೆದರಬೇಡ," ಎಂದು ರಾಜಶೇಖರ ಭರವಸೆಯಿತ್ತಾಗಲೇ ಅವಳಿಗೆ ಕೊಂಚ ಹಾಯೆನಿಸಿತು.

" ಬಾಗಿಲು ತೆಗೀತೀಯೋ ಇಲ್ಲೋ ?" ಎಂದು ಮತ್ತೆ ಕೂಗಿದ ಕೃಷ್ಣಾಜಿ. " ಇಲ್ಲಾ, ಸಿಪಾಯರನ್ನು ಕರೆಯಲೋ ?"

ಆತ ಸಿಪಾಯಿಗಳನ್ನು ಕರೆಯಿಸುವ ಬೆದರಿಕೆ ಹಾಕುತ್ತಿದ್ದಂತೆಯೆ, ರಾಜಶೇಖರನನ್ನು ಹಿಂಬಾಲಿಸಿಕೊಂಡು ಬಂದು ಪಡಸಾಲೆಯಲ್ಲಿ ಮಲಗಿಕೊಂಡಿದ್ದ ಹೊನ್ನ ಥಟ್ಟನೆದ್ದು ಬಂದು ಕೃಷ್ಣಾಜಿಯ ಕತ್ತು ಹಿಡಿದು ಬೀದಿಗೆ ತಳ್ಳಿದ. ಓಣಿಯವರಿಗೆ ಗೊತ್ತಾಗದಂತೆ ಮಲಿಕಾಸಾನಿಯ ಮನೆಗೆ ಬಂದು ಹೋಗುತ್ತಿದ್ದ ಕೃಷ್ಣಾಜಿ ಕೂಗಿಕೊಂಡು ಗದ್ದಲ ಮಾಡಿ ಜನರನ್ನು ಎಬ್ಬಿಸುವಂತೆಯೂ ಇರಲಿಲ್ಲ. ಎಂತಲೇ ಆತ ಹೆಚ್ಚಿನ ಉಪದ್ವ್ಯಾಪಕ್ಕೆ ಹೋಗದೆ, ಕೋಪವನ್ನು ಮನಸ್ಸಿನಲ್ಲಿಯೆ ಅದುಮಿ ಹಿಡಿದು ಹಲ್ಲು ಕಡಿಯುತ್ತಾ ಬಂದ ದಾರಿ ಹಿಡಿದು ಹೊರಟು ಹೋದ.

ಐದಾರು ನಿಮಿಷ ಕಳೆದ ಬಳಿಕ, ಬಾಗಿಲ ಹೊರಗೆ ಎಲ್ಲವೂ ನಿಶ್ಶಬ್ದವಾಗುತ್ತಲೂ ರಾಜಶೇಖರ ಎದ್ದು ಬಾಗಿಲು ತೆಗೆದು ಹೊರಗಡೆ ಇಣಿಕಿ ನೋಡಿ, ಪಡಸಾಲೆಯಲ್ಲಿ ಮುದುಡಿ ಕುಳಿತುಕೊಂಡಿದ್ದ ಹೊನ್ನನನ್ನು ಕಂಡು,

" ನೀನಿನ್ನೂ ಇಲ್ಲೇ ಇದೀಯಾ ಹೊನ್ನಾ ? ಗುಡಿಗೆ ಹೋಗಿ ಮಲಗಿರಬಹುದು ಅಂತ ನಾನು ತಿಳಿದಿದ್ದೆ," ಎಂದು ನುಡಿದ.

" ಆ ಗುಡಿಯೇನು, ಈ ಪಡಸಾಲೆಯೇನು, ನನಗೆ ಎಲ್ಲಾ ಒಂದೇ," ಎಂದ ಹೊನ್ನ. ಅವನು ಹಾಗೆ ಹೇಳಿದನಾದರೂ, ರಾಜಶೇಖರನನ್ನು ವೈರಿಗಳಿಂದ ರಕ್ಷಿಸುವ ಉದ್ದೇಶದಿಂದಲೇ ಆತ ಅಲ್ಲಿ ಮಲಗಿಕೊಂಡಿದ್ದುದು ಸ್ಪಷ್ಟವಾಗಿತ್ತು. ೧

"ಇದೇ ಈಗ ಬಂದು ಗದ್ದಲ ಮಾಡುತ್ತಿದ್ದವನ ಚಂಡಿನ ಪ್ಯಾಲಕ್ಕೆ ಕೊಟ್ಟು ಕಳಿಸಿಬಿಟ್ಟೆ. ನೀನು ಸುಖವಾಗಿ ನಿದ್ದೆ ಮಾಡಣ್ಣಾ!" ಎಂದ ಹೊನ್ನ.

"ನನಗಾಗಿ ನೀನು ತ್ರಾಸ ಮಾಡಿಕೊಳ್ಳಬೇಡ ಹೊನ್ನಾ."

ಮತ್ತೆ ಬಾಗಿಲು ಹಾಕಿ ಮಲ್ಲಿಕಾಳ ಬಳಿ ಬಂದ ರಾಜಶೇಖರ. ಅವಳು ಮಂಚದ ಮೇಲೆ ಎದ್ದು ಕುಳಿತಿದ್ದಳು.

"ಪೀಡಾ ಹೊಯ್ತು. ಅವನು ಏನು ಗದ್ದಲ ಮಾಡುತಾನೋ ಅಂತ ನನಗೆ ಅಂಜಿಕೆಯಾಗಿತ್ತು," ಎಂದಳಾಕೆ.

ಮತ್ತೆ ಆ ವಿಷಯ ಬೆಳೆಸುವ ಇಷ್ಟವಿರಲಿಲ್ಲ ರಾಜಶೇಖರನಿಗೆ. ಅದೆಲ್ಲವೂ ಅವನಿಗೆ ಅತ್ಯಂತ ಅಸಹನೀಯವಾಗಿತ್ತು. ಮಲ್ಲಿಕಾಳ ಹತ್ತಿರ ಪುನಃ ಬರಬಾರದೆಂದೂ ಎರಡು ವರ್ಷಗಳ ಹಿಂದೆ ಆತ ನಿಶ್ಚಯಿಸಿದ್ದ. ಆದರೆ ಇಂದು ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳಲು ಶಕ್ಯವಾಗಿರಲಿಲ್ಲ. ಅವಳ ಬಗೆಗಿದ್ದ ಒಲವೇ ಆತನನ್ನು ಇಲ್ಲಿಯವರೆಗೂ ಎಳೆದುಕೊಂಡು ಬಂದಿತ್ತು.

ಮಂಚದ ಮೇಲೊರಗಿ ರಾಜಶೇಖರ ಕಣ್ಣುಮುಚ್ಚಿಕೊಂಡ. ನಿದ್ದೆ ಕವಿಯುವ ಹಾಗೆ ತೋರುತ್ತಿತ್ತು. ಮುನ್ನಾದಿನದ ರಾತ್ರಿಯಲ್ಲೂ ಆತ ನಿದ್ದೆ ಮಾಡಿರಲಿಲ್ಲ. ಈ ದಿನವಂತೂ ಹತ್ತು ಹನ್ನೆರಡು ತಾಸುಗಳನ್ನು ಕುದುರೆಯ ಮೇಲೆಯೆ ಕಳೆದುದಾಗಿತ್ತು. ಪ್ರವಾಸದ ಆಯಾಸ ಬೇರೆ, ಜಾಗರಣೆಯಿಂದಾದ ಜಡತೆ ಬೇರೆ. ಅವನ ಮೈ ಮನಸ್ಸುಗಳೆರಡೂ ಪೂರ್ಣ ವಿಶ್ರಾಂತಿಯನ್ನು ಬಯಸುತ್ತಿದ್ದುವು.

ಆತ ನಿದ್ರಿಸಲು ಯತ್ನಿಸುತ್ತಿದ್ದುದನ್ನು ಗಮನಿಸಿ ಅವಳೂ ಸುಮ್ಮನಾದಳು. ಆದರಾತನಿಗೆ ನಿದ್ದೆ ಬರಲಿಲ್ಲ. ಕಣ್ಣುಗಳಲ್ಲಿ ನಿದ್ದೆಯ ಗುಂಗು ತುಂಬಿದ್ದಿತಾದರೂ ತಲೆಯಲ್ಲಿ ವಿಚಾರಗಳ ಗೊಂದಲವೂ ನಡೆದಿತ್ತು. ಹಳೆಯ ನೆನಹುಗಳ ಪ್ರದರ್ಶನವೂ ನಡೆದಿತ್ತು. ಮಲ್ಲಿಕಾಳನ್ನು ತಾನು ಮೊದಲ ಬಾರಿ ಕಂಡ ದೃಶ್ಯ ಅವನ ಚಿತ್ತ ಫಲಕದ ಮೇಲೆ ಮತ್ತೆ ಕಾಣಿಸಿಕೊಳ್ಳುತ್ತಿತ್ತು. ಅವಳಿಗೂ ತನಗೂ ಪರಿಚಯವಾದ ಆ ಪ್ರಸಂಗವೂ ಎಷ್ಟು ರೋಮಾಂಚಕಾರಿಯಾಗಿತ್ತು!

ಪ್ರತಿ ಶನಿವಾರವೂ ಸಾಯಂಕಾಲ ಹನುಮನ ದೇವಾಲಯಕ್ಕೆ ಹೋಗಿ ದೇವರ ದರ್ಶನ ಪಡೆಯುವುದು ಮಲ್ಲಿಕಾಳ ನಿಯಮವಾಗಿತ್ತು. ನಾಲ್ಕೈದು ವರ್ಷಗಳ ಮಾತು. ಒಂದು ಶನಿವಾರ ಎಂದಿನಂತೆ ಅವಳು ದೇವಾಲಯಕ್ಕೆ ಹೋಗುತ್ತಿದ್ದಳು, ದಾಸಿಯೊಬ್ಬಳ ಜತೆಯಲ್ಲಿ. ಹಾದಿಯಲ್ಲಿ ಪುಂಡರು ಕೆಲವರು

ಅವಳನ್ನು ತಡೆದು ಅವಮಾನಗೊಳಿಸಲು ಯತ್ನಿಸಿದ್ದರು. ಅವಳ ದಾಸಿ ಕಿರಿಚಿ ಕೊಳ್ಳುತ್ತಿದ್ದುದು ಅದೇ ಹಾದಿಯಲ್ಲಿ ನಡೆದಿದ್ದ ತನಗೆ ಕೇಳಿಸಿತ್ತು. ಕಠಾರಿಯನು ಹಿರಿದು ತಾನು ಒಡನೆಯೆ ಅತ್ತ ಧಾವಿಸಿಹೋಗಿದ್ದ. ತನ್ನನ್ನು ಕಂಡೊಡನೆಯೆ ಆ ಪುಂಡರು ಕಾಲಿಗೆ ಬುದ್ಧಿ ಹೇಳಿಸಿ ಎಲ್ಲಿಯೋ ತಲೆಮರೆಸಿಕೊಂಡಿದ್ದರು.

"ತಮ್ಮಿಂದ ಬಹಳ ಉಪಕಾರವಾಯ್ತು. ನಮ್ಮ ಮರ್ಯಾದೆ ಕಾಪಾಡಿದಿರಿ," ಎಂದು ಆ ದಾಸಿ ಧನ್ಯವಾದಗಳನ್ನರ್ಪಿಸಿದ್ದಳು.

"ಇದರಲ್ಲೇನಂಥ ಉಪಕಾರ ಬಿಡಿರಿ. ಹೆಣ್ಣುಮಕ್ಕಳು ತೊಂದರೆಯಲ್ಲಿದ್ದಾಗ ನೆರವಾಗುವದು ನಮ್ಮ ಕರ್ತವ್ಯವೇ ಆಗಿದೆ. ನಿಮಗೇನು ಪೆಟ್ಟುಗಿಟ್ಟು ಬೀಳಲಿಲ್ಲ ವಷ್ಟೆ?" ಎಂದು ತಾನು ಪ್ರಶ್ನಿಸಿದ್ದ. ಅವರು ಕುಲೀನ ಮನೆತನದ ಮಹಿಳೆಯ ರೆಂದೇ ಆಗ ತಾನು ಭಾವಿಸಿಕೊಂಡಿದ್ದ. ತೆಳ್ಳನೆಯ ಅವಗುಂಠದಲ್ಲಿ ಮೊಗವನ್ನು ಮುಚ್ಚಿಕೊಂಡು ನೆಲವನ್ನು ದಿಟ್ಟಿಸುತ್ತ ಮೌನವಾಗಿ ನಿಂತಿದ್ದ ಆ ಲಾವಣ್ಯವತಿ, ನರಗುಂದದ ಹೆಸರಾಂತ ವೇಶ್ಯೆಯಾದ ಮಲಿಕಾಸಾನಿ ಎಂಬುದು ತನಗಾಗ ತಿಳಿದಿರಲಿಲ್ಲ.

"ಇಲ್ಲರೀ. ಆ ನೀಚರು ನಮ್ಮ ಮೈಮೇಲೆ ಕೈಮಾಡುವ ಮೊದಲೇ ನೀವು ಬಂದು ನಮ್ಮನ್ನುಳಿಸಿದಿರಿ. ನಿಮ್ಮ ಉಪಕಾರವನ್ನು ಎಂದೂ ಮರೆಯುವದಿಲ್ಲ ಅಂತ ನಮ್ಮ ಒಡತಿ ಹೇಳುತ್ತಾರೆ."

"ಸರಿ. ಸರಿ." ಎಂದು ಗುಣುಗುಣಿಸುತ್ತಾ ತಾನು ಅಲ್ಲಿಂದ ಹೊರಡು ವುದರಲ್ಲಿದ್ದಾಗ ಆ ದಾಸಿ ಮತ್ತೆ ಹೇಳಿದ್ದಳು.

"ದೇವರ ದಯದಿಂದ ತಮ್ಮಂಥ ವೀರಪುರುಷರ ಪರಿಚಯವಾಯಿತು. ತಾವು ದಯಮಾಡಿ ನಮ್ಮ ಮನೆಗೆ ಬಂದು ನಮ್ಮ ಆದರಾತಿಥ್ಯ ಸ್ವೀಕರಿಸಿ ಹೋಗಬೇಕೆಂತ ನಮ್ಮ ಒಡತಿ ಕೇಳಿಕೊಳ್ತಾರೆ."

ಆಗ ಮಾತ್ರ ತನಗೆ ಥಟ್ಟನೆ ಅನುಮಾನವುಂಟಾಗಿ, ಹೊರಟಿದ್ದವನು ಮತ್ತೆ ಹೊರಳಿ ನಿಂತು ಮಲಿಕಾಳ ಮುಖವನ್ನು ದಿಟ್ಟಿಸಿದ್ದ. ಅದೇ ಸಮಯಕ್ಕೆ ಅವಳ ಕಣ್ಣುಗಳೂ ತನ್ನನ್ನೆ ನೋಡುತ್ತಿದ್ದುವು. ಅವಳ ತುಟಿಗಳ ಮೇಲೆ ಸುಂದರ ವಾದ ಮಂದಹಾಸವಿತ್ತು, ಕಣ್ಣುಗಳಲ್ಲಿ ಆಹ್ವಾನವಿತ್ತು.

ಅದುವರೆಗೂ ತನಗೆ ವೇಶ್ಯಾಸ್ತ್ರೀಯರೊಡನೆ ಪರಿಚಯವಿರಲಿಲ್ಲ; ಅವರ ಮನೆಗಳಲ್ಲೂ ತಾನು ಪ್ರವೇಶಿಸಿರಲಿಲ್ಲ. ಗರಡೀಸಾಧನೆ, ಕತ್ತಿವರಸೆ, ದೊಣ್ಣೆವರಸೆ, ಕವಾಯತು, ಸೈನಿಕರ ಮೇಲ್ವಿಚಾರಣೆ, ದಂಡಾಳುಗಳ ಯೋಗಕ್ಷೇಮ ಇವುಗಳ

ಲ್ಲಿಯೆ ತನ್ನೆಲ್ಲ ಸಮಯವೂ ಕಳೆದುಹೋಗುತ್ತಿತ್ತು. ಪ್ರಣಯ ವಿಚಾರಗಳಲ್ಲಿ ತನಗೆ ಅಭಿರುಚಿಯೂ ಇರಲಿಲ್ಲ, ಆಸಕ್ತಿಯೂ ಇರಲಿಲ್ಲ.

ಆದರೆ, ಆ ದಿನದ ಸಾಯಂಕಾಲ, ಲಾವಣ್ಯಭರಿತ ಯುವತಿಯೊಬ್ಬಳ ಸಹವಾಸ ಎಷ್ಟು ಉನ್ಮಾದಕರವಾದುದೆಂಬುದು ತನಗೆ ಅನುಭವವಾಗಿತ್ತು.

"ನಮ್ಮ ಮನೆ ಎಲ್ಲಿದೆಯೆಂಬುದು ನಿಮಗೆ ಗೊತ್ತಿದೆಯಲ್ಲವೆ ?" ಎಂದು ದಾಸಿ ಪ್ರಶ್ನಿಸಿದ್ದಳು.

"ಊಹೂಂ. ಇಲ್ಲ. ಇಲ್ಲ," ಎಂದು ತಾನು ತೊದಲಿದ್ದ.

ಅರಳುವ ಪುಷ್ಪದಂತೆ ಮಲಿಕಾಳ ಕೋಮಲ ತುಟಿಗಳು ತೆರೆದಿದ್ದುವು. ಅವಳು ಕಿಲಕಿಲನೆ ನಕ್ಕು ಪಿಸುಧ್ವನಿಯಲ್ಲಿ ಏನನ್ನೋ ನುಡಿದಿದ್ದಳು. ಅದೇನೆಂಬುದು ತನಗೆ ಅರ್ಥವಾಗಿರಲಿಲ್ಲ.

"ನಮ್ಮಂಥ ಬಡವರ ಮನೆಗೆ ನೀವು ಬರುವಿರೊ ಇಲ್ಲವೊ. ಆದರೂ ದಯಮಾಡಿ ಒಮ್ಮೆಯಾದರೂ ಬಂದು ಹೋಗಿರಿ ಅಂತ ನಮ್ಮ ಒಡತಿ ಹೇಳುತ್ತಾರೆ. ಅಂಗಡಿಬೀದಿಯ ಹಿಂದಿನ ಬೀದಿಯಲ್ಲಿ ನಮ್ಮ ಮನೆ ಇದೆ," ಎಂದು ನುಡಿದು ಮಲಿಕಾಳ ಹೆಸರನ್ನೂ ಹೇಳಿದ್ದಳು ಆ ದಾಸಿ.

ಅವಳು ವೇಶ್ಯೆಯೆಂಬುದು ಖಚಿತವಾಗಿ ತಿಳಿದಮೇಲೂ ತನ್ನ ಭಾವನೆಗಳಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ವೇಶ್ಯಾಮಣಿಯಾಗಿದ್ದರೂ ಕೂಡಾ ಕುಲೀನ ಸ್ತ್ರೀಯರ ಹಾಗೆಯೆ ಗಾಂಭೀರ್ಯದಿಂದ ವರ್ತಿಸುತ್ತಿದ್ದ ಮಲಿಕಾಳ ಬಗೆಗೆ ತನಗೆ ಮೆಚ್ಚುಗೆಯೂ ಅನ್ನಿಸಿತ್ತು. ಅಪರಿಚಿತನಾದ ತನ್ನ ಜತೆಯಲ್ಲಿ ಅವಳೇ ಸ್ವತಃ ಮಾತನಾಡದೆ ಮನಸ್ಸಿನಲ್ಲಿನ ಮಾತುಗಳನ್ನು ದಾಸಿಯ ಮುಖಾಂತರ ವ್ಯಕ್ತಗೊಳಿಸುತ್ತಿದ್ದಳು. ಆ ಶಾಲೀನತೆಯೂ ತನ್ನನ್ನು ಆಕರ್ಷಿಸಿರಲು ಸಾಕು.

"ಬರುವಿರಾ ?" ಎಂದು ಮತ್ತೆ ಪ್ರಶ್ನಿಸಿದಳು ದಾಸಿ.

"ಆಗಲಿ. ಬರ್ತೇನೆ."

"ಎಂದು ? ಇಂದೇ ಬರ್ತೀರಿ ಹಾಗಾದರೆ ?"

"ಓ! ಆಗಲಿ. ಬರ್ತೇನೆ," ಎಂದು ಹೇಳಿದವನೆ ತಾನು ಅಲ್ಲಿಂದ ಹೊರಟು ಬಂದಿದ್ದ. ಆ ವೇಳೆಯೊಳಗಾಗಿ ಅಕ್ಕಪಕ್ಕದ ಜನರಿಗೂ ತಮ್ಮ ಬಗೆಗೆ ಕುತೂಹಲ ವುಂಟಾಗಿತ್ತು. ಮಲಿಕಾಳನ್ನೂ ತನ್ನನ್ನೂ ಗುರುತಿಸಿದ ಆ ಜನರು ತಮ್ಮನ್ನು ಕಾತುರದಿಂದ ದೃಷ್ಟಿಸುವುದೂ ಸಹಜವಾಗಿತ್ತು.

ಒಂದರ್ಧ ತಾಸು ಕಳೆದ ಬಳಿಕ ಕೆಂಚಣ್ಣ ಭೆಟ್ಟಿಯಾಗಿದ್ದ. ಅವನೊಡನೆ ಸಹಜವಾಗಿ ಮಾತನಾಡುತ್ತ ಮಲಿಕಾಳ ವಿಚಾರವಾಗಿ ಅನೇಕ ಸಂಗತಿಗಳನ್ನು ತಾನು ಅರಿತುಕೊಂಡಿದ್ದ. ನರಗುಂದದ ಅತ್ಯಂತ ಸಿರಿವಂತ ವೇಶ್ಯೆಯೆಂದು ಮಲಿಕಾ ಪ್ರಖ್ಯಾತಿ ಪಡೆದಿದ್ದುದು, ಉಚ್ಚ ವರ್ಗಗಳ ಧನಾಢ್ಯರಷ್ಟೆ ಅವಳ ಹತ್ತಿರ ಹೋಗುತ್ತಿದ್ದುದು, ಗಾಯನ ನರ್ತನಾದಿ ಕಲೆಗಳಲ್ಲೂ ಆಕೆ ಪ್ರವೀಣಳಾಗಿದ್ದುದು ತಿಳಿದು ಬಂದಿತ್ತು.

"ಯಾಕಪ್ಪಾ, ಎಂದೂ ಇಲ್ಲದೆ ಇಂದು ಮಲಿಕಾ ವಿಚಾರ?" ತುಂಟತನದಿಂದ ನಗುತ್ತಾ ವಿಚಾರಿಸಿದ್ದ ಕೆಂಚಣ್ಣ. "ಹೆಂಡತಿ ತೀರಿಕೊಂಡು ಎರಡು ಮೂರು ವರ್ಷ ಆಯಿತಲ್ಲವೇನು ಹರಯದ ಹುಡುಗ....ಸಹಜ....ಸಹಜ...."

ಅವನ ಕುಚೇಷ್ಟೆಯತ್ತ ಗಮನವೀಯದೆ ತಾನು ಮತ್ತೆ ಪ್ರಶ್ನಿಸಿದ್ದ :

"ಶ್ರೀಮಂತರನ್ನು ಮಾತ್ರ ಅವಳು ಕರೆದುಕೊಳ್ಳುತ್ತಾಳೆ ಅಂದಿಯಾ?"

"ಹೌದು. ಅಂಥಿಂಥವರು ಅವಳ ಮನೆಯಲ್ಲಿ ಕಾಲು ಹಾಕುವಂತಿಲ್ಲ. ಮೊನ್ನೆ ಏನಾಯ್ತು ಅಂದಿ, ನಮ್ಮ ಮಿತ್ರನೊಬ್ಬ ಹೋಗಿ ಚಲೋ ಒದೆತ ತಿಂದು ಬಂದ...."

"ನಿಜವಾಗಿಯೂ?"

"ಸುಳ್ಳಲ್ಲ ರಾಜಶೇಖರ. ಅವಳದೊಂದು ಹಾಡು ಕೇಳಿ ಬರುವುದಕ್ಕೇ ನೂರು ರೂಪಾಯಿ ಬೇಕಾಗ್ತದೆ. ಅಂದಮ್ಯಾಲ...."

ಕೆಂಚಣ್ಣನಾಡಿದ ಮಾತಿನಿಂದಾಗಿ ತನ್ನ ಉತ್ಸಾಹ ಭಂಗವಾಗಿತ್ತು. ಒಂದು ಹಾಡು ಕೇಳುವುದಕ್ಕೇ ನೂರು ರೂಪಾಯಿ! ತಾನೇನು ಸಿರಿವಂತನಲ್ಲ. ಸೈನ್ಯದಲ್ಲಿ ನಾಯಕನಾಗಿ ತಾನು ಸಂಪಾದಿಸುತ್ತಿದ್ದುದೂ ಅತ್ಯಂತ ಅಲ್ಪವಾದುದು. ತನ್ನಂಥವನಿಗೆ ಮಲಿಕಾಳಂಥ ಹೆಣ್ಣು ಗಗನಕುಸುಮದಂತೆಯೆ ಸರಿ. ಅವಳು ತನ್ನನ್ನು ಮನೆಗೆ ಆಹ್ವಾನಿಸಿದ್ದುದರಲ್ಲೂ ಅಂಥ ವಿಶೇಷವೇನೂ ಇದ್ದಿರಲಾರದು. ತನ್ನ ಉಪಕಾರಕ್ಕೆ ಪ್ರತಿಯಾಗಿ ಇದೊಂದು ಬಾರಿ ಮನೆಗೆ ಕರೆಯಿಸಿ ಸತ್ಕರಿಸುವ ವಿಚಾರವಿರಬಹುದು, ಅಷ್ಟೆ. ಅವಳ ಸ್ನೇಹ, ಅವಳ ಒಲವು ತನ್ನಂಥವನಿಗೆ ಲಭಿಸುವುದು ಅಶಕ್ಯಕೋಟಿಯಲ್ಲಿನ ಮಾತು....

ಅಂಥ ನಿರುತ್ಸಾಹದ ಮನೋಸ್ಥಿತಿಯಲ್ಲಿಯೆ ಅಂದು ರಾತ್ರೆ ತಾಸಿಲ್ಲಿಗೆ ಬಂದಿದ್ದ. ಆದರೆ ಮನೆಯಲ್ಲಿ ಅಡಿಯಿರಿಸಿದ್ದೇ ಸರಿ, ತನ್ನೆಲ್ಲ ಉದಾಸೀನತೆಯೂ ತೊಲಗಿಹೋಗಿತ್ತು. ಬಹಳ ದಿನಗಳ ತರುವಾಯ ಮನೆಗೆ ಬಂದ ಪತಿಯನ್ನು

ಬರಮಾಡಿಕೊಳ್ಳುವಂತೆ ಮಲಿಕಾ ತನ್ನನ್ನು ಬರಮಾಡಿಕೊಂಡಿದ್ದಳು. ಕೈಕಾಲು ತೊಳೆದುಕೊಂಡು ತಾನು ಕೋಣೆಯಲ್ಲಿ ಬಂದಾಗ ಅವಳು ಸೀರೆಯ ಸೆರಗಿನಿಂದ ತನ್ನ ಕಾಲುಗಳನ್ನೊರೆಯಿಸಿದ್ದಳು, ಅನಂತರ ಅವುಗಳ ಮೇಲೆ ಹಣೆಯಿಟ್ಟು ಕುಲವಧುವಿನಂತೆ ತನಗೆ ನಮಸ್ಕಾರ ಮಾಡಿದ್ದಳು.

ತಾನು ಬೆಕ್ಕಸಬೆರಗಾಗಿ ಅಲುಗಾಡದೆ ನಿಂತುಕೊಂಡಿದ್ದ. ಅವಳ ಬಗೆಗೆ ತಾನು ಅದುವರೆಗೂ ಯೋಚಿಸಿದ್ದುದೇ ಬೇರೆ, ಪ್ರತ್ಯಕ್ಷವಾಗಿ ನಡೆಯುತ್ತಿದ್ದುದೇ ಬೇರೆ. ಯಾರ ಪಾದಗಳನ್ನು ಚುಂಬಿಸಲೆಂದು ನಗರದ ಧನಿಕರು ಪರಸ್ಪರರಲ್ಲಿ ಸ್ಪರ್ಧಿಸುತ್ತಿದ್ದರೋ ಆ ನಾರಿಯೆ ಅಂದು ತನ್ನ ಪಾದ ಮುಟ್ಟಿ ವಂದಿಸುತ್ತಿದ್ದಳು! ತಾನು ಅಚ್ಚರಿಗೊಳ್ಳುವುದೂ ಸಹಜವೆ ಆಗಿತ್ತು.

ತನ್ನನ್ನು ಆಸನದಲ್ಲಿ ಕೂಡ್ರಿಸಿ, ಅವಳು ತನ್ನ ಬದಿಯಲ್ಲಿ ನಿಂತು ಬೀಸಣಿಗೆಯಿಂದ ಗಾಳಿ ಹಾಕುತ್ತ ಹೇಳಿದ್ದಳು :

"ನಮ್ಮಂಥವರ ಮನೆಗೆ ಬರಬೇಕಾಯಿತಲ್ಲಾ ಅಂತ ಅಸಮಾಧಾನವೇನೂ ಇಲ್ಲವಷ್ಟೆ ನಿಮಗೆ?"

ಆ ಮಾತು ತನ್ನನ್ನು ಲಜ್ಜಿತನನ್ನಾಗಿಸಿತ್ತು. ತಾನು ನಿರೀಕ್ಷಿಸಿರದಿದ್ದ ಮಾತು....

"ಅಸಮಾಧಾನವಾಗಿದ್ದರೆ ದಯಮಾಡಿ ಕ್ಷಮಿಸಿರಿ. ನೀವಿಂದು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ನಿಮಗೆ ಸತ್ಕಾರ ಮಾಡದೆ ಮನಸ್ಸಿಗೆ ಸಮಾಧಾನ ವಾಗುತ್ತಿರಲಿಲ್ಲ ಅಂತ ನಿಮಗೆ ಈ ತೊಂದರೆ ಕೊಟ್ಟೆ."

"ನಾನು ಮಾಡಿದ ಉಪಕಾರವಾದರೂ ಏನು!"

"ಛೆ. ಛೆ. ನೀವು ಬರದಿದ್ದಲ್ಲಿ ಆ ದುಷ್ಟರು ನನ್ನ ಮೇಲೆ ಕೈಮಾಡುತ್ತಿದ್ದುದು ಖಂಡಿತ. ವೇಶ್ಯೆಯರಾದ ನಮಗೆ ಮಾನಮರ್ಯಾದೆ ಇಲ್ಲವೆಂದೇ ಅವರು ತಿಳಿದಿದ್ದಾರೆ. ಆದರೆ...." ಎನ್ನುತ್ತಿದ್ದಂತೆಯೆ ಅವಳ ಕೊರಳು ಬಿಗಿದು ಬಂದು ಕಣ್ಣುಗಳಲ್ಲಿ ನೀರೂರಿದ್ದುವು.

ಮತ್ತೆ ತನ್ನನ್ನು ತಾನೆ ಸಾವರಿಸಿಕೊಂಡು ಅವಳು ಹೇಳಿದ್ದಳು :

"ಎಂಟು ಹತ್ತು ದಿನಗಳ ಹಿಂದೆ ಅವರು ಇಲ್ಲಿಗೆ ಬಂದಿದ್ದರು. ಹಣ ಕೊಡದಿದ್ದರೆ ಒಳಗೆ ಬಿಡುವುದಿಲ್ಲ ಅಂತ ನನ್ನ ತಾಯಿ ಹೇಳಿದ್ದಕ್ಕೆ ಸಿಟ್ಟಾಗಿ ಹೊರಟುಹೋಗಿದ್ದರು. ಅಂದಿನ ಸಿಟ್ಟನ್ನು ಇಂದು ತೀರಿಸಿಕೊಳ್ಳುವ ವಿಚಾರದಿಂದಲೇ ಅವರು ಬಂದಿರಬೇಕು. ನೀವು ಬಂದು ನನ್ನ ಮಾನ ಉಳಿಸಿದಿರಿ. ಈ

ಕಾಲದಲ್ಲಿ ನಿಮ್ಮಂಥ ಜನರು ಬಹಳ ಕಡಿಮೆ, ತಮ್ಮ ತಮ್ಮ ಸ್ವಾರ್ಥ ನೋಡಿ ಕೊಳ್ಳುವವರೇ ಬಹಳ ಮಂದಿ. ನನ್ನ ಮಾನ ಉಳಿಸುವುದಕ್ಕಾಗಿ ನೀವು ನಿಮ್ಮ ಪ್ರಾಣವನ್ನೂ ಗಂಡಾಂತರದಲ್ಲಿ ಹಾಕಲು ಹಿಂದುಮುಂದು ನೋಡಲಿಲ್ಲ. ಏನು ಕೊಟ್ಟರೆ ನಿಮ್ಮ ಉಪಕಾರ ತೀರಬಹುದೊ ?"

"ಉಪಕಾರದ ಮಾತು ಮರೆತೇಬಿಡಿರಿ. ನನಗೆ ಬಹಳ ಸಂಕೋಚವಾಗು ತ್ತಿದೆ," ಎನ್ನುತ್ತಾ ತಾನು ಎದ್ದುಬಿಟ್ಟಿದ್ದ.

"ಇನ್ನೂ ಸ್ವಲ್ಪ ಹೊತ್ತು ಕುಳಿತಿರ್ರಿ. ಹೋಗುವಿರಂತೆ," ಎಂದು ಮಲಿಕಾ ಹೇಳುತ್ತಿದ್ದಂತೆಯೆ ಅವಳ ದಾಸಿ ಬೆಳ್ಳಿಯ ತಟ್ಟೆಯೊಂದನ್ನು ಎತ್ತಿಕೊಂಡು ಬಂದಿದ್ದಳು. ತನಗೆ ಕಾಣಿಕೆಯಾಗಿ ಅರ್ಪಿಸಲೆಂದು ಮಲಿಕಾ ತರಿಸಿದ್ದ ರೇಶಿಮೆಯ ಮತ್ತು ಜರತಾರಿಯ ವಸ್ತ್ರಗಳೂ ಒಡವೆಗಳೂ ಆ ತಟ್ಟೆಯಲ್ಲಿದ್ದುವು.

ಬೇಡವೆಂದು ತಾನೆಷ್ಟು ಹೇಳಿದರೂ ಕೇಳದೆ ಅವಳು ಅವುಗಳನ್ನೆಲ್ಲ ತನಗೊಪ್ಪಿಸಿದ್ದಳು. ಅವಳ ಮನಸ್ಸನ್ನು ನೋಯಿಸಲಾರದೆ ತಾನು ಅವುಗಳನ್ನು ಸ್ವೀಕರಿಸಲೇಬೇಕಾಗಿ ಬಂದಿತ್ತು. ಅನಂತರ ಹಣ್ಣು ಬಂದಿದ್ದುವು, ಹದಗೊಳಿಸಿದ ಬಾದಾಮಿಹಾಲು ಬಂದಿತ್ತು. ಅವುಗಳನ್ನೂ ಸೇವಿಸಿ, ವೀಳಯ ಮೆಲ್ಲುತ್ತಾ ತಾನು ಎದ್ದು ನಿಂತಾಗ ಮತ್ತೆ ಮಲಿಕಾ ತನಗೆ ನಮಸ್ಕಾರ ಮಾಡಿದ್ದಳು.

"ನಾವು ಕೇಳಿಕೊಂಡಂತೆ ಇಲ್ಲಿಗೆ ಬಂದು ನಮ್ಮನ್ನು ಸಂತೋಷಗೊಳಿಸಿದಿರಿ. ಇನ್ನು ಮೇಲೆ ಮಾತ್ರ ಇತ್ತ ಹಾಯಬೇಡಿರಿ!" ಖಿನ್ನತೆಯಿಂದ ನಗುತ್ತಾ ಅವಳು ಹೇಳಿದ್ದಳು.

"ಯಾಕೆ ? ಯಾಕೆ ?" ಎಂದು ತಾನು ದಿಗಿಲುಗೊಂಡು ವಿಚಾರಿಸಿದ್ದ.

"ಇದು, ತಮ್ಮಂಥ ಒಳ್ಳೆಯವರು ದಿನವೂ ಬರುವಂಥ ಮನೆಯಲ್ಲ. ತಮಗಿನ್ನೂ ಮದುವೆಯಾಗಿಲ್ಲವೆ ?" ಎಂದು ಅವಳು ಕೇಳಿದ್ದಳು.

"ಆಗಿತ್ತು. ಹೆಂಡತಿ ತೀರಿಕೊಂಡಳು."

"ಹಾಗಾದರೆ ಮತ್ತೊಬ್ಬಳನ್ನು ಮದುವೆಯಾಗಿ ಸುಖವಾಗಿ ಬಾಳಿರಿ. ಈ ಕಡೆ ಮಾತ್ರ ಬರಬೇಡಿರಿ."

ಆ ಮಾತು ಕೇಳುತ್ತಲೂ ತನಗೆ ದುಃಖವುಕ್ಕಿ ಬಂದಿತ್ತು. ಅಲ್ಪಾವಧಿ ಯಲ್ಲಿಯೇ ಮಲಿಕಾ ತನಗೆ ಚಿರಪರಿಚಿತೆಯಾದಂತೆ ತೋರುತ್ತಿದ್ದಳು. ಅನುಕಂಪ ದಿಂದ ಕಂಪಿಸುವ ಮೃದುವಾದ ಧ್ವನಿಯಲ್ಲಿ ತಾನು ಹೇಳಿದ್ದ :

" ಹೀಗ್ಯಾಕೆ ಆಡುತ್ತೀ ಮಲಿಕಾ ? ಸ್ನೇಹ ಬೆಳೆಸಿದವಳೂ ನೀನೇ. ಇಷ್ಟು ಬೇಗ ಅದನ್ನು ಮುರಿಯುತ್ತಿರುವವಳೂ ನೀನೆ. ಹೀಗೆ ಮಾಡುವ ಬದಲು ನನ್ನನ್ನು ಇಲ್ಲಿಗೆ ಕರೆಯಿಸದಿದ್ದರೇನೇ ಒಳ್ಳೆಯದಾಗುತಿತ್ತು."

" ಹೌದು. ನಿಮ್ಮ ಮಾತೂ ನಿಜ. ಕರೆಯಿಸಬಾರದಿತ್ತು. ಆದರೂ ಮನಸ್ಸು ತಡೆಯಲಾರದೆ ಕರೆಯಿಸಿದೆ. ನೀವು ಬಂದಿರಿ. ಮನಸ್ಸು ತೃಪ್ತಗೊಂಡಿತು. ಇನ್ನು ಮೇಲೆ ಮಾತ್ರ ಬರುವುದು ಬೇಡ ಅನ್ನುತ್ತೇನೆ."

" ಸರಿ. ಇಲ್ಲಿಗೆ ಬಂದು ಹೋಗುವ ಯೋಗ್ಯತೆಯೂ ನನ್ನದಲ್ಲ. ನಾನೊಬ್ಬ ಸಾಧಾರಣ ಸೈನಿಕ. ಶ್ರೀಮಂತನಲ್ಲ...."

" ಶ್ರೀಮಂತಿಕೆಯ ಮಾತೆಲ್ಲಿ ಬಂತು – ನಿಮ್ಮ ವಿಷಯದಲ್ಲಿ ? ನೀವು ನನ್ನನ್ನು ತಪ್ಪಾಗಿ ತಿಳಿದುಕೊಳ್ಳಬೇಡಿರಿ. ನನ್ನ ತಾಯಿಗೇನೊ ಹಣದ ಹುಚ್ಚು ಇರುವುದು ನಿಜ. ನನಗೆ ಮಾತ್ರ ಹಣವೆಂದರೇ ಹೇಸಿಕೆಯಾಗುತ್ತಿದೆ – ಈ ಬದುಕೂ ಬೇಡವಾಗಿದೆ. ಆದರೇನುಮಾಡಲಿ, ಬೇಡವೆನಿಸಿದ ಮಾತ್ರಕ್ಕೆ ಇದರಿಂದ ಬಿಡುಗಡೆಯಾದೀತೇ ?" ಎಂದು ನುಡಿದು, ಒಂದುಕ್ಷಣ ಸುಮ್ಮನಿದ್ದು ಅವಳು ಮತ್ತೆ ಅಂದಿದ್ದಳು : " ಈ ಹಾಳಾದ ಬದುಕಿನಲ್ಲಿ ನೀವು ಮಾತ್ರ ಬರಬೇಡಿರಿ. ದೂರವೇ ಇರ್ರಿ,"

ಅವಳು ಹಾಗೆ ಸ್ಪಷ್ಟವಾಗಿ ಹೇಳಿದ್ದರೂ, ಒಂದೆರಡು ವಾರಗಳ ತರುವಾಯ ಮನಸ್ಸು ತಡೆಯಲಾರದೆ ತಾನು ಪುನಃ ಅವಳಲ್ಲಿಗೆ ಬಂದುದಾಗಿತ್ತು.

ಆಗಲೂ ಅವಳು ತನ್ನನ್ನು ಆದರದಿಂದಲೇ ಬರಮಾಡಿಕೊಂಡಿದ್ದಳು. " ಏಕೆ ಬಂದಿರಿ ?" ಎಂದು ಕೇಳಿರಲಿಲ್ಲ. ತಾನೂ ಆ ವಿಚಾರ ಪ್ರಸ್ತಾಪಿಸಿರಲಿಲ್ಲ.

ಸುಗಂಧದ್ರವ್ಯಗಳನ್ನೂ ಹಾಲು ಹಣ್ಣುಗಳನ್ನೂ ವೀಳಯವನ್ನೂ ಇತ್ತು ತನ್ನನ್ನು ಸತ್ಕರಿಸಿದ ತರುವಾಯ ಅವಳು ಕೇಳಿದ್ದಳು :

" ಮದುವೆಯದು ಏನು ಮಾಡಿದಿರಿ ? ಎಲ್ಲಾದರೂ ಹೆಣ್ಣು ನೋಡಿದಿರಾ?"

ಅವಳ ಪ್ರಶ್ನೆಯಿಂದಾಗಿ ತನಗೆ ನಗೆ ಚಿಮ್ಮಿಬಂದಿತ್ತು.

" ನನ್ನಂಥ ಸೈನಿಕನಿಗೆ ಹೆಣ್ಣು ಕೊಡುವವರಾದರೂ ಯಾರು ? ನೀನೇ ಒಬ್ಬಳನ್ನು ನೋಡಬಾರದೇ ?"

" ಹಾಸ್ಯ ಸಾಕು. ನಿಜವಾಗಿಯೂ ನೀವು ಬೇಗ ಮದುವೆಯಾಗಬೇಕು. ಅಂತ ನನ್ನ ಆಸೆ."

"ಆ ಆಸೆ ಈ ಜನ್ಮದಲ್ಲಂತೂ ನೆರವೇರುವುದಿಲ್ಲವೆಂದು ತಿಳಿದುಕೊಂಡು ಬಿಡು."

"ಉಹೂಂ. ನೀವು ಹೀಗೆ ಹುಡುಗರ ಹಾಗೆ ಆಡಬಾರದು. ನನ್ನ ಮಾತು ಕೇಳಿ ಬೇಗ ಒಬ್ಬ ಕುಲವಧುವಿನ ಕೈ ಹಿಡಿಯಿರಿ. ನಿಮಗೊಬ್ಬ ಮಗ ಹುಟ್ಟಿದ ಬಳಿಕ ನಾನು ಅವನನ್ನೆತ್ತಿಕೊಂಡು ಸಂತೋಷಪಡುತ್ತೇನೆ."

"ನೀನೊಳ್ಳೇ ಅಜ್ಜಿಯ ಹಾಗೇ ಮಾತಾಡತೊಡಗಿದಿಯಲ್ಲ!"

"ಹೌದು. ನಾನೂ ಅಜ್ಜಿಯೇ– ನಿಮ್ಮ ಮಟ್ಟಿಗೆ."

"ಅಂದರೆ? ನಾನೊಂದು ಕೂಸೆಂದು ತಿಳಿದಿದ್ದೀಯಾ?"

"ಕೂಸೇ ಅಲ್ಲದಿನ್ನೇನು? ನಿಮಗಾದರೂ ಅಂಥ ಮಹಾವಯಸ್ಸಾದದ್ದು ಅಷ್ಟರಲ್ಲೇ ಇದೆ."

"ನೀನು ಮಾತ್ರ ಮುಪ್ಪಿನ ಮುದುಕಿಯಾಗಿದ್ದೀ! ಅಲ್ಲವೆ?"

"ನಿಮಗೆ ಗೊತ್ತಿಲ್ಲ. ನಿಜವಾಗಿ ನಾನು ಮುದುಕಿಯೇ. ಈ ದೇಹದಲ್ಲೇನೊ ಹರಯ ಕಾಣುತ್ತಿರಬಹುದು. ಒಳಗೆ ಮಾತ್ರ...." ಎಂದು ಹೇಳುತ್ತಾ ಅವಳು ಅಷ್ಟಕ್ಕೇ ಆ ಮಾತು ನಿಲ್ಲಿಸಿ ಒಂದು ನಿಮಿಷ ಸುಮ್ಮನಿದ್ದು ಮುಂದುವರಿಸಿದ್ದಳು:

"ನಾನೇ ಹೋಗಿ ನಿಮಗೊಂದು ಹೆಣ್ಣು ನೋಡಬಹುದಿತ್ತು. ಆದರೆ, ಈಗ ಅದೂ ನನ್ನಿಂದ ಆಗುವಂತಿಲ್ಲ. ನಿಮ್ಮ ಮನೆಗೆ ಬಂದು ನಿಮ್ಮ ತಂದೆಯವರಿಗಾದರೂ ಹೇಳಿಬರಬೇಕನಿಸುತ್ತದೆ. ಜನರು ಏನೆಂದಾರೋ ಅಂತ ಭಯ. ನಿಮ್ಮ ತಂದೆಯವರಾದರೂ ಏನು ತಿಳಿದುಕೊಳ್ಳುವರೊ...."

"ಅವರೇನೂ ತಿಳಿದುಕೊಳ್ಳುವದಿಲ್ಲ."

"ಅಂದರೆ? ಮತ್ತೊಂದು ಮದುವೆಯಾಗುವದಕ್ಕೆ ನಿಮಗೆ ಅವರು ಹೇಳುವದೇ ಇಲ್ಲೇನು?"

"ಹೇಳಿ ಹೇಳಿ ಸಾಕಾಗಿ ಈಗ ಸುಮ್ಮನಿದ್ದಾನೆ."

"ಪಾಪ. ಅವರೇ ಅಡಿಗೆ ಮಾಡುತ್ತಾರೊ ಏನೊ."

"ಹೌದು. ಮತ್ತ್ಯಾರು ಮಾಡಬೇಕು? ನನಗಂತೂ ಊದುಗೊಳವೆ ಹಿಡಿಯಲು ತಿಳಿಯದು."

"ಅವಕ್ಕೇ ನಾನು ಹೇಳುವದು, ಆದಷ್ಟು ಬೇಗ ಹೆಂಡತಿಯನ್ನು ಮನೆಗೆ ಕರೆದುಕೊಂಡು ಬರ್ರಿ ಅಂತ. ನಿಮಗೆ ಮದುವೆಯ ವಿಚಾರವೇ ಇಲ್ಲವೆ?"

"ಇತ್ತು....ಇಲ್ಲ."

"ಅಂದರೆ ?"

"ಅಂದು ಸಂಜೆಯುವರೆಗೆ ಸ್ವಲ್ಪ ಸ್ವಲ್ಪ ಇತ್ತು. ಈಗ ಇಲ್ಲ," ಎನ್ನುತ್ತಾ ತಾನು ಗಟ್ಟಿಯಾಗಿ ನಕ್ಕುಬಿಟ್ಟಿದ್ದ.

ಅವಳಿಗೆ ಮಾತ್ರ ನಗು ಬಂದಿರಲಿಲ್ಲ. ಅವಳು ಗಂಭೀರವಾಗಿ ನುಡಿದಿದ್ದಳು :

"ಉಹೂಂ. ಇದೇನು ಸರಿಯಲ್ಲ....ಸರಿಯಲ್ಲ...."

"ಏನು ಸರಿಯಲ್ಲ ಮಲಿಕಾ ?"

ಅವಳು ಮತ್ತೆ ಮಾತನಾಡಿರಲಿಲ್ಲ. ತನ್ನನ್ನು ಇಲ್ಲಿಯೆ ಬಿಟ್ಟು ಒಳಗಿನ ಕೋಣೆಗೆ ಹೋಗಿ ಬಿದ್ದುಕೊಂಡಿದ್ದಳು. ಒಂದು ತಾಸು ಕಳೆದರೂ ಮರಳಿ ಬಂದಿರ ಲಿಲ್ಲ. ತಾನು ವ್ಯಸನದಿಂದಲೇ ಹೊರಟುಹೋಗಿದ್ದ.

ಮತ್ತೊಂದು ತಿಂಗಳು ಕಳೆದ ಬಳಿಕ ಮತ್ತೆ ಬಂದುದಾಗಿತ್ತು. ಹಾಗೆಯೇ ಆಗಾಗ ಬಂದು ಹೋಗುವುದು ಆರಂಭವಾಗಿತ್ತು. ಮಲಿಕಾ ಮತ್ತೆ ಮತ್ತೆ ಹೇಳುತ್ತಲೇ ಇದ್ದಳು: "ನೀವಿಲ್ಲಿಗೆ ಬರುವುದು ಒಳ್ಳೆಯದಲ್ಲ. ಒಳ್ಳೆಯದಲ್ಲ."

"ಅದೇಕೆ ?" ಎಂದು ತಾನು ಕೇಳುತ್ತಿದ್ದ. ಆಗ ಆಕೆ "ನೂರು ಗಂಡು ನಾಯಿ ಮುಟ್ಟಿ ಮೈಲಿಗೆಯಾದ ಈ ದೇಹ ನಿಮಗೆ ತಕ್ಕದ್ದಲ್ಲ. ಇದು ಅಪವಿತ್ರ ವಾದದ್ದು, ಅಶುದ್ಧವಾದದ್ದು, ದಯವಿಟ್ಟು ಇಲ್ಲಿಗೆ ಬರಬೇಡಿರಿ," ಎನ್ನುತ್ತಿದ್ದಳು.

"ನನಗೆ ದೇಹ ಮುಖ್ಯವಲ್ಲ ಮಲಿಕಾ, ನೀನು ಮುಖ್ಯ. ಆ ನೀನು ಅನ್ನುವುದು ಬಹಳ ಪವಿತ್ರವಾದದ್ದು, ಶುದ್ಧವಾದದ್ದು. ಪೂಜೆ ಮಾಡಲಿಕ್ಕೂ ಯೋಗ್ಯವಾದದ್ದು."

"ಇಂಥ ಗೂಢಮಾತು ನನಗೆ ತಿಳಿಯದು ತಾಯಿ. ನಾನೇನು ನಿಮ್ಮಷ್ಟು ಕಲಿತವಳಲ್ಲ. ಇದೆಲ್ಲಾ ನನಗೆ ಅರ್ಥವಾಗುವುದಿಲ್ಲ."

"ಅರ್ಥವಾಗದಿದ್ದರೂ ಚಿಂತೆಯಿಲ್ಲ. ಅದರ ಅಗತ್ಯವಾದರೂ ಏನಿದೆ ?"

"ಹಾಗಾದರೆ ನೀವು ಇಲ್ಲಿಗೆ ಬರುವದನ್ನು ಬಿಡುವದಿಲ್ಲ ಅನ್ನಿರಿ."

"ಇಲ್ಲ."

"ನೋಡಿರಿ. ನನ್ನಿಂದಾಗಿ ನಿಮ್ಮ ಹೆಸರು ಕೆಡಬಾರದು, ನಿಮ್ಮ ಬಾಳು ಕೆಡಬಾರದು."

"ನಿನ್ನಿಂದಾಗಿ ನನ್ನದೇನೂ ಕೆಡುವದಿಲ್ಲ ಮಲಿಕಾ. ನಿಶ್ಚಿಂತಳಾಗಿರು."

"ಮತ್ತೆ ಇಲ್ಲಿಗೆ ಬರುವುದು ಬೇಡವೆಂದಿರಲಿಲ್ಲ ಮಲಿಕಾ. ತನ್ನ ಹಟದ ಎದುರು ಅವಳು ನಿರುಪಾಯಳಾಗಿದ್ದಳು.

ಅವಳ ತಾಯಿಗೆ ಮಾತ್ರ ತಾನಿಲ್ಲಿಗೆ ಬರುವುದು ಇಷ್ಟವಿರಲಿಲ್ಲ. ತನ್ನಿಂದ ಅವಳಿಗೆ ಹಣವಂತೂ ಸಿಕ್ಕುವಂತಿರಲಿಲ್ಲ ; ಅಷ್ಟು ಮಾತ್ರವಲ್ಲ, ತನ್ನಂಥ ಸಾಧಾರಣ ಜನರು ಇಲ್ಲಿಗೆ ಬರುವುದರಿಂದ ಮಲಿಕಾಳ ಕೀರ್ತಿ ಕೆಟ್ಟುಹೋಗುವು ದೆಂದೂ ಸೆಟ್ಟರು ಸಿರಿವಂತರು ಅವಳಿಗಾಗಿ ಬಾಯಿಬಾಯಿ ಬಿಡುವುದು ತಪ್ಪುವು ದೆಂದೂ ಅವಳು ಭಾವಿಸಿದ್ದಳು.

ತನ್ನ ಸ್ನೇಹವನ್ನು ಮುರಿದುಬಿಡುವಂತೆ ಅವಳು ಮಲಿಕಾಗೆ ಅನೇಕಬಾರಿ ಸೂಚಿಸಿದ್ದಳು, ಅತ್ತು ಕರೆದು ರಂಬಾಟ ಮಾಡಿದ್ದಳು. ಯಾವುದಕ್ಕೂ ಮಲಿಕಾ ಸೊಪ್ಪುಹಾಕಿರಲಿಲ್ಲ. ತಾಯಿಯ ವಿರೋಧ ಅಧಿಕವಾದ ಹಾಗೆ ಮಲಿಕಾಳ ಹಟವೂ ಅಧಿಕವಾಗುತ್ತ ಬಂದಿತ್ತು.

ಒಂದು ರಾತ್ರೆ ತಾನಿಲ್ಲಿ ಬಂದಿದ್ದ ಸಮಯದಲ್ಲಿಯೆ ನಗರದ ವಣಿಜಶ್ರೇಷ್ಠಿ ಯೊಬ್ಬ ಆಗಮಿಸಿದ್ದ. ಮಲಿಕಾಳ ತಾಯಿ ಅವನನ್ನು ಬರಮಾಡಿಕೊಂಡು ನಡುಮನೆಯಲ್ಲಿ ಕೂಡ್ರಿಸಿ ಮಗಳನ್ನು ಕರೆಯಲು ಬಂದಿದ್ದಳು. ತನ್ನನ್ನು ಬಿಟ್ಟು ಅವನ ಹತ್ತಿರ ಮಲಿಕಾ ಹೋಗಲು ಒಪ್ಪಿರಲಿಲ್ಲ. ತಾಯಿಗೂ ಮಗಳಿಗೂ ಭಾರೀ ಜಗಳವಾಗಿತ್ತು. ವಣಿಜಶ್ರೇಷ್ಠಿ ಅಸಂತುಷ್ಟನಾಗಿ, ಮತ್ತೊಮ್ಮೆ ಇಲ್ಲಿಗೆ ಬರುವುದಿಲ್ಲವೆಂದು ಹೇಳಿ ಎದ್ದುಹೋಗಿದ್ದ.

"ನಮ್ಮ ಬಾಳುವೆ ಹಾಳುಮಾಡುವುದಕ್ಕೇ ಬಂದಿಯಾ ನೀನು! ಹೊರಟು ನಡೆ ಇಲ್ಲಿಂದ!" ಎಂದು ಮಲಿಕಾಳ ತಾಯಿ ತನ್ನನ್ನು ಗದರಿಸಿದ್ದಳು.

"ಇವರಿಗೆ ನೀನು ಹೀಗೆಲ್ಲಾ ಅನ್ನುವದಾದರೆ ನಾನು ಇಲ್ಲಿರುವದೇ ಇಲ್ಲ. ಇವರ ಸಂಗಡವೇ ಹೋಗಿಬಿಡ್ತೇನೆ," ಎಂದು ಮಲಿಕಾ ನಿಶ್ಚಯದ ಧ್ವನಿಯಲ್ಲಿ ತಾಯಿಗೆ ಎಚ್ಚರಿಕೆಯಿತ್ತಿದ್ದಳು.

"ಇವರ ಸಂಗಡ ಹೋಗಿ ಏನು ಮಾಡುವಾಕೆ? ಇವರ ತಂದೆ ನಿನ್ನನ್ನು ಮನೆಯಲ್ಲಿ ಕರಕೊಳ್ಳುವರೆಂದು ತಿಳಿದೀಯಾ!"

"ಅವರು ಕರೆದುಕೊಳ್ಳದಿದ್ದರೆ ಬೇರೆ ಮನೆ ಮಾಡಿ ನಾನಿವಳನ್ನು ಇಡು ತ್ತೇನೆ," ಎಂದು ತಾನು ಹೇಳಿದ್ದ.

"ನಿಮ್ಮನ್ನು ನೋಡಿ ಊರ ಮಂದಿ ನಗದಿರರೇ!"

"ನಕ್ಕರೆ ನಕ್ಕಾರು."

"ಅಯ್ಯೋ! ಹೇಳುವವರು ಕೇಳುವವರೂ ಯಾರೂ ಇಲ್ಲದಾಯಿತೇ? ಈ ಊರಲ್ಲಿ ರಾಜನಿದಾನೋ ಇಲ್ಲೋ? ಯಾವನೋ ಬಂದು ನನ್ನ ಮಗಳನ್ನು ಓಡಿಸಿಕೊಂಡು ಹೋಗಲು ಇದೇನು ಅರಣ್ಯವಾಯಿತೇ!" ಎಂದು ಮಲಿಕಾಳ ತಾಯಿ ರೋದಿಸಿದ್ದಳು.

ಮೂರನೆಯ ದಿನವೆ ಅವಳು ಅರಮನೆಗೆ ಹೋಗಿ ಕಾರಭಾರಿ ಕೃಷ್ಣಾಜಿ ಪಂತನನ್ನೂ, ದೊರೆಯ ಆಪ್ತಸೇವಕ ಬನ್ಯಾಬಾಪುವನ್ನೂ ಕರೆದು ತನ್ನ ವಿರುದ್ಧ ವಾಗಿ ದೂರಿಕೊಂಡಿದ್ದಳು. ಆ ದೂರು ರಾಘೋಬನ ಕಿವಿಗೂ ಮುಟ್ಟಿತ್ತು. ತನ್ನ ಏಳಿಗೆಯನ್ನು ಕಂಡು ಅಸೂಯೆಯಿಂದ ಕುದಿಯುತ್ತಿದ್ದ ಆ ತ್ರಿಮೂರ್ತಿಗಳು ಕೂಡಿ ಆಲೋಚಿಸಿ, ತನ್ನನ್ನು ಮಟ್ಟಹಾಕಲು ಅದೊಂದು ಸುಸಂದರ್ಭವೆಂದು ಸಂತುಷ್ಟರಾಗಿ ದೂರನ್ನು ದೊರೆಯ ಕಿವಿಯ ಮೇಲೆ ಹಾಕಿದ್ದರು....

ವಿಚಾರಣೆ ನಡಸುವುದಕ್ಕೆಂದು ಮಲಿಕಾಳನ್ನು ಅರಮನೆಗೆ ಬರಮಾಡಿಕೊಂಡ ದೊರೆ ಅವಳ ರೂಪುಲಾವಣ್ಯಗಳಿಗೆ ಮನಸೋತು, ವಿಚಾರಣೆಯನ್ನು ಅಷ್ಟಕ್ಕೇ ನಿಲ್ಲಿಸಿ, ಅವಳನ್ನು ತನಗೇ ಒಪ್ಪಿಸುವಂತೆ ಅವಳ ತಾಯಿಯನ್ನು ಕೇಳಿಕೊಂಡಿದ್ದ. ಸ್ವಯಂ ದೊರೆಯೇ ಬುಟ್ಟಿಗೆ ಬೀಳುವೆನೆಂದಾಗ ಅವಳು ಬೇಡವೆನ್ನುವಳೆ? ಮಲಿಕಾ ತನ್ನ ಅಸಮ್ಮತಿಯನ್ನು ಸೂಚಿಸಿದಳಾದರೂ ದೊರೆಯ ಎದುರು ಅವಳು ಪ್ರತಿಭಟಿಸುವಂತಿರಲಿಲ್ಲ. ಇಚ್ಛೆಗೆ ವಿರುದ್ಧವಾಗಿಯಾದರೂ ಅವಳು ಅರಸನ ಸೂಳೆಯಾಗಲೇಬೇಕಾಗಿ ಬಂದಿತ್ತು.

ಒಂದೆರಡು ತಿಂಗಳುಗಳ ವರೆಗೂ ಅವಳು ತನ್ನ ಮನೆಗೆ ಬಂದಿರಲೇ ಇಲ್ಲ. ಅರಮನೆಯಲ್ಲಿಯೆ ಒಂದು ಭಾಗವನ್ನು ಅವಳಿಗಾಗಿ ಸಜ್ಜುಗೊಳಿಸಿ ಕೊಡಲಾಗಿತ್ತು. ಅವಳ ಜತೆಯಲ್ಲಿದ್ದ ಅವಳ ವಿಶ್ವಾಸದ ದಾಸಿ ಕಾಮಾಕ್ಷಿ ಒಂದು ದಿನ ತನಗೆ ಬೀದಿಯಲ್ಲಿ ಭೆಟ್ಟಿಯಾಗಿ ತನ್ನ ಒಡತಿಯ ಸಂದೇಶ ಮುಟ್ಟಿಸಿದ್ದಳು.

"ಇನ್ನು ಒಂದೆರಡು ವಾರಗಳಲ್ಲೇ ದೊರೆಯ ಅಪ್ಪಣೆ ಪಡೆದು ಒಡತಿಯರು ಮನೆಗೆ ಬರಬಹುದು. ನಿಮ್ಮ ಇಚ್ಛೆಯಿದ್ದರೆ ಅವರು ನಿಮ್ಮೊಡನೆ ಹೊರಟು ಬರಲು ಸಿದ್ಧರಿದ್ದಾರೆ."

ಮುಂದೆ ಒಂದೆರಡು ದಿನಗಳಲ್ಲಿಯೆ ತಾನು ಸೈನ್ಯದ ಕೆಲಸದಿಂದಲೂ ಹೊರ ಬೀಳಬೇಕಾಗಿ ಬಂದಿತ್ತು. ತನ್ನಂಥ ಕೀಳುಜಾತಿಯವನ ಕೈಕೆಳಗೆ ಕೆಲಸ ಮಾಡು ವುದು ಅವಹೇಳನಕರವೆಂದು ಭಾವಿಸಿದ್ದ ರಾಘೋಬ, ತನ್ನ ವಿಚಾರವಾಗಿ ದೊರೆಯ ಮನಸ್ಸು ಕೆಡಿಸಿ ಸೇನಾಪತಿಯ ಸ್ಥಾನವನ್ನು ತಾನೇ ದೊರಕಿಸಿಕೊಂಡಿದ್ದ. ಅವನ

ಕೈಕೆಳಗೆ ಉಪಸೇನಾಪತಿಯಾಗಿ ಕೆಲಸ ಮಾಡಿಕೊಂಡಿರಬೇಕೆಂದು ತನಗೆ ಅಪ್ಪಣೆ ಯಾಗಿತ್ತು. ರಾಘೋಬ, ಕಾರಭಾರಿ ಕೃಷ್ಣಾಜಿಪಂತ, ಮುತ್ಸದ್ದಿ ರಾಮರಾವ್, ಎಲ್ಲರೂ ಒಂದೇ ಜಾತಿಯ ಜನರು; ಅರಸನೂ ಅದೇ ಜಾತಿಗೆ ಸೇರಿದವನು. ದರಬಾರದಲ್ಲೆಲ್ಲ ಅವರದೇ ಕಾರಭಾರ. ಅಷ್ಟು ದಿನಗಳವರೆಗೆ ಸೈನ್ಯದಲ್ಲಿ ಮಾತ್ರ ಆ ಜಾತೀಯ ಪಕ್ಷಪಾತ ನಡೆದಿರಲಿಲ್ಲ; ಆಗ ಅಲ್ಲಿಯೂ ಆರಂಭವಾಗಿತ್ತು.

ಸೇನಾನಾಯಕನ ಪದವಿಯಲ್ಲಿದ್ದ ತನ್ನನ್ನು, ವಿನಾಕಾರಣವಾಗಿ ಆ ಸ್ಥಾನ ದಿಂದ ದೂರಗೊಳಿಸಿ ಕಡಮೆ ದರ್ಜೆಯ ಸ್ಥಾನಕ್ಕಿಳಿಸಿದುದು ಮಹಾ ಅನ್ಯಾಯ ವಾಗಿತ್ತು. ಅದರಿಂದಾಗಿ ತನಗೆ ವೈಯಕ್ತಿಕವಾಗಿ ಅವಮಾನವೂ ಆಗಿತ್ತು. ಆ ಅವಮಾನವನ್ನೂ ಅನ್ಯಾಯವನ್ನೂ ಸಹಿಸಿಕೊಂಡು ಅಲ್ಲಿಯೆ ಇರುವುದೆಂದರೆ ತನ್ನ ಪೌರುಷಕ್ಕೆ ಕಲಂಕವನ್ನುಂಟುಮಾಡುವ ವಿಚಾರವೇ ಆಗಿತ್ತು.

ತನ್ನ ಮೇಲೆ ನಡೆದ ಅನ್ಯಾಯವನ್ನು ಕಂಡು ಸೈನಿಕರಿಗೂ ಅಸಮಾಧಾನ ವಾಗಿತ್ತು. ತನ್ನ ಸ್ನೇಹಿತರಂತೂ ರೋಷದಿಂದ ತಳಮಳಿಸುತ್ತಿದ್ದರು. ರಾಘೋಬನ ವಿರುದ್ಧ ಬಂಡೆದ್ದು ಅವನನ್ನು ಕಡಿದುಹಾಕಬೇಕೆಂಬ ವಿಚಾರವನ್ನೂ ಅನೇಕರು ಸೂಚಿಸಿದ್ದರು. ತಾವು ಮನಸ್ಸು ಮಾಡಿದ್ದರೆ ಅದೇನು ದೊಡ್ಡ ಕೆಲಸವಾಗಿರಲಿಲ್ಲ. ಆದರೆ, ರಾಘೋಬನಂಥ ಹೇಡಿಯನ್ನು ಹೊಡೆಯುವ ವಿಚಾರ ತನಗೇ ಸರಿಬಂದಿರ ಲಿಲ್ಲ. ಎಂತಲೇ, ಕೆಲಸವನ್ನು ತ್ಯಜಿಸಿ ಮಲಿಕಾಳನ್ನು ಕರೆದುಕೊಂಡು ಯಾವುದಾದ ರೊಂದು ದೂರದ ಊರಿಗೆ ಹೋಗುವುದೆಂದು ತಾನು ಯೋಚಿಸಿಕೊಂಡಿದ್ದ.

ಆ ಪ್ರಕಾರ ಕೆಲಸವನ್ನೇನೊ ಬಿಟ್ಟುಕೊಟ್ಟುದುದಾಗಿತ್ತು. ಊರು ಬಿಟ್ಟು ಹೊರಡುವ ಸಿದ್ಧತೆಯನ್ನೂ ಮಾಡಿ ಮಲಿಕಾ ಮನೆಗೆ ಬರುವುದನ್ನೆ ಕಾಯುತ್ತ ಕುಳಿತಿದ್ದ ಹಾಗೆ, ತಾವಿಬ್ಬರೂ ಕೂಡಿ ಊರು ಬಿಡುವುದರಲ್ಲಿದ್ದ ವಾರ್ತೆ ಯಾರ ಮುಖಾಂತರವಾಗಿಯೋ ದೊರೆಗೆ ತಿಳಿದಿತ್ತು. ಸರಿ. ಮೂರು ನಾಲ್ಕು ತಿಂಗಳು ಕಳೆದುಹೋದರೂ ಮಲಿಕಾ ಮನೆಗೆ ಬಂದಿರಲಿಲ್ಲ.

"ಮಲಿಕಾ ಬರುವಳೋ ಇಲ್ಲವೋ ?" ಎಂದು, ತಾನೊಮ್ಮೆ ಕಾಮಾಕ್ಷಿ ಯನ್ನು ಕೇಳಿದ್ದ, ಅವಳ ಭೆಟ್ಟಿಯಾದಾಗ.

"ಸದ್ಯಕ್ಕಂತೂ ದೊರೆಗಳು ಆಕೆಯನ್ನು ಬಿಡುವಂತೆ ಕಾಣುವದಿಲ್ಲ," ಎಂದು ಕಾಮಾಕ್ಷಿ ಹೇಳಿದ್ದಳು.

ನಿರುದ್ಯೋಗಿಯಾಗಿ ಸೋಮಾರಿತನದಿಂದ ಕಾಲ ಕಳೆಯುವುದೆಂದರೆ ತನ ಗೊಂದು ಸಂಕಟದಂತಾಗಿತ್ತು. ಮತ್ತೆ ಬಹಳ ದಿನ ಇಲ್ಲಿಯೆ ಕೂಡ್ರುವಂತಿರಲಿಲ್ಲ.

ಒಂದು ದಿನ ತಂದೆಯ ಅಪ್ಪಣೆ ಪಡೆದು ಊರು ತ್ಯಜಿಸಿ ಹೊರಟುದುವಾಗಿತ್ತು. ಅಲ್ಲಿ ಇಲ್ಲಿ ಅಲೆದು ಕೊನೆಗೆ ಜಮುಖಂಡಿಗೆ ಹೋಗಿ ಅಲ್ಲಿಯ ಸೇನಾಪತಿಯಾದ ಭೋಟೂಸಿಂಗನ ವಿಶ್ವಾಸ ಸಂಪಾದಿಸಿ ಅವನ ಹತ್ತಿರವೆ ನೆಲೆಸಿದುದಾಗಿತ್ತು. ಜಮುಖಂಡಿಯಲ್ಲಿನ ತನ್ನ ಎರಡು ವರ್ಷಗಳು ನೆಮ್ಮದಿಯಿಂದಲೇ ಕಳೆದಿದ್ದುವು. ಭೋಟೂಸಿಂಗನಿಗೂ ತನಗೂ ತುಂಬಾ ಹೊಂದಿಕೆಯಾಗಿತ್ತು. ಅವನೂ ವೀರಪುರುಷ, ಧೈರ್ಯಶಾಲಿ, ಸಮರಪ್ರೇಮಿ, ಸ್ವಾತಂತ್ರ್ಯಪ್ರೇಮಿ. ಎಂತಲೇ ಅವನೊಡನೆ ಗಾಢಸ್ನೇಹ ಬೆಳೆದಿತ್ತು.

ರಾಘೋಬ, ಕೃಷ್ಣಾಜಿ, ಬನ್ಯಾಬಾಪುವಿನ ಜಾತಿಯ ಜನರು ಅಲ್ಲಿಯೂ ಇಲ್ಲದಿರಲಿಲ್ಲ. ಅಲ್ಲಿಯ ದೊರೆಯೂ ಅದೇ ಜಾತಿಯವನೆ. ಆದರೂ, ಭೋಟೂಸಿಂಗನ ಮೇಲೂ ತನ್ನ ಮೇಲೂ ಆ ದೊರೆಗೆ ಪೂರ್ಣ ವಿಶ್ವಾಸವಿತ್ತು. ಧರಬಾರದ ಇತರ ಅಧಿಕಾರಿಗಳಿಗೆ ಅದು ಸಹನವಾಗಲಿಲ್ಲ....ಅವರೆಲ್ಲಾ ಸೇರಿ ವೀರಾಗ್ರಣಿ ಭೋಟೂಸಿಂಗನನ್ನು ತೀರಿಸಿಬಿಟ್ಟರು. ದೊರೆಯನ್ನು ನಂಬಿ ತಲೆಯನ್ನು ಕಳೆದುಕೊಂಡ ಭೋಟೂಸಿಂಗ್....ಎಂಥ ವಿಶ್ವಾಸಘಾತ....ಎಂಥ ಮೋಸ....

ರಾಜಶೇಖರ ಅಸ್ವಸ್ಥನಾಗಿ ಮಗ್ಗಲು ಬದಲಿಸಿದ. ಅವನ ಮುಖದಿಂದ ನೀಳವಾದ ಬಿಸಿಯುಸಿರೊಂದು ಹೊರಬಂದಿತು. ಅವನಿಗೆ ನಿದ್ದೆ ಬಂದಿರಬಹುದೆಂದು ಭಾವಿಸಿ ತಾನೂ ನಿದ್ರಿಸಲು ಯತ್ನಿಸುತ್ತಿದ್ದ ಮಲಿಕಾ ಅಚ್ಚರಿಯಿಂದ ಕೇಳಿದ್ದಳು :

" ಇನ್ನೂ ನಿದ್ದೆ ಬರಲಿಲ್ಲವೇನ್ರೀ ನಿಮಗೆ ?"

" ಇಲ್ಲ ಮಲಿಕಾ. ನೀನು ಮಲಗಿಕೋ."

" ಉಹೂಂ. ನನಗೂ ನಿದ್ದೆ ಬರಲೊಲ್ಲದು. ಅದೇನ್ರಿ, ಏನು ವಿಚಾರ ಮಾಡುತ್ತಾ ಇದೀರಿ ?"

" ವಿಚಾರ ? ತಲೆಯಲ್ಲಿ ಸ್ಥಳವೂ ಉಳಿಯದಷ್ಟು ವಿಚಾರ ಮಲಿಕಾ."

" ಅದೇನು, ನನಗೂ ಹೇಳಬಾರದೇ ?"

" ಏನೆಂದು ಹೇಳಲಿ ಮಲಿಕಾ ? ಹೇಗೆ ಹೇಳಲಿ ?"

" ಯಾಕೋ ನಿಮಗೆ ಬೇಸರವಾದಂತಿದೆ."

" ಹೌದು. ಬೇಸರವಾಗಿದೆ, ಲೋಕದ ರೀತಿ ನೋಡಿ."

" ಜಮುಖಂಡಿಯಲ್ಲಿ ಬಹಳ ಕಷ್ಟಪಟ್ಟಿರಾ ?"

"ಊಹೂಂ. ನಾನೇನು ಕಷ್ಟಪಡಲಿಲ್ಲ. ಒಂದುವೇಳೆ ಕಷ್ಟ ಬಂದರೂ ನಾನು ಚಿಂತೆ ಮಾಡುವಾತನಲ್ಲ. ನನ್ನ ಮಿತ್ರನೊಬ್ಬನಿಗೆ ಮಾತ್ರ ಭಯಂಕರ ಪ್ರಸಂಗವೊಂದು ಬಂತು."

"ಯಾರು ಆ ಮಿತ್ರ ?"

"ಭೋಟೋಸಿಂಗ್ ಅಂತ ಅವನ ಹೆಸರು. ಮಹಾ ಪರಾಕ್ರಮಿ. ಜಮಖಂಡಿಯ ಸೇನಾನಾಯಕನಾಗಿದ್ದ. ಅವನ ಜತೆಯಲ್ಲೇ ನಾನೂ ಇದ್ದೆ. ಇಲ್ಲಿ ರಾಘೋಬನ ಜಾತಿಯ ಜನರು ನನಗೆ ಘಾತ ಮಾಡಿದ ಹಾಗೆ ಅಲ್ಲಿಯೂ ಅದೇ ಜಾತಿಯವರು ಭೋಟೋಸಿಂಗನಿಗೆ ಘಾತ ಮಾಡಿದರು."

"ಅಂದರೆ ? ಅವನ ಪ್ರಾಣಕ್ಕೇನಾದರೂ ಆಯಿತೇ ?"

"ಅದಕ್ಕೇ ಬಂತಲ್ಲ ಕುತ್ತು ! ಸರಕಾರದವರು ಅವನನ್ನು ಹಿಡಿದು ಗಲ್ಲಿಗೇರಿಸಿದರು.

"ಯಾವ ಸರಕಾರದವರು ?"

"ಇಂಗ್ರೇಜಿ ಸರಕಾರದವರು. ದೇಶದಲ್ಲಿ ಎಷ್ಟೋ ಕಡೆ ಇಂಗ್ರೇಜರ ವಿರುದ್ಧ ಬಂಡು ಎದ್ದಿದೆ. ನಿನಗೂ ಗೊತ್ತಿರಬಹುದಲ್ಲ ?"

"ಸ್ವಲ್ಪ ಸ್ವಲ್ಪ ಕೇಳಿದ್ದೇನೆ. ನಮ್ಮ ದೊರೆಗಳೂ ಬಂಡು ಮಾಡುವ ವಿಚಾರದಲ್ಲಿದ್ದಾರೆ ಅಂತ ಸುದ್ದಿಯಿದೆ. ಅದಕ್ಕೇ ಈಗ ಆರೇಳು ತಿಂಗಳಿಂದ ನನ್ನ ಕಡೆಗೆ ಅವರ ಲಕ್ಷ್ಯವಿಲ್ಲ."

"ಹಾಗಿದ್ದರೆ ಬಂಡಿನ ಸುದ್ದಿ ನಿಜವಿರಬಹುದು. ಆದರೂ ಈ ಮಂದಿಯನ್ನು ನಂಬುವಂತಿಲ್ಲ ಮಲಿಕಾ. ಇವರನ್ನು ನಂಬಿಯೇ ಭೋಟೋಸಿಂಗ್ ಪ್ರಾಣ ಕಳೆದುಕೊಂಡ. ಅಲ್ಲಿ ಏನಾಯಿತು ಅಂದಿ....ಈ ಸಣ್ಣ ಪುಟ್ಟ ರಾಜರಿಗೆಲ್ಲಾ ಒಂದಿಲ್ಲೊಂದು ಕಾರಣದಿಂದ ಇಂಗ್ರೇಜರ ಮೇಲೆ ಸಿಟ್ಟು. ಅವರ ವಿರುದ್ಧ ಯುದ್ಧ ಮಾಡಬೇಕೆಂದು ಜಮಖಂಡಿಯ ರಾಜಾಸಾಹೇಬರೂ ನಿಶ್ಚಯಿಸಿ ಭೋಟೋಸಿಂಗನ ಸಲಹೆ ಕೇಳಿದ್ದರು. ವೀರ ರಜಪೂತ ರಕ್ತ ಹರಿಯುತ್ತಿತ್ತು ಅವನ ದೇಹದಲ್ಲಿ. ಬಂಡಾಯ ಅನ್ನುತ್ತಲೂ ಅವನಿಗೂ ಹುರುಪು ಬಂತು. ಎಂಟು ಹತ್ತು ತಿಂಗಳ ಹಿಂದೆಯೆ ಯುದ್ಧದ ತಯಾರಿ ಸುರುಮಾಡಿದ್ದ. ಕೊಲ್ಹಾಪುರದ ಮಹಾರಾಜರೂ ಜಮಖಂಡಿಯ ರಾಜಾಸಾಹೇಬರೂ ಕೂಡಿ ಮಾತಾಡಿಕೊಂಡು ಮದ್ದುಗುಂಡು ಕೂಡಿಸಹತ್ತಿದ್ದರು. ಅಷ್ಟರಲ್ಲಿ ಯಾರದೋ ಪಿತೂರಿಯಿಂದ ಇಂಗ್ರೇಜರಿಗೆ ಅದರ ಸುಳುವು ತಿಳಿಯಿತು. ಅವರು ಆಗಿಂದಾಗ ಜಮಖಂಡಿಯ ರಾಜಾಸಾಹೇಬ

ರನ್ನು ಹಿಡಿದು ವೆಂಗುರ್ಲಾ ಸೆರೆಮನೆಯಲ್ಲಿಟ್ಟಿದ್ದರು, ಆಮೇಲೆ ಜಮಖಂಡಿಯಲ್ಲಿ ಮದ್ದು-ಗುಂಡಿನ ತಯಾರಿ ನಡೆದದ್ದು ನಿಜವೋ ಅಲ್ಲವೋ ಅನ್ನುವುದನ್ನು ತಿಳಿದು ಕೊಳ್ಳಲು ತಪಾಸು ನಡೆಸಿದರು. ಆಗಲೇ ಛೋಟೂಸಿಂಗನ ಮೇಲೂ ಸಂಶಯ ಬಂದಿರಬೇಕು. ಪಿತೂರಿ ಮಂದಿ ಅವನ ವಿರುದ್ಧ ಸಾಕ್ಷಿಯನ್ನು ಹೇಳಿರಬೇಕು. ಸರಿ. ಅವನನ್ನೂ ಹಿಡಿದರು ಇಂಗ್ರೇಜರು. ವಿಚಾರಣೆ ನಡೆಯಿತು. ಆ ವೀರಾಗ್ರಣಿ ಎಲ್ಲಾ ತಪ್ಪನ್ನೂ ತಾನೊಬ್ಬನೇ ಹೊತ್ತುಕೊಂಡು, "ಬಂಡು ಸುರುಮಾಡಿದವನು ನಾನೇ. ಇದರಲ್ಲಿ ನಮ್ಮ ರಾಜಾಸಾಹೇಬರದೇನೂ ತಪ್ಪಿಲ್ಲ" ಅಂತ ಹೇಳಿದ. ದರಬಾರದ ಅನೇಕ ಅಧಿಕಾರಿಗಳೂ ಎಲ್ಲಾ ದೋಷವನ್ನು ಛೋಟೂಸಿಂಗನ ಮೇಲೇ ಹೊರಿಸಿದರು. ಆಯ್ತು. ಅವನಿಗೆ ಫಾಸೀಶಿಕ್ಷೆಯಾಯ್ತು. ಜಮಖಂಡಿ ಯಲ್ಲಿಯೆ ಫಾಸಿ ಹಾಕಿದರು ಆ ಪುಣ್ಯಾತ್ಮನನ್ನು...."

"ರಾಜಾಸಾಹೇಬರಿಗೇನಾಯ್ತು ?"

"ಅವರಿಗೇನಾದೀತು ? ಅವರು ನಿರ್ದೋಷಿ ಅಂತ ತೀರ್ಮಾನಿಸಿ ಅವರನ್ನು ಬಿಟ್ಟುಬಿಟ್ಟರು."

"ಛೋಟೂಸಿಂಗನನ್ನುಳಿಸಲಿಕ್ಕೆ ಅವರೇನೂ ಪ್ರಯತ್ನ ಪಡಲಿಲ್ಲವೆ ?"

"ಅವರನ್ನುಳಿಸಲು ಯತ್ನಿಸಿದ್ದರೆ ಅವರ ಜೀವ ಉಳಿಯುತ್ತಿರಲಿಲ್ಲವಲ್ಲ ? ಎಲ್ಲಾ ತಪ್ಪು ತನ್ನದೇ ಅಂತ ಅವನು ಹೇಳಿದಾಗ ಇಂಗ್ರೇಜರು ರಾಜಾಸಾಹೇಬ ರನ್ನು ಕರೆಯಿಸಿ ಜವಾಬು ಕೇಳಿದರು. "ಅವನೇ ಒಪ್ಪಿಕೊಂಡಿದ್ದಾನೆ ಅಂದ ಮೇಲೆ ನಾನೇನು ಹೇಳಲಿ ?" ಅಂದರು ಅವರು. ಬಂಡು ಹೂಡಲು ನಿಶ್ಚಯಿಸಿದ ವರು ತಾವೇ ಅನ್ನುವುದನ್ನು ಅವರು ಮುಚ್ಚಿಕೊಂಡರು. ಆ ಶೂರಪುರುಷನನ್ನು ಬಲಿಕೊಟ್ಟು ತಮ್ಮ ಪ್ರಾಣ ಉಳಿಸಿಕೊಂಡರು."

"ನಿಮ್ಮ ಮೇಲೂ ಸಂಶಯ ಬಂದಿರಬೇಕಲ್ಲ ಸರಕಾರದವರಿಗೆ ?"

"ನಾನು ಛೋಟೂಸಿಂಗನ ವಿಶ್ವಾಸದ ಗೆಳೆಯ. ಕೈಕೆಳಗಿನ ಅಧಿಕಾರಿ. ಹೌದು. ನನ್ನ ಮೇಲೂ ಸಂಶಯವಿದ್ದೇ ಇತ್ತು ಅವರಿಗೆ. ಆದರೂ ಯಾಕೋ ಏನೋ ನನ್ನನ್ನು ಹಿಡಿಯಲಿಲ್ಲ."

೪

ತಾನು ವೇಶ್ಯೆಯ ಮನೆಗೆ ಹೋಗಿಬರುವ ವಿಚಾರ ಯಾರಿಗೂ ತಿಳಿಯ ಬಾರದೆಂಬ ಉದ್ದೇಶದಿಂದ, ಕಾರಿಭಾರಿ ಕೃಷ್ಣಾಜಿಪಂತ ಜೋಶಿ ಅಲ್ಲಿಗೆ ಹೋಗು ವಾಗಲೆಲ್ಲಾ ಒಬ್ಬನೇ ಹೋಗುತ್ತಿದ್ದ. ಊರೆಲ್ಲಾ ಮಲಗಿ ನಿದ್ರಿಸುವ ಸಮಯ ದಲ್ಲಿ ಹೋಗಿ ಬೆಳಗಾಗುವುದರೊಳಗಾಗಿಯೆ ಹಿಂದಿರುಗಿ ಬರುತ್ತಿದ್ದ. ಆತ ವೇಶ್ಯಾಗೃಹಕ್ಕೆ ಹೋಗುತ್ತಿದ್ದ ವಿಚಾರ ಅವನ ಆಪ್ತ ಸೇವಕರಿಗೂ ಕೂಡ ಗೊತ್ತಿರಲಿಲ್ಲ.

ಯಾರಿಗೂ ಗೊತ್ತಿರದಿದ್ದ ಕೃಷ್ಣಾಜಿಪಂತನ ಆ ಗುಟ್ಟು, ಅವನ ಪರಮ ಮಿತ್ರನೂ, ರಾಜಾಸಾಹೇಬನ ಅಂತರಂಗದ ಸೇವಕನೂ ಆದ ಬನ್ಯಾಬಾಪು ವೊಬ್ಬನಿಗೆ ಮಾತ್ರ ಗೊತ್ತಿತ್ತು. ತನ್ನ ಗುಟ್ಟು ಬನ್ಯಾಬಾಪುವಿಗೆ ತಿಳಿದಿರಬಹು ದೆಂಬ ವಿಚಾರ ಮಾತ್ರ ಕೃಷ್ಣಾಜಿಪಂತನಿಗೆ ಹೊಳೆದಿರಲಿಲ್ಲ. ಈ ಒಂದು ವಿಷಯ ಅವನಿಗೂ ಗೊತ್ತಾಗದಂತೆ ಜಾಗರೂಕತೆ ವಹಿಸಿಕೊಂಡು ಬಂದಿದ್ದ ಕೃಷ್ಣಾಜಿ. ಆದರೆ, ಎಂಥ ಗುಟ್ಟಿನ ವಿಷಯಗಳನ್ನೂ ಗುಟ್ಟಿನಿಂದಲೇ ಕಂಡುಹಿಡಿಯುವ ವಸ್ತಾದಿ ಬನ್ಯಾಬಾಪು. ನಗರದ ಅನೇಕ ಜನರ ಹಿಂದೆ ಆತ ಗೂಢಚಾರರನ್ನು ಬಿಟ್ಟಿದ್ದ ಹಾಗೆ ಕೃಷ್ಣಾಜಿಯ ಹಿಂದೆಯೂ ಒಬ್ಬಿಬ್ಬರನ್ನು ಬಿಟ್ಟಿದ್ದ. ರಾತ್ರಿ ಕಾಲದಲ್ಲಿ ಆ ಗೂಢಚಾರರು ಸರಿಯಾಗಿ ಕೆಲಸ ಮಾಡಲಿಕ್ಕಿಲ್ಲವೆಂದುಕೊಂಡು ಸ್ವಯಂ ಬನ್ಯಾಬಾಪುವೂ ಆಗಾಗ ವೇಷ ಬದಲಿಸಿಕೊಂಡು ಊರಿನಲ್ಲಿ ತಿರುಗು ತ್ತಿದ್ದುದಿತ್ತು.

ಎಂತಲೇ, ಮಲಿಕಾಸಾನಿಯ ಮನೆಗೆ ಕೃಷ್ಣಾಜಿ ಹೋಗಿಬರುತ್ತಿದ್ದುದೂ ಬನ್ಯಾಬಾಪುವಿಗೆ ತಿಳಿದಿತ್ತು. ಆ ರಾತ್ರಿ ಕೃಷ್ಣಾಜಿಗೊದಗಿದ ಗತಿಯೂ ಗೊತ್ತಾ ಗಿತ್ತು. ಕೃಷ್ಣಾಜಿ ಮಲಿಕಾಳಲ್ಲಿಗೆ ಹೋಗಿಬರುವುದು ಬನ್ಯಾಬಾಪುವಿಗೆ ಎಷ್ಟು ಮಾತ್ರಕ್ಕೂ ಸರಿಬಂದಿರಲಿಲ್ಲ. ಮುತ್ಸದ್ದಿಗಳೂ ಕಾರುಭಾರಿಗಳೂ ರಾಜಕಾರಿಣಿ ಗಳೂ ಆದ ತಮ್ಮಂಥವರು ಅಂಥ ಸ್ತ್ರೀಯರ ಮೋಹಜಾಲಕ್ಕೆ ಸಿಲುಕಿಕೊಳ್ಳುವುದು ಮೂರ್ಖತನವೆಂದೇ ಆತ ಭಾವಿಸಿದ್ದ. ಅಲ್ಲದೆ, ಉಚ್ಚಕುಲದವನಾದ ಕೃಷ್ಣಾಜಿ ಅಂಥ ನೀಚಕುಲದ ವಾರಾಂಗನೆಯ ಸಹವಾಸ ಮಾಡಿ ಜಾತಿ ಕೆಡಿಸಿಕೊಳ್ಳು ವುದನ್ನೂ ಬನ್ಯಾಬಾಪು ಸಹಿಸುತ್ತಿರಲಿಲ್ಲ. ಅಂತೆಯೆ, ಮಲಿಕಾಳ ಮನೆಯೆದುರು

ಕೃಷ್ಣಾಜಿಗೆ ಏಟು ಬಿದ್ದುದೂ ಒಂದು ರೀತಿಯಿಂದ ಒಳ್ಳೆಯದಾಯಿತೆಂದೇ ಆತ ಅಂದುಕೊಂಡ.

ಆದರೂ ಆ ಪ್ರಸಂಗದಿಂದ ಬನ್ಯಾಬಾಪುವಿಗೆ ಅಂಥ ಸಂತೋಷವೇನೂ ಉಂಟಾಗುವಂತಿರಲಿಲ್ಲ. ಕೃಷ್ಣಾಜಿಗೆ ಏಟು ಬಿತ್ತು. ಸರಿಯೆ. ಅವನಿಗೆ ಬುದ್ಧಿ ಬಂದರೂ ಬರಬಹುದು. ಅಥವಾ ಅವನ ಹಟ ಇನ್ನೂ ಅಧಿಕವಾಗಬಹುದು. ಒಂದು ರಾಜ್ಯದ ಕಾರಭಾರಿಯಾಗಿರುವ ಕೃಷ್ಣಾಜಿ ಅಂಥ ಅವಮಾನವನ್ನು ಸುಮ್ಮನೆ ಸಹಿಸಿಕೊಳ್ಳುವುದುಂಟೇ ?

ತಾನೂ ಕೂಡಾ ಈ ಪ್ರಕರಣವನ್ನು ಇಷ್ಟಕ್ಕೇ ಕೈಬಿಡುವುದು ತನಗೂ ಅಪಾಯಕಾರಿಯೆಂದು ಬನ್ಯಾಬಾಪುವಿಗೆ ಹೊಳೆಯಿತು. ಅತ್ಯಂತಮಹತ್ವದವಿಷಯ ವೊಂದರಲ್ಲಿ ಕೃಷ್ಣಾಜಿಯೂ ತಾನೂ ಒಟ್ಟುಗೂಡಿ ಕೆಲಸ ಮಾಡುತ್ತಿರುವವರು. ತಾವಿಬ್ಬರೂ ಸುರಕ್ಷಿತವಾಗಿದ್ದರೆ ಮಾತ್ರ ಆ ಕೆಲಸ ನೆರವೇರಬಹುದು. ಇಬ್ಬರಲ್ಲಿ ಯಾರೊಬ್ಬರಿಗೆ ಅಪಾಯವೊದಗಿದರೂ ಅದರಿಂದ ಇಬ್ಬರಿಗೂ ಹಾನಿಯಾಗು ವುದು. ಅಂತೆಯೆ, ಕೃಷ್ಣಾಜಿಯನ್ನು ಅವನ ಅವಿವೇಕದಿಂದ ರಕ್ಷಿಸುವುದೂ ಕೂಡಾ ತನ್ನ ಹಿತದ ದೃಷ್ಟಿಯಿಂದ ಅವಶ್ಯವೆಂದೇ ಬನ್ಯಾಬಾಪುವಿಗನ್ನಿಸಿತು. ಕೃಷ್ಣಾಜಿಗೆ ಗೊತ್ತಿರದಿದ್ದ ಅನೇಕ ಸಂಗತಿಗಳೂ ಬನ್ಯಾಬಾಪುವಿಗೆ ಗೊತ್ತಿದ್ದುವು. ಮುನ್ನಾ ದಿನದ ರಾತ್ರೆ ಮಲ್ಲಿಕಾಳ ಮನೆಯಲ್ಲಿ ಇದ್ದವರಾರೆಂಬುದೂ ಅವನಿಗೆ ತಿಳಿದಿತ್ತು. ಕೃಷ್ಣಾಜಿಯ ಕತ್ತು ಹಿಡಿದು ತಳ್ಳಿದವರಾರೆಂಬುದೂ ಅವನಿಗೆ ತಿಳಿದಿತ್ತು. ಆ ಎರಡು ವ್ಯಕ್ತಿಗಳಿಂದ ತಮಗೆ ಗಂಡಾಂತರವುಂಟೆಂದೂ ಅವನಿಗನ್ನಿಸಿತ್ತು. ಅಂತೆಯೆ, ಸಾಧ್ಯವಾದಷ್ಟು ಶೀಘ್ರವಾಗಿ ಅವರ ಪಾರುಪತ್ಯ ಮಾಡುವುದು ಮುತ್ಸದ್ದಿತನದ ಮಾರ್ಗವೆಂದು ಬಗೆದು ತ್ವರಿತವಾಗಿ ಚಟುವಟಿಕೆಗಾರಂಭಿಸಿದ ಬನ್ಯಾಬಾಪು.

ತನ್ನ ಮುತ್ಸದ್ದಿತನದ ಬಗೆಗೆ ಬನ್ಯಾಬಾಪುವಿಗೆ ಬಹಳ ಹೆಮ್ಮೆ. ತನ್ನಂಥ ತೀಕ್ಷ್ಣಬುದ್ಧಿಯ ವ್ಯಕ್ತಿಗಳು ನರಗುಂದದ ದರಬಾರದಲ್ಲಿಯೆ ಬೇರೊಬ್ಬ ರಿಲ್ಲವೆಂದು ಆತ ಮನಃಪೂರ್ವಕವಾಗಿ ನಂಬಿಕೊಂಡಿದ್ದ. ಆತ ಬುದ್ಧಿವಂತನೂ ತಂತ್ರಗಾರನೂ ಆಗಿದ್ದುದೂ ನಿಜವೆ. ತನ್ನ ಮೂಲಸ್ಥಾನವಾದ ಕೊಂಕಣಪ್ರದೇಶ ದಿಂದ ಹೊಟ್ಟೆಯಪಾಡಿಗಾಗಿ ಹೊರಟು ನರಗುಂದಕ್ಕೆ ಬಂದಾಗ ಅಡುಗೆಯ ಭಟ್ಟನಾಗಿ ಅರಮನೆಯಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದ ಬನ್ಯಾಬಾಪು ತನ್ನ ತಂತ್ರ

ಗಾರಿಕೆಯ ಬಲದಿಂದಲೇ ರಾಜಾಸಾಹೇಬನ ಪ್ರೀತಿ ವಿಶ್ವಾಸ ಗಳಿಸಿ, ಕೆಲವೇ ವರ್ಷಗಳ ಅವಧಿಯಲ್ಲಿ ದೊರೆಯ ಆಪ್ತಸೇವಕನ ಸ್ಥಾನಕ್ಕೇರಿದ್ದ. ಅವನ ಶೀಘ್ರ ಪ್ರಗತಿಯನ್ನು ಕಂಡು ಕಾರಭಾರಿ ಕೃಷ್ಣಾಜಿ, ಮುತ್ಸದ್ದಿ ರಾಮರಾಯ, ಸೇನಾಪತಿ ರಾಘೋಪಂತರಿಗೂ ಅಚ್ಚರಿಯಾಗಿತ್ತು. ಅವನಿಂದಾಗಿ ತಮ್ಮ ಸ್ಥಾನಮಾನ ಗಳಿಗೂ ಎಲ್ಲಿ ಕಲ್ಲು ಬೀಳುವುದೊ ಎಂದು ಅವರಿಗೆ ಆಶಂಕೆಯೂ ಉಂಟಾಗಿತ್ತು.

ಬನ್ಯಾಬಾಪು ಅತ್ಯಂತ ಮಹತ್ವಾಕಾಂಕ್ಷಿ ಮನುಷ್ಯ. ದೊರೆಯ ಆಪ್ತ ಸೇವಕನಾದ ಮಾತ್ರಕ್ಕೇ ಆತ ತೃಪ್ತಿಪಟ್ಟುಕೊಳ್ಳದೆ, ದರಬಾರದಲ್ಲೆಲ್ಲ ಅತ್ಯಂತ ಶ್ರೇಷ್ಠವಾದ ಮುಖ್ಯ ಮಂತ್ರಿಯ ಸ್ಥಾನಕ್ಕೇರಬೇಕೆಂದು ನಿಶ್ಚಯಿಸಿ ಅದಕ್ಕಾಗಿ ಯತ್ನಿಸುತ್ತಲೂ ಇದ್ದ. ಸಂದರ್ಭ ದೊರೆತಾಗಲೆಲ್ಲಾ ರಾಮರಾಯನ ವಿಚಾರವಾಗಿ ಅಲ್ಲದ ಸಲ್ಲದ ಮಾತುಗಳನ್ನು ದೊರೆಯ ಕಿವಿಗೆ ತುಂಬುತ್ತಿದ್ದ. ರಾಜಕಾರಣದಲ್ಲಿ ರಾಮರಾಯನಿಗಿಂತ ತಾನೇ ಸಮರ್ಥನೆಂಬುದನ್ನು ದೊರೆಗೆ ಮನವರಿಕೆ ಮಾಡಲು ಪರಿಪರಿಯಾಗಿ ಯತ್ನಿಸುತ್ತಿದ್ದ.

ಆದರೆ, ಅದೊಂದು ವಿಚಾರದಲ್ಲಿ ಮಾತ್ರ ರಾಜನಾದ ಭಾಸ್ಕರರಾಯ ತನ್ನ ಪ್ರೀತಿಯ ಸೇವಕನ ಮಾತುಗಳಿಗೆ ಮಹತ್ವ ಕೊಟ್ಟಿರಲಿಲ್ಲ. ತಾನು ಪಟ್ಟಕ್ಕೇರಿ ದಂದಿನಿಂದಲೂ ಮುಖ್ಯ ಮಂತ್ರಿಯಾಗಿದ್ದುಕೊಂಡು ಅತ್ಯಂತ ಯೋಗ್ಯವಾದ ರೀತಿಯಲ್ಲಿ ಆಡಳಿತ ಸಾಗಿಸಿಕೊಂಡು ಬಂದಿದ್ದ ರಾಮರಾಯ ಅನರ್ಹನೆಂದು ನಂಬುವುದೇ ಅಸಾಧ್ಯವಾಗಿತ್ತು. ಯಾವುದೋ ಕಾರಣದಿಂದಾಗಿ ರಾಮರಾಯನ ಬಗೆಗೆ ಬನ್ಯಾಬಾಪುವಿಗೆ ಕೋಪ ಬಂದಿರಬೇಕೆಂದೂ ಆ ಕೋಪವನ್ನು ಮನಸ್ಸಿ ನಲ್ಲಿಟ್ಟುಕೊಂಡೇ ಆತ ಇಂಥ ಮಾತುಗಳನ್ನಾಡುತ್ತಿರಬೇಕೆಂದು ಭಾವಿಸಿ ಭಾಸ್ಕರ ರಾಯ ಸುಮ್ಮನಿದ್ದುಬಿಟ್ಟಿದ್ದ.

ರಾಮರಾಯ ಜೀವಿಸಿರುವವರೆಗಂತೂ ತಾನು ಮುಖ್ಯ ಮಂತ್ರಿಯಾಗುವುದು ಅಶಕ್ಯವೆಂದು ಬನ್ಯಾಬಾಪುವಿಗೆ ಹೊಳೆಯುತ್ತಲೂ ಅತೃಪ್ತಿಯಿಂದ ಕುದಿದೆದ್ದ ಅವನ ಆಕಾಂಕ್ಷೆ ವಿಕೃತಗೊಂಡು ಅಡ್ಡಹಾದಿ ಹಿಡಿದು ಹೊರಟಿತ್ತು.

ರಾಮರಾಯನ ಬಗೆಗೆ ಕೃಷ್ಣಾಜಿಪಂತನಿಗೂ ಒಳಗೊಳಗೇ ಮನಸ್ಸು ಸರಿಯಾಗಿರದಿದ್ದ ವಿಚಾರ ಬನ್ಯಾಬಾಪುವಿಗೆ ತಿಳಿದಿತ್ತು. ಅರಮನೆಯ ಕಾರಭಾರಿ ಯಾದ ತಾನು ಮುಖ್ಯ ಮಂತ್ರಿಗೆ ಯಾವ ದೃಷ್ಟಿಯಿಂದಲೂ ಕಡಮೆಯವನಲ್ಲ ವೆಂದೇ ಕೃಷ್ಣಾಜಿ ನಂಬಿಕೊಂಡಿದ್ದ. ಅರಮನೆಯ ಕಾರಭಾರದಲ್ಲಿ ರಾಮರಾಯ ಹಸ್ತಕ್ಷೇಪ ಮಾಡುವುದು ಕೃಷ್ಣಾಜಿಗೆ ಸಹನವಾಗುತ್ತಿರಲಿಲ್ಲ. ಆ ವಿಷಯವಾಗಿ

ಅವರಿಬ್ಬರಲ್ಲೂ ಅನೇಕ ಬಾರಿ ಚಕಮಕಿಯೂ ನಡೆದಿತ್ತು. ದೂರು ದೊರೆಯೆದುರು ಹೋದಾಗ ಭಾಸ್ಕರರಾಯ ಅದಕ್ಕೆ ವಿಶೇಷ ಲಕ್ಷ್ಯವೀಯದೆ ಅವರ ಜಗಳವನ್ನು ನಗೆಯಲ್ಲಿ ತೇಲಿಸಿಬಿಟ್ಟಿದ್ದ. ಅವನ ಚಿಂತೆಯೆ ಅವನಿಗೆ ಸಾಕಷ್ಟು ಇರುವಾಗ ಇಂಥ ಕ್ಷುಲ್ಲಕ ಜಗಳಗಳಿಗೆ ಅವನು ಗಮನವೀಯುವುದಾದರೂ ಹೇಗೆ?

ಕೃಷ್ಣಾಜಿ ಮಾತ್ರ ಆ ವಿಚಾರವನ್ನು ಮರೆತಿರಲಿಲ್ಲ.

ಅದನ್ನು ತಿಳಿದಿದ್ದ ಬನ್ಯಾಬಾಪು ಮೆಲ್ಲಮೆಲ್ಲನೆ ಕೃಷ್ಣಾಜಿಯೊಡನೆ ಗಾಢ ಸ್ನೇಹ ಬೆಳೆಸಿದ್ದ.

"ಆ ರಾಮರಾಯ ಮಗ ಬಹಳ ಸೊಕ್ಕಿಗೆ ಬಂದಾನೆ. ಅವನಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕು ಪಂತಜಿ!"

"ಏನಾದರೂ ಯುಕ್ತಿ ಹುಡುಕು ಬಾಪು. ಅವನ ಕೊಂಬು ಮುರಿಯ ಬೇಕು ಇಬ್ಬರೂ ಕೂಡಿ."

ಹಾಗೆ, ಅವರಿಬ್ಬರೂ ಒಂದುಗೂಡಿದ್ದರು. ಕೃಷ್ಣಾಜಿಯ ಮನೆಯಲ್ಲಿ ಸಿಹಿ ಯಡುಗೆಯಾದ ದಿನ ಬನ್ಯಾಬಾಪುವಿಗೆ ತಪ್ಪದೆ ಆಮಂತ್ರಣವಿರುತ್ತಿತ್ತು. ಬನ್ಯಾ ಬಾಪು ಇನ್ನೂ ಯುವಕ, ಅವಿವಾಹಿತ. ಅವನ ತಂದೆತಾಯಿಗಳು ಆಗಲೂ ಕೊಂಕಣದ ತಮ್ಮ ಹಳ್ಳಿಯಲ್ಲಿಯೆ ಇದ್ದರು. ಅರಮನೆಯ ಆಳುಗಳ ಜತೆಯಲ್ಲಿ ಬನ್ಯಾಬಾಪುವಿಗೂ ಅಲ್ಲಿಯೆ ಊಟ ಸಿಕ್ಕುತ್ತಿತ್ತು. ಅರಮನೆಯ ಬಳಿಯಲ್ಲಿಯೆ ಇದ್ದ ಚಿಕ್ಕ ಮನೆಯೊಂದರಲ್ಲಿ ಆತ ನೆಲೆಸಿದ್ದ. ಕೃಷ್ಣಾಜಿಪಂತನಾದರೋ ಮಧ್ಯ ವಯಸ್ಸಿನವನು. ಮನೆಯಲ್ಲಿ ಎಂಟು ಹತ್ತು ಜನರ ಪರಿವಾರವಿತ್ತು. ಕಾರಭಾರಿ ಯಾಗಿದ್ದುದರಿಂದ ಅವನಿಗೆ ಯಾವುದರ ಕೊರತೆಯೂ ಇರಲಿಲ್ಲ. ಅರಮನೆಗೆ ಸರಬರಾಯಿಯಾಗುತ್ತಿದ್ದ ಕಾಳುಕಡ್ಡಿ, ಹಾಲುತುಪ್ಪ ಸಕ್ಕರೆ ಇತ್ಯಾದಿ ಸಾಮಗ್ರಿ ಗಳಲ್ಲಿ ಅಷ್ಟು ಭಾಗ ಕೃಷ್ಣಾಜಿಯ ಮನೆಗೂ ಬಂದು ಬೀಳುತ್ತಿತ್ತು. ಅವನ ಮನೆ ಯಲ್ಲಿ ದಿನವೂ ಸಮಾರಾಧನೆಯೆ, ಸಮೀಚೀನ ಭೋಜನವೆ. ವಾರದಲ್ಲೆರಡು ದಿನವಾದರೂ ಬನ್ಯಾಬಾಪು ಕೃಷ್ಣಾಜಿಯ ಮನೆಯಲ್ಲಿ ಸಕ್ಕರೆ ತುಪ್ಪದ ತಿಂಡಿ ಹೊಡೆಯತೊಡಗಿದ. ದಿನಗಳೆದ ಹಾಗೆಲ್ಲ ಅವನೂ ತಮ್ಮ ಮನೆಯವರಲ್ಲೊಬ್ಬ ನೆಂದೇ ಕೃಷ್ಣಾಜಿ ಭಾವಿಸುವಂತಾಗಿತ್ತು. ಅವನ ಪತ್ನಿ ಯಶೋದಾಬಾಯಿ ಗೊಬ್ಬಳು ಅವಿವಾಹಿತ ತಂಗಿಯಿದ್ದಳು. ಅವಳನ್ನು ಬನ್ಯಾಬಾಪುವಿಗೇ ಕೊಟ್ಟು ವಿವಾಹ ಮಾಡಬೇಕೆಂಬ ಯೋಚನೆಯೂ ಕೃಷ್ಣಾಜಿಗಿತ್ತು. ಬನ್ಯಾಬಾಪುವಿಗೆ ಮಾತ್ರ ಆಗಲೂ ವಿವಾಹದ ವಿಚಾರವಿರಲಿಲ್ಲ. ತನ್ನ ಮಹತ್ವಾಕಾಂಕ್ಷೆಗಳೆಲ್ಲಾ

ಸಿದ್ಧಿಸಿ, ತಾನೊಬ್ಬ ಗಣ್ಯ ಮನುಷ್ಯನಾದಾಗಲೇ ವಿವಾಹದ ಯೋಚನೆ ಎಂದು ಆತ ನಿಶ್ಚಯಿಸಿದ್ದ. ತಾನೂ ಒಬ್ಬ ಸಂಸ್ಥಾನಿಕರ ಮಗಳನ್ನೇ ವಿವಾಹವಾಗುವು ದೆಂದೂ ಆತ ಎಣಿಕೆ ಹಾಕಿದ್ದ. ಅದಕ್ಕೆ ಅಗತ್ಯವಿದ್ದ ಸ್ಥಾನಮಾನಗಳನ್ನು ದೊರ ಕಿಸುವುದಕ್ಕಾಗಿ ಆತ ಹೆಣಗುತ್ತಿದ್ದ. ಆ ಗುರಿ ಸಾಧಿಸುವವರೆಗೂ ಬೇರಾವ ಹವ್ಯಾಸಕ್ಕೂ ಲಕ್ಷ್ಯವೀಯಬಾರದೆಂದು ಆತ ದೃಢನಿರ್ಧಾರ ಮಾಡಿದ್ದ. ಹೆಣ್ಣಿನ ಆಕರ್ಷಣೆಗೆ ಮನಸೋಲುವುದೂ ಒಂದು ದೌರ್ಬಲ್ಯವೇ ಎಂದಾತ ಭಾವಿಸಿದ್ದ. ಐದು ಮಕ್ಕಳ ತಂದೆಯಾದ ಕೃಷ್ಣಾಜಿಯೂ ಕೂಡಾ ಮಲಿಕಾಸಾನಿಯಂಥ ವೇಶ್ಯೆಗೆ ಮರುಳಾಗಿ ಅವಳ ಮನೆಗೆ ಅಲೆಯುತ್ತಿದ್ದುದು ಬನ್ಯಾಬಾಪುವಿಗೆ ಹಾಸ್ಯದ ವಿಚಾರವಾಗಿಯೆ ತೋರುತ್ತಿತ್ತು.

ಮಲಿಕಾಳ ಮನೆಯೆದುರು ಮುಖಭಂಗಿತನಾಗಿ ಬಂದ ಕೃಷ್ಣಾಜಿ ಆ ಅವ ಮಾನವನ್ನು ನುಂಗಿ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಅವಳು ಬೇರೆಯವರ ಸಹವಾಸ ಮಾಡುತ್ತಿದ್ದ ಸಂಗತಿಯನ್ನು ದೊರೆಯ ಕಿವಿಗೆ ಹಾಕಿ ಅವಳಿಗೆ ಯೋಗ್ಯ ಶಾಸನ ಮಾಡಿಸಲೇಬೇಕೆಂದು ನಿಶ್ಚಯಿಸಿ ಆತ ಅರಮನೆಗೆ ಹೊರಟಿದ್ದ ಹಾಗೆಯೆ ಹಾದಿಯಲ್ಲಿ ಬನ್ಯಾಬಾಪು ಭೆಟ್ಟಿಯಾಗಿ ರಾತ್ರಿಯ ಸಂಗತಿಯನ್ನೇ ಪ್ರಸ್ತಾಪಿಸಿದ:

" ಕುತ್ತಿಗೆಗೆ ನೋವೇನೂ ಆಗಲಿಲ್ಲವಷ್ಟೇ ಪಂತಜಿ ? ಮೊಳಕಾಲು ಮೊಳಕೈ ಒಡೆದುವೋ ಏನು ?"

ನಾಚಿಕೆಯಿಂದಲೂ ಅಸಹನೆಯಿಂದಲೂ ಮ್ಲಾನವಾದ ಮುಖವನ್ನು ಬನ್ಯಾ ಬಾಪುವಿನತ್ತ ತಿರುಗಿಸಿದ ಕೃಷ್ಣಾಜಿ. ಅವನಿಗೆ ಕೊಂಚ ವಿಸ್ಮಯವೂ ಆಗದಿರಲಿಲ್ಲ. ರಾತ್ರಿ ತನಗೆ ಪೆಟ್ಟು ಬಿದ್ದ ವಿಚಾರ ಈ ಕಳ್ಳನಿಗೆಂತು ಗೊತ್ತಾಯಿತು ? ತನ್ನ ಕತ್ತು ಹಿಡಿದು ತಳ್ಳಿದ ಆ ವ್ಯಕ್ತಿ ಅವನ ಹಸ್ತಕನೇ ಆಗಿರಲಿಕ್ಕಿಲ್ಲವಷ್ಟೆ ?

ಆ ವಿಚಾರದೊಡನೆಯೆ ಕೃಷ್ಣಾಜಿಗೆ ಮತ್ತೊಂದು ಅನುಮಾನವೂ ಬಂತು. ರಾತ್ರಿ ಮಲಿಕಾಸಾನಿಯೊಡನಿದ್ದ ಮನುಷ್ಯನಾದರೂ ಯಾರು ? ತನಗೆ ಗೊತ್ತಾಗ ದಂತೆ ಬನ್ಯಾಬಾಪುವೇ ಅವಳ ಹತ್ತಿರ ಹೋಗುತ್ತಿರುವನೊ ಏನೊ. ಇವನಿನ್ನೂ ಯುವಕ, ಬ್ರಹ್ಮಚಾರಿ. ತನಗಿಂತ ಚೆಲುವನೂ ಹೌದು. ಮಲಿಕಾಸಾನಿ ಈತನನ್ನು ಮೆಚ್ಚಿಕೊಳ್ಳುವ ಸಂಭವವೂ ಉಂಟು. ಎಲಾ ಕಳ್ಳ ! ರಾತ್ರಿ ಅಲ್ಲಿದ್ದ ವನು ಇವನೇ ಆಗಿದ್ದರೂ ಇರಬಹುದು....

ಹಾಗೆ ಯೋಚಿಸುತ್ತ ಕೃಷ್ಣಾಜಿ ತನ್ನ ತಲೆಯ ಮೇಲಿನ ಪುಣೇರಿ ಪಗಡಿ ಯನ್ನು ಓರೆಗೊಳಿಸಿ ಬನ್ಯಾಬಾಪುವನ್ನು ವಿಚಿತ್ರವಾಗಿ ದಿಟ್ಟಿಸಿ ನೋಡಿದ. " ನಾ

ಬಲ್ಲೆ ನಿನ್ನ ಗುಟ್ಟನ್ನು? ನನ್ನನ್ನು ಮೋಸಗೊಳಿಸಲು ಬರುತ್ತೀಯಾ!" ಎಂದು ಕೆಣಕುವಂತಿತ್ತು ಆ ನೋಟ.

"ಹೀಗ್ಯಾಕೆ ನೋಡುತ್ತೀರಿ ಕಾರಭಾರೀಸಾಹೇಬ್ ?"

ಆಗಲೂ ಮಾತನಾಡಲಿಲ್ಲ ಕೃಷ್ಣಾಜಿ. ಇರಿಯುವ ಎಮ್ಮೆಯಂತೆ ಹಾಗೆಯೆ ದುರದುರನೆ ನೋಡುತ್ತಲೇ ಇದ್ದ.

"ನಿಮ್ಮ ಮನಸ್ಸಿನಲ್ಲಿರುವದಾದರೂ ಏನು? ನನ್ನ ಮೇಲೇನಾದರೂ ಸಂಶಯವೋ ?"

"ನನಗೆ ಪೆಟ್ಟು ಬಿದ್ದದ್ದು ನಿನಗೆ ಹ್ಯಾಗೆ ತಿಳಿಯಿತು ಅಂತೀನಿ!" ಎಂದು ಸವಾಲು ಹಾಕಿ ಎಡಭುಜದ ಮೇಲಿನ ಶಾಲನ್ನು ಬಲಭುಜದ ಮೇಲೊಗೆದು ಕೊಂಡ ಕೃಷ್ಣಾಜಿ.

"ಊರಲ್ಲಿ ನನ್ನ ಗೂಢಚಾರರಿಗೇನು ಕೊರತೆ ?"

"ಅವರೇ ಹೇಳಿದರೋ, ಇಲ್ಲಾ ನೀನೇ ಅಲ್ಲಿದ್ದೆಯೋ ?" ಎಂದು ಸಂಶಯದ ಧ್ವನಿಯಲ್ಲಿ ಕೇಳಿದ ಕೃಷ್ಣಾಜಿ.

"ನಾನೂ ಅಲ್ಲಿದ್ದೆನೆಂದು ನಿಮ್ಮ ಕಲ್ಪನೆಯೋ ಏನು ?" ಇದ್ದಕ್ಕಿದ್ದ ಹಾಗೇ ಬನ್ಯಾಬಾಪುವಿಗೆ ನಗೆಯುಕ್ಕಿ ಬಂತು. ನಗೆಯನ್ನು ತಡೆದುಕೊಂಡು ಆತ ನೆಂದ: "ನಾನು.... **ನಾನು**? **ಬನ್ಯಾಬಾಪು**? ಅಲ್ಲಿ....ಅಂಥ ಜಾಗದಲ್ಲಿ? ಛೀ! ಛೀ! ಆ ಕಲ್ಪನೆ ಕೂಡಾ ನನಗೆ ಅಸಹ್ಯ ಅನಿಸುತ್ತದೆ. ನೀವು ಅಲ್ಲಿಗೆ ಹೋಗುವದೇ ನನಗೆ ಸರಿಬಂದಿಲ್ಲ. ಬ್ರಾಹ್ಮಣ ಧರ್ಮವನ್ನೇ ಹಾಳುಮಾಡುವ ಕೆಲಸ ಅದು. ಇನ್ನು ನಾನು.! ನನ್ನ ಬಗ್ಗೆ ನಿಮಗೆ ಸಂಶಯವಾದರೂ ಹೇಗೆ ಬಂತು ?" ಬನ್ಯಾಬಾಪುವಿನ ಧ್ವನಿ ತೀಕ್ಷ್ಣವಾಗಿತ್ತು.

ಕೃಷ್ಣಾಜಿಯ ಮನಸ್ಸಿನಲ್ಲಿ ಸುಳಿದ ಸಂಶಯ ಚಳಿಗಾಲದ ಮೋಡದಂತೆ ಚದರಿಹೋಯಿತು. ಬನ್ಯಾಬಾಪುವನ್ನು ಅಸಂತುಷ್ಟಗೊಳಿಸುವುದೂ ಅವನಿಗಿಷ್ಟ ವಿರಲಿಲ್ಲ – ಎಂತಲೇ ಆತ ಅವಸರದಿಂದ ತನ್ನ ಪಗಡಿಯನ್ನು ಸರಿಪಡಿಸಿಕೊಳ್ಳುತ್ತ ದೇಶಾವರಿ ನಗೆ ಬೀರುತ್ತ ಹೇಳಿದ:

"ಇಲ್ಲ ಬಿಡು ಬಾಪು, ನಿನ್ನ ಬಗ್ಗೆ ಸಂಶಯವೇನೂ ಇಲ್ಲ. ಆದರೂ, ರಾತ್ರೆ ಅಲ್ಲಿ ಯಾರಿದ್ದರೆಂಬುದು ಗೊತ್ತಾದರೊಳ್ಳೆಯದು. ನಿನಗೇನಾದರೂ ಗೊತ್ತಾಗಿದೆಯೇ ಆ ವಿಷಯ ?"

“ನನಗೆ ಗೊತ್ತಾಗದೆ ಈ ಊರಲ್ಲಿ ಒಂದು ಕಡ್ಡಿಯೂ ಅಲುಗಾಡುವಂತಿಲ್ಲ,” ಎನ್ನುತ್ತಾ ಬಾಪು ತನ್ನ ಮೀಸೆಯ ಮೇಲೆ ಕೈಯೆಳೆದುಕೊಂಡ.

“ಅದೂ ನಿಜವೆ. ಸೂಳೆಯರ ಮನೆಯ ಸಂಗತಿ ಕೂಡಾ ಗೊತ್ತು ಈ ಭಡವನಿಗೆ! ಎಂದು ಮನಸ್ಸಿನಲ್ಲಿಯೇ ಅಂದುಕೊಂಡ ಕೃಷ್ಣಾಜಿ.

“ನೀನು ಬಹಾದ್ದರನಿರುವದು ನನಗೇನು ಗೊತ್ತಿಲ್ಲವೆ? ಇರಲಿ. ಯಾರಿದ್ದರು ಅಲ್ಲಿ ರಾತ್ರಿ?” ಎಂದು ಕೇಳಿದ.

“ರಾಜಶೇಖರ.”

“ಯಾವ ರಾಜಶೇಖರ?”

“ಹಿಂದೆ ಇಲ್ಲಿ ದಳವಾಯಿಯಾಗಿದ್ದನಲ್ಲ....”

“ಅವನೇ? ಜಮಖಂಡಿಯಲ್ಲಿದ್ದನೆಂದು ಕೇಳಿದ್ದೆವಲ್ಲ. ಯಾವಾಗ ಬಂದ ಇಲ್ಲಿಗೆ?”

“ನಿನ್ನೆಯೇ.”

“ಸರಿ, ಸರಿ. ಗೊತ್ತಾಯಿತು. ಅವಳಿಗೂ ಹಳೆಯ ಗೆಳೆತನ. ಹೌದು. ಹೌದು. ನೀನನ್ನುವದು ನಿಜ. ನಿನ್ನೆ ರಾತ್ರಿ ಅಲ್ಲಿದ್ದವನು ಅವನೇ ಇರಬೇಕು. ಆದರೂ, ಈ ಬಗ್ಗೆ ಖಾತ್ರಿ ಮಾಡಿಕೊಂಡಿದೀಯಾ ಬಾಪು?”

“ನಾನೇ ಸ್ವತಃ, ಇದೇ ಕಣ್ಣಿನಿಂದ ಆತ ಆ ಮನೆಯಲ್ಲಿ ಪ್ರವೇಶಿಸುವದನ್ನು ನೋಡಿದ್ದೇನೆ.”

“ಹಾಗಿದ್ದರೆ ಮುಗಿಯಿತು. ಮತ್ತೆ ಆತ? ಹೊರಗಡೆ ಇದ್ದವ? ಆ ರಾಜಶೇಖರನ ಸೇವಕನೋ ಇನ್ನಾರೋ?”

“ಸೇವಕನೇನೂ ಅಲ್ಲ. ಆದರೂ ಅವರಿಬ್ಬರೂ ಒಂದೇ ಗುಂಪಿಗೆ ಸೇರಿದವರೆನ್ನಲು ಅಡ್ಡಿಯಿಲ್ಲ. ತಮಗೆ ಮರ್ಯಾದೆ–ಅಲ್ಲಲ್ಲ–ಅವಮಾನ ಮಾಡಿ ಕಳಿಸಿದ ಆ ಮನುಷ್ಯನ ಹೆಸರು ಹೊನ್ನನಾಯಕ ಅಂತ. ರಾಜಶೇಖರನಂತೆ ಅವನೂ ಒಂದು ಕಾಲಕ್ಕೆ ಇಲ್ಲಿಯೇ ದಂಡಿನಲ್ಲಿದ್ದವನೇ. ಇಷ್ಟು ವರ್ಷ ಎಲ್ಲೆಲ್ಲೋ ಇದ್ದು ಈಗ ಮತ್ತೆ ಇಲ್ಲಿಗೆ ಬಂದಿದಾನೆ.”

“ಇವರಿಬ್ಬರೂ ಯಾವುದಾದರೊಂದು ಉದ್ದೇಶ ಇಟ್ಟುಕೊಂಡು ಬಂದಿರಬಹುದು ಅಂತೀಯಾ?”

“ಉದ್ದೇಶವಿಲ್ಲದೆ ಇದೇ ಸಮಯದಲ್ಲಿ ಇಲ್ಲಿಗೆ ಬರಲು ಕಾರಣವೇನು?

ಹೊನ್ನನಾಯಕ ನನಗೂ ಮೂರು ನಾಲ್ಕು ಬಾರಿ ಭೆಟ್ಟಿಯಾಗಿದ್ದ. ರಾಜಾ ಸಾಹೇಬರನ್ನು ಖಾಸಗಿಯಾಗಿ ನೋಡಬೇಕಾಗಿದೆಯೆಂದು ಹೇಳುತ್ತಿದ್ದ."

"ಅದೇನು ಖಾಸಗಿಯಪ್ಪಾ ?"

"ಯಾರಿಗೆ ಗೊತ್ತು ! ಬಂಡಾಯದ್ದೇ ಏನಾದರೂ ಇರಬಹುದು. ನನ್ನೆದುರು ಹೇಳು ಅಂದರೆ ಹೇಳಲಿಲ್ಲ. ಸರಿ. ನಾನೂ ಅವನನ್ನು ರಾಜಾಸಾಹೇಬರ ಹತ್ತಿರ ಬಿಡಲಿಲ್ಲ."

"ಒಳ್ಳೆಯ ಕೆಲಸ ಮಾಡಿದೆ. ಏನಾದರೂ ಉಪಾಯ ಮಾಡಿ ಅವನು ಬಂದುದರ ಕಾರಣ ತಿಳಿದುಕೋ. ಹಾಗೇ ಆ ರಾಜಶೇಖರನದೂ...." ಎನ್ನುತ್ತಿದ್ದ ಹಾಗೆಯೆ, ಎದುರಿಗೆ ವಿಷ್ಣು ಬಂದುದರಿಂದ ಮಾತನ್ನು ಅಷ್ಟಕ್ಕೇ ನಿಲ್ಲಿಸಿದ ಕೃಷ್ಣಾಜಿ.

"ರಾಮರಾಮ್, ಕಾರಭಾರೀಸಾಹೇಬ್," ಎಂದ ವಿಷ್ಣು.

"ರಾಮರಾಮ್. ಕಸೆಕಾಯ ? ಬರಾಯ್ ?" ಎಂದು ಮರಾಠಿಯಲ್ಲಿ ಔಪಚಾರಿಕವಾಗಿ ವಿಚಾರಿಸಿದ ಕೃಷ್ಣಾಜಿ.

"ಠೀಕ. ಠೀಕ. ಸಗಳೇ ಠೀಕ. ಕಾಯ ಬಾಪು, ಕಸೆ ಆಹೆ ?" ಎಂದ ವಿಷ್ಣು. ("ಎಲ್ಲಾ ಸರಿ. ಏನು ಬಾಪು, ಹೇಗಿದೆ ?")

"ಆಹೆ ತಸೇಚ !" ("ಇದೆ ಹಾಗೇ !") ಎಂದ ಬಾಪು. ವಿಷ್ಣುವಿನ ಹತ್ತಿರ ಆತ ಹೆಚ್ಚಾಗಿ ಮಾತನ್ನೇ ಆಡುತ್ತಿರಲಿಲ್ಲ. ಅವನ ಬಗೆಗೆ ಬಾಪುವಿಗೆ ಒಳಗೊಳಗೇ ತುಸು ಅಂಜಿಕೆಯೂ ಇತ್ತು.

"ಕುಠೆ ಚಾಲಲಾತ ವಿಷ್ಣೂಪಂತ್ ?" ("ಎತ್ತ ಹೊರಟಿರಿ ವಿಷ್ಣು ಪಂತ ?") ಎಂದು ಮತ್ತೆ ಕೇಳಿದ ಕೃಷ್ಣಾಜಿ.

"ಅಸೇಚ ಜಾವೂನ ಯೇತೋ ಕಿಲ್ಲ್ಯಾವರ," ("ಹೀಗೇ ಹೋಗಿ ಬರ್ತೇನೆ ಕೋಟೆಯ ಮೇಲೆ,") ಎಂದು ಉತ್ತರವಿತ್ತು ವಿಷ್ಣು ಹೊರಟುಹೋದ. ಅವನ ಕಟ್ಟುಮಸ್ತಾದ ದೇಹವನ್ನೂ ಸೈನಿಕ ಠೀವಿಯ ನಡಗೆಯನ್ನೂ ಅಸೂಯೆಯಿಂದ ವೀಕ್ಷಿಸುತ್ತ ಬಾಪುವೆಂದ :

"ಕಸೆ ಚಾಲಲಾ ಬಘಾ ಕುತ್ರಾ !" ("ಹೇಗೆ ಹೊರಟಿತು ನೋಡಿರಿ ನಾಯಿ !")

ಬನ್ಯಾಬಾಪು, ಕೃಷ್ಣಾಜಿ, ರಾಘೋಪಂತ, ರಾಮರಾಯ, ವಿಷ್ಣು ಕುಲಕರ್ಣಿ, ಮತ್ತಿತರ ಮರಾಠಿಗಳೆಲ್ಲರೂ ತಮ್ಮತಮ್ಮಲ್ಲಿ ಮಾತನಾಡುವಾಗ ಮರಾಠಿ

ಯನ್ನೆ ಬಳಸುತ್ತಿದ್ದರು. ಇವರಲ್ಲನೇಕರ ಮನೆತನಗಳು ನೂರಾರು ವರ್ಷಗಳಿಂದ ಕನ್ನಡ ಭಾಷೆಯ ನಗರವಾದ ನರಗುಂದದಲ್ಲಿಯೆ ನೆಲೆಸಿದ್ದುವಾದರೂ ಅವರು ಕನ್ನಡ ಕಲಿತು ಕನ್ನಡಿಗರೊಡನೆ ಸಮರಸರಾಗಲು ಯತ್ನಿಸಿರಲಿಲ್ಲ. ಅರಸನೂ ಮರಾಠಿಗನೇ ಆಗಿದ್ದುದರಿಂದ ಮರಾಠಿಯೆ ರಾಜಭಾಷೆಯೂ ದರಬಾರದ ಭಾಷೆಯೂ ಆಗಿ ಮನ್ನಣೆ ಪಡೆಯುತ್ತಿತ್ತು. ಕನ್ನಡದಲ್ಲಿ ಮಾತನಾಡುವುದೆಂದರೆ ತಮ್ಮ ದೊಡ್ಡಿತೆಗೆ ಕುಂದೆಂದೇ ಈ ಮರಾಠಿ ಅಧಿಕಾರಿಗಳು ಭಾವಿಸಿದ್ದರು. ಬನ್ಯಾಬಾಪುವಿನಂಥ ಕಾರ್ಯಸಾಧಕರು ಮಾತ್ರ ಈ ಭಾಷಾ ಬಿಂಕಕ್ಕೆ ಕಟ್ಟುಬೀಳದೆ ಕನ್ನಡ ಜನರೊಡನೆ ವ್ಯವಹರಿಸುವಾಗ ಹರಕುಮುರುಕು ಕನ್ನಡವನ್ನೇ ಉಪಯೋಗಿಸುತ್ತಿದ್ದರು. ಇನ್ನಿತರ ಅಧಿಕಾರಿಗಳಿಗೆ ಯಾವಾಗಲೂ ದುಭಾಷಿಯ ಸಹಾಯ ಅವಶ್ಯವಾಗಿತ್ತು. ಅರಸನಾದ ಭಾಸ್ಕರರಾಯನಿಗೆ ಕನ್ನಡ ತಿಳಿಯುತ್ತಿದ್ದಿತಾದರೂ ಸರಿಯಾಗಿ ಮಾತನಾಡಲು ಮಾತ್ರ ಬರುತ್ತಿರಲಿಲ್ಲ. ಅರ್ಧ ಮರಾಠಿಯೂ ಅರ್ಧ ಕನ್ನಡವೂ ಸೇರಿದ ಮಿಶ್ರಿತ ಭಾಷೆಯಲ್ಲಿ ಆತ ಕನ್ನಡಿಗರೊಡನೆ ಮಾತನಾಡುತ್ತಿದ್ದ. ಒಂದೆರಡು ವರ್ಷಗಳ ಹಿಂದೆಯಷ್ಟೆ ಕೊಂಕಣದಿಂದ ಬಂದು ಸೈನ್ಯದಲ್ಲಿ ಅಧಿಕಾರಿಯಾಗಿ ಸೇರಿಕೊಂಡಿದ್ದ ವಿಷ್ಣುವಿಗೆ ಮಾತ್ರ ಕನ್ನಡ ಮಾತು ಕೊಂಚವೂ ಅರ್ಥವಾಗುತ್ತಿರಲಿಲ್ಲ. ಅರ್ಥ ಮಾಡಿಕೊಳ್ಳುವ ಆಗತ್ಯವಿದೆಯೆಂದೂ ಅವನಿಗನ್ನಿಸಿರಲಿಲ್ಲ.

"ಅದೊಂದು ನಾಯಿ ಅನ್ನುವದೇ ನಿಜ."

ಬನ್ಯಾಬಾಪುವಿನ ಮಾತನ್ನು ಸಮರ್ಥಿಸುತ್ತಾ ಕೃಷ್ಣಾಜಿಯೆಂದ.

"ಅನ್ನ ಹಾಕಿದವನ ಬಾಗಿಲು ಕಾಯುವದೊಂದು ಬಿಟ್ಟರೆ" ಬೇರೇನೂ ತಿಳಿಯುವದಿಲ್ಲ ಅದಕ್ಕೆ. ತಾನೂ ಮನುಷ್ಯಪ್ರಾಣಿ, ತಾನೂ ಮುಂದುವರಿಯಬೇಕು ಎಂಬ ವಿಚಾರವಿಲ್ಲ. ಹುಂಬ. ದೊಡ್ಡ ಹುಂಬ...." ಎಂದ ಬಾಪು.

"ಮೂರ್ಖ....ಶುದ್ಧ ಮೂರ್ಖ!" ಎಂದ ಕೃಷ್ಣಾಜಿ.

"ರಾಜಾಸಾಹೇಬರ ಅಂಗರಕ್ಷಕನಾದ ಮಾತ್ರಕ್ಕೇ ಎಷ್ಟು ಜಂಬ ಬಂದಿದೆ ನೋಡಿರಿ ಮಗನಿಗೆ! ಒಮ್ಮೊಮ್ಮೆ ನನ್ನನ್ನೂ ಬಿಡುವದಿಲ್ಲ ದೊರೆಯ ಹತ್ತಿರ. ಇರಲಿ. ಇವನಿಗೆ ಸರಿಯಾಗಿ ಮಾಡೋಣ."

"ಚಲೋ ಕೈ ತೋರಿಸೋಣ!" ಎನ್ನುತ್ತಿದ್ದಂತೆಯೆ ಕೃಷ್ಣಾಜಿಗೆ ಮತ್ತೆ ರಾಜಶೇಖರ – ಹೊನ್ನನಾಯಕರ ನೆನಪು ಬಂತು.

"ಇವನ ಮಾತಿರಲಿ ಬಿಡು ಬಾಪು. ಆ ಇಬ್ಬರ ವಿಚಾರ ಏನು?"

“ಒಂದೆರಡು ದಿನಗಳಲ್ಲೇ ತಿಳಿಯಬಹುದಲ್ಲ ಅವರ ಗುಟ್ಟು? ತಾಳ್ಮೆಗೆಡಬಾರದು ಪಂತಜಿ. ಕಾದು ನೋಡೋಣ. ನನ್ನ ಪತ್ತೇದಾರರಂತೂ ಅವರ ಬೆನ್ನ ಹಿಂದೇ ಇದಾರೆ ಯಾವಾಗಲೂ.”

“ಹಾಗಿದ್ದರೆ ಅಡ್ಡಿಯಿಲ್ಲ ಬಿಡು. ಅವರಿಬ್ಬರನ್ನೂ ನೀನೇ ನೋಡಿಕೋ.”

“ನೀವೂ ಇನ್ನು ಮೇಲೆ ಆ ಸಾನಿಯ ಮನೆಗೆ ಹೋಗುವದು ಬಿಡಬೇಕು ಪಂತಜಿ.”

“ಅದೊಂದು ಬಿಟ್ಟು ಬೇರೆ ಬೇಕಾದ್ದು ಹೇಳು ಬಾಪು. ಅದರಲ್ಲಿ ಮಾತ್ರ ತಲೆ ಹಾಕಬೇಡ.”

“ನಿಮ್ಮ–ನಮ್ಮಿಬ್ಬರ–ಹಿತಕ್ಕಾಗಿಯೆ ನಾನು ಹೇಳುತ್ತೇನೆ. ಈ ಸಮಯದಲ್ಲಿ ನೀವು ಅವಳ ಹತ್ತಿರ ಹೋಗುವುದು ಸುರಕ್ಷಿತವಲ್ಲ.”

“ಹುಚ್ಚಾ! ಅವಳಿಗೆ ಮರುಳಾಗಿ ನಮ್ಮ ಗುಟ್ಟುಗಳನ್ನು ಬಿಟ್ಟುಕೊಟ್ಟೇನು ಅಂತ ಸಂಶಯವೇನು ನಿನಗೆ? ಈ ಕಾರಭಾರಿ ಅಂದರೆ ಮರುಳ ಅಂತ ತಿಳಿದೀಯೋ ಏನು? ರಾಜಕಾರಣೀ ರಕ್ತ ಇದೆ ಇದು, ನೆನಪಿರಲಿ! ಇಡೀ ಹಿಂದೂಸ್ಥಾನಕ್ಕೆಲ್ಲಾ ಮುತ್ಸದ್ದಿತನದ ಪಾಠ ಕಲಿಸಿದವರು ನಾವು! ಇಂಥ ಒಬ್ಬ ಯಕಶ್ಚಿತ್ ವೇಶ್ಯೆ ನನ್ನನ್ನು ಮೋಸಗೊಳಿಸಲು ಸಾಧ್ಯವೆ?”

“ಎರಡನೆಯ ಬಾಜೀರಾಯ ಸಾಹೇಬರು ಏನೇನು ಮಾಡಿದರು, ನಿಮಗೂ ಗೊತ್ತಿದೆಯಲ್ಲ ಪಂತಜಿ?”

“ನಾನೇನು ಅವನಂಥ ಮೂರ್ಖನಲ್ಲ!” ಎಂದ ಕೃಷ್ಣಾಜಿ.

೫

“ಮುಟ್ಟೇ! ಮುಟ್ಟೇ! ಸರಿ! ಅತ್ತ ಸರಿ!”

“ದೂರ ದೂರ! ದೂರ ಹೋ!”

“ಚಲಾ ತಿಕಡೆ!” (ನಡೀರಿ ಅತ್ತ!)

ವೆಂಕಟೇಶ್ವರ ದೇವಸ್ಥಾನದೆದುರು ರಾಜಶೇಖರನಿಗೂ ಹೊನ್ನನಾಯಕನಿಗೂ ಲಭಿಸಿದ ಸ್ವಾಗತವೆಂದರೆ ಅಂಥದು. ಅಲ್ಲಿ ಹಾಯ್ದು ಹೋಗುವ ಬ್ರಾಹ್ಮಣೇತರರಿಗೆಲ್ಲ ಅದೇ ಬಗೆಯ ಸ್ವಾಗತ ಸತ್ಕಾರ ಲಭಿಸುತ್ತಿತ್ತು. ವೆಂಕಟೇಶ್ವರ ದೇವಸ್ಥಾನವೆಂದರೆ ತಮ್ಮ ಜಾತಿಯವರದೇ ಆದ ಖಾಸಾ ದೇವಸ್ಥಾನವೆಂದು ಬ್ರಾಹ್ಮಣರು

ಭಾವಿಸಿದ್ದರು. ಆ ಭಾವನೆಯನ್ನು ದೂರಗೊಳಿಸಲು ಅಧಿಕಾರಿಗಳೇ ಆಗಲಿ ಪ್ರಜರೇ ಆಗಲಿ, ಯಾರೂ ಯತ್ನಿಸಿರಲಿಲ್ಲ. ಅಂತೆಯೆ, ಆ ದೇವಾಲಯದ ಅಂಗಳದಲ್ಲೂ ಸಹ ಬ್ರಾಹ್ಮಣೇತರರು ಅಡಿಯಿಡದಂತೆ ಕಟ್ಟುನಿಟ್ಟಾಗಿ ನೋಡಿ ಕೊಂಡು ಬಂದಿದ್ದರು ಬ್ರಾಹ್ಮಣರು. ಅತ್ತ ಸುಳಿದರೆ ಬೈಗಳು ತಪ್ಪುವಂತಿಲ್ಲ ವೆಂಬುದು ಗೊತ್ತಾದ ಬಳಿಕ ನರಗುಂದದ ಬ್ರಾಹ್ಮಣೇತರ ಪ್ರಜರೂ ಆ ಬೀದಿ ಯಲ್ಲಿ ಹಾಯುವುದನ್ನು ಬಿಟ್ಟುಬಿಟ್ಟಿದ್ದರು.

ಆ ದೇವಸ್ಥಾನದ ಈ ವೈಶಿಷ್ಟ್ಯ ರಾಜಶೇಖರನಿಗಾಗಲಿ ಹೊನ್ನನಾಯಕ ನಿಗಾಗಲಿ ಅಪರಿಚಿತವಾದುದೇನೂ ಆಗಿರಲಿಲ್ಲ. ಅವರೂ ಕೂಡಾ ಆ ಮೊದಲು ಎಂದೂ ಆ ಬೀದಿಯಲ್ಲಿ ಪ್ರವೇಶಿಸಿರಲಿಲ್ಲ. ಆದರೆ, ಈ ದಿನ ಮಾತ್ರ ಬ್ರಾಹ್ಮಣರ ಬೈಗಳನ್ನೂ ನಿಂದೆಯನ್ನೂ ಸಹಿಸಿಯಾದರೂ ಅವರು ಆ ದೇವಸ್ಥಾನದೆದುರು ನಿಂತುಕೊಳ್ಳಲೇಬೇಕಾದ ಪ್ರಸಂಗ ಬಂದಿತ್ತು.

"ಅರೆ! ಜಾಕಿ ತಿಕಡೆ!" (ಹೋಗಲೋ ಅತ್ತ!) ಎಂದು ಕೂಗಿದರು ಬ್ರಾಹ್ಮಣರು.

ಅದುವರೆಗಿನ ತನ್ನ ಆಯುಷ್ಯದಲ್ಲಿಯೆ ರಾಜಶೇಖರ ಅಂಥ ಮಾತುಗಳನ್ನು ಯಾರಿಂದಲೂ ಅನ್ನಿಸಿಕೊಂಡಿರಲಿಲ್ಲ. ಹೊನ್ನನಾಯಕನೂ ಅಷ್ಟೆ. ಬೇರಾವ ಸಂದರ್ಭವಾದರೂ ಆಗಿದ್ದಲ್ಲಿ ಅವರಿಗೆ ಆ ರೀತಿ ಮಾತನಾಡಿದವರ ನಾಲಿಗೆಯೇ ಉಳಿಯುತ್ತಿರಲಿಲ್ಲ. ಈಗಲೂ ಅವರಿಗೆ ಅವಮಾನದಿಂದಾಗಿ ಆಪಾದಮಸ್ತಕ ಪರ್ಯಂತರ ಉರಿಯೆದ್ದಿತ್ತು. ಆದರೂ, ಕೋಪವನ್ನೆಲ್ಲ ನುಂಗಿಕೊಂಡು ಅಲ್ಲಿಯೆ ಕಾದಿರದೆ ಬೇರೆ ಉಪಾಯವಿರಲಿಲ್ಲ. ಮೂರು ದಿನಗಳ ಕಾಲ ಯತ್ನಿಸಿದರೂ ದೊರೆಯ ಭೆಟ್ಟಿ ಲಭಿಸಿರಲಿಲ್ಲ. ಅರಮನೆಯ ಹೊರಂಗಳದಿಂದಲೇ ಬಸ್ಯಾಬಾಪು ಇವರನ್ನಟ್ಟಬಿಟ್ಟಿದ್ದ. ಸಾಧ್ಯವಾದಷ್ಟು ಬೇಗ ಭಾಸ್ಕರರಾಯನನ್ನು ಕಾಣುವುದಂತೂ ಅಗತ್ಯವಾಗಿತ್ತು. ಅಂತೆಯೆ, ಆತ ದೇವಾಲಯಕ್ಕೆ ಬಂದ ಸಮಯದಲ್ಲಿಯೆ ಅವನ ಕಣ್ಣೆದುರು ಕಾಣಿಸಿಕೊಂಡು ಖಾಸಗೀ ಭೆಟ್ಟಿಯ ಅವಕಾಶಕ್ಕಾಗಿ ಕೇಳಿ ಕೊಳ್ಳುವುದೆಂದು ಯೋಚಿಸಿ ಅವರು ಅಲ್ಲಿಗೆ ಬಂದಿದ್ದರು.

ಆ ವೆಂಕಟೇಶ್ವರ ದೇವಸ್ಥಾನ ನರಗುಂದ ನಗರದ ದೇವಸ್ಥಾನಗಳಲ್ಲೆಲ್ಲಾ ದೊಡ್ಡದೂ ಭವ್ಯವಾದುದೂ ಸಂಪತ್ಸಮೃದ್ಧವಾದುದೂ ಆಗಿತ್ತು. ಆ ದೇವರಲ್ಲಿ ನರಗುಂದದ ಅಧಿಪತಿಗಳ ಭಕ್ತಿ, ನಿಷ್ಠೆ ಅಪರಿಮಿತವಾದುದು. ದೇವಸ್ಥಾನದ ಭವ್ಯ ಕಟ್ಟಡವಂತೂ ನೂರಾರು ವರ್ಷಗಳ ಹಿಂದೆಯೆ ರೂಪುಗೊಂಡಿತ್ತು. ಅದರ

ಖರ್ಚುವೆಚ್ಚಗಳಿಗಾಗಿ ಅರಮನೆಯಿಂದ ದೊರಕುತ್ತಿದ್ದ ಹಣವಲ್ಲದೆ ರಾಜ್ಯದಿಂದಲೂ ಹಲವಾರು ಎಕರೆ ಜಮೀನು ಮಿಾಸಲಾಗಿ ದೊರಕಿತ್ತು. ಮೂರ್ತಿಯ ಮೈಮೇಲೆ ಜರತಾರಿ ಪೀತಾಂಬರ, ಚಿನ್ನರನ್ನದ ಒಡವೆ ರಾಶಿರಾಶಿಯಾಗಿ ಬಿದ್ದಿದ್ದುವು.

ಪುರಾಣ – ಪುಣ್ಯಕಥೆ – ಪ್ರವಚನಾದಿಗಳೂ ಬ್ರಾಹ್ಮಣ ಭೋಜನಗಳೂ ಆ ದೇವಸ್ಥಾನದಲ್ಲಿಯೆ ನಡೆಯುತ್ತಿದ್ದುದರಿಂದ ಅದಕ್ಕೊಂದು ಸಾಮಾಜಿಕ ಕೇಂದ್ರ ಸ್ವರೂಪ ಬಂದಿತ್ತು. ದೇವಸ್ಥಾನವಿದ್ದ ಬೀದಿಯಲ್ಲೂ ವಿಶೇಷವಾಗಿ ಬ್ರಾಹ್ಮಣರೇ ವಾಸವಾಗಿದ್ದುದರಿಂದ ಅದು ಆ ಜಾತಿಯ ಕೋಟೆಯಂತೆಯೆ ಕಾಣುತ್ತಿತ್ತು. ಆ ಬೀದಿಯಲ್ಲಿ ಹಾಯ್ದಾಡುವುದಕ್ಕೂ ಕೂಡ ಬ್ರಾಹ್ಮಣೇತರರು ಹಿಂಜರಿಯುತ್ತಿದ್ದರು. ಸ್ವಯಂ ದೊರೆಯೇ ಬ್ರಾಹ್ಮಣ.'ಮಂತ್ರಿಗಳು, ಕಾರಭಾರಿಗಳು, ಸೇನಾನಾಯಕರೂ ಬ್ರಾಹ್ಮಣರೆ. ಅಧಿಕಾರವೆಲ್ಲವೂ ಬ್ರಾಹ್ಮಣರ ಕೈಯಲ್ಲಿಯೆ. ಅಂತೆಯೆ, ಪ್ರಜರೆಲ್ಲರೂ ಬ್ರಾಹ್ಮಣರಿಗೆ ಅಂಜಿಕೊಂಡಿದ್ದುದು ಸಹಜವೆ ಆಗಿತ್ತು. ಅವರ ವಿರುದ್ಧ ಮಾತನಾಡುವ ಧಾರ್ಷ್ಟ್ಯಕ್ಕೆ ತೊಡಗುತ್ತಿದ್ದವರೂ ವಿರಳವೆ, ಬ್ರಾಹ್ಮಣರೊಡನೆ ತಂಟೆಯೇ ಬೇಡವೆಂದು ಅವರ ಸಾಮೂಹಿಕ ಭೋಜನ ಸ್ಥಳವಾದ ವೆಂಕಟೇಶ್ವರ ದೇವಸ್ಥಾನದಿಂದ ದೂರವಿರುತ್ತಿದ್ದವರೇ ಬಹಳ ಜನ.

ಮಡಿಮೈಲಿಗೆಗಳ ವಿಚಾರವಾಗಿ ಬ್ರಾಹ್ಮಣರಿಗಿದ್ದ ಶ್ರದ್ಧೆಯನ್ನು ರಾಜಶೇಖರನೂ ಬಲ್ಲವನಾಗಿದ್ದ. ಆದರೆ ಆ ಶ್ರದ್ಧೆಯೆನ್ನುವುದು ಅತಿರೇಕಕ್ಕೆ ಹೋಗಿ ವಿಕೃತರೂಪ ತಳೆದು ತಿರಸ್ಕಾರವಾಗಿ ಪರಿಣಮಿಸಿದ್ದುದನ್ನು ಮಾತ್ರ ಆತ ಅದುವರೆಗೆ ಪ್ರತ್ಯಕ್ಷವಾಗಿ ಕಂಡಿರಲಿಲ್ಲ, ಜಮಖಂಡಿಯಲ್ಲಿಯೂ ಬ್ರಾಹ್ಮಣರದೇ ರಾಜ್ಯಾಧಿಕಾರವಿತ್ತು. ಅರ್ಥಾತ್ – ಅಲ್ಲಿಯೂ ಅವರದೇ ವರ್ಚಸ್ಸವಿತ್ತು. ಅಲ್ಲಿನ ಪ್ರಜರೂ ಬ್ರಾಹ್ಮಣರಿಗೆ ಅಂಜುತ್ತಿದ್ದರು. ಆದರೂ, ಅಲ್ಲಿ ಬ್ರಾಹ್ಮಣೇತರರನ್ನು ಇಂಥ ತಿರಸ್ಕಾರದಿಂದ ಮಾತ್ರ ಯಾರೂ ಕಾಣುತ್ತಿರಲಿಲ್ಲ. ದರಬಾರದಲ್ಲಿ ಕೆಲವು ಹೊಣೆಗಾರಿಕೆಯ ಸ್ಥಾನಗಳಾದರೂ ಬ್ರಾಹ್ಮಣೇತರರಿಗೆ ಕೊಡಲ್ಪಟ್ಟಿದ್ದುವು. ಸೇನಾಧಿಪತ್ಯವೇ ಭೋಟೂಸಿಂಗನಂಥ ರಜಪೂತರ ಕೈಯಲ್ಲಿತ್ತು. ನರಗುಂದದಲ್ಲಿ ಮಾತ್ರ ಎಲ್ಲಾ ವಿಪರೀತವೆ. ಇಲ್ಲಿಯ ಬ್ರಾಹ್ಮಣರು ಬ್ರಾಹ್ಮಣೇತರರನ್ನು ನರಿನಾಯಿಗಳ ಹಾಗೆ ಕಾಣುತ್ತಾರೆ. ಪ್ರಜರಲ್ಲಿ ಬಹುಸಂಖ್ಯಾತರಾಗಿರುವವರು ಬ್ರಾಹ್ಮಣೇತರರೆ. ಅವರು ಕೊಡುವ ಕಂದಾಯದಿಂದಲೇ ಈ ರಾಜ್ಯ ನಡೆಯುವುದು. ನೂರರಲ್ಲಿ ಒಂದು ಪಾಲಿನಷ್ಟೂ ಇಲ್ಲದಿರುವ ಈ ಅಲ್ಪಸಂಖ್ಯಾಕ ಬ್ರಾಹ್ಮಣರು ತೊಂಭತ್ತೊಂಭತ್ತು

ಪಾಲು ಬ್ರಾಹ್ಮಣೇತರರ ಮೇಲೆ ಅಧಿಕಾರ ನಡಸುತ್ತಿದಾರೆ. ಆ ಅಧಿಕಾರವೂ ಇಷ್ಟು ಅನ್ಯಾಯಪೂರಿತವಾದುದು....

ಆ ವಿಚಾರ ಮನಸ್ಸಿನಲ್ಲಿ ಪ್ರವೇಶಿಸುತ್ತಲೂ, ತಾನು ಈ ಊರಿಗೆ ಬಂದು, ಇಷ್ಟು ಕಷ್ಟಪಟ್ಟು, ಇಂಥ ಅವಮಾನ ಸಹಿಸಿ ದೊರೆಯನ್ನು ಕಾಣಲು ಯತ್ನಿಸುತ್ತಿರುವುದು ಮೂಢತನವಾಗಿರಲಾರದಷ್ಟೆ? ಎಂದೂ ರಾಜಶೇಖರನಿಗೆನ್ನಿಸಿತು. ತಾನಾಗಲಿ ಹೊನ್ನನಾಯಕನಾಗಲಿ ಹಾತೊರೆಯುತ್ತಿರುವುದು ಏತಕ್ಕಾಗಿ? ಭಾಸ್ಕರರಾಯನ ಆಳಿಕೆಯನ್ನು ಶಾಶ್ವತಗೊಳಿಸುವುದೇ ತಮ್ಮ ಉದ್ದೇಶವಲ್ಲವೆ? ಇವನ ಆಳಿಕೆಯಿಂದ ನರಗುಂದ ರಾಜ್ಯದ ಬಹುಸಂಖ್ಯಾತ ಜನರಿಗಾದ ಪ್ರಯೋಜನವೇನು? ಅವರಿಗೆ ಸುಖವಿದೆಯೆ? ಸಮಾಧಾನವಿದೆಯೆ? ಮಾನಮರ್ಯಾದೆಗಳಿವೆಯೆ?

"ನಡೀರಿ ಅತ್ತ!" ಎಂದು ಮತ್ತೆ ಆರ್ಭಟಿಸಿದ ಒಬ್ಬ ಬ್ರಾಹ್ಮಣ.

ರಾಜಶೇಖರ ತುಸು ದೂರ ಸರಿದು ನಿಂತು ಮನಸ್ಸಿನಲ್ಲಿಯೆ ಹೇಳಿಕೊಂಡ:

"ನಮಗಿರುವ ಮಾನಮರ್ಯಾದೆಯೆಂದರೆ ಇದೇ!"

ಮತ್ತೆ ಆತ ತನ್ನನ್ನು ತಾನೆ ಕೇಳಿಕೊಂಡ:

"ನಮ್ಮನ್ನು ಹೀಗೆ ಅವಮಾನಪಡಿಸುವ ರಾಜ್ಯವನ್ನುಳಿಸಲು ನಾವಾದರೂ ಯಾಕೆ ಹೆಣಗಬೇಕು? ಇವರು ನಮ್ಮ ಸ್ವಕೀಯರೂ ಅಲ್ಲ. ಶಿವಾಜಿಯ ಕಾಲಕ್ಕೆ ಬಂದು ಇಲ್ಲಿ ತಳವೂರಿದವರು. ನಮ್ಮ ಜನರನ್ನು ಲೂಟಿ ಮಾಡಿ ತಮ್ಮ ಜೊಕ್ಕಸ ತುಂಬಿಕೊಂಡವರು. ನಮ್ಮನೆಂದೂ ಇವರು ಆತ್ಮೀಯತೆಯಿಂದ ಕಂಡಿಲ್ಲ, ಈಗಲೂ ಕಾಣುತ್ತಿಲ್ಲ. ಹೀಗಿರುವಾಗ...."

ಹೊನ್ನನಾಯಕನ ಮನಸ್ಸಿನಲ್ಲೂ ಅದೇ ಬಗೆಯ ವಿಚಾರಗಳು ಗೊಂದಲ ವೆಬ್ಬಿಸಿದ್ದುವು. ಪರಮ ಸ್ವಾಭಿಮಾನಿಯಾದ ಆ ಸಂವೇದನ ಜೀವಿಗೆ ಇಂಥ ಅವಹೇಳನ ಸಹಿಸುವುದು ಕಠಿಣವಾಗಿತ್ತು. ರಾಜಶೇಖರನತ್ತ ತಿರುಗಿ ಆತ ಪಿಸುಧ್ವನಿಯಲ್ಲಿ ಹೇಳಿದ.

"ಈ ಹಾರವರು ನಮ್ಮ ಸಂಗಡ ನಡಕೊಳ್ಳೂದು ನೋಡಿದರೆ ಈ ಊರಾಗ ಕೂಡ ಇರಬಾರದಂತ ಅನಿಸುತ್ತೈತಿ."

"ನನಗೇನು ಅನಿಸುವದಿಲ್ಲಂತ ತಿಳಿದೀಯಾ? ಆದರೂ ಈಗ ನಾವು ಸಮಾಧಾನ ಮಾಡಿಕೊಳ್ಳಬೇಕು. ನಾವು ಇಲ್ಲಿಯತನಕ ಬಂದಿದ್ದೇಕೆ ಅನ್ನುವದನ್ನು ಮರೆಯಬಾರದು. ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟು ಕೆಲಸ ಕೆಡಿಸಬಾರದು."

ರಾಜಶೇಖರ ಹಾಗೆ ಹೇಳುತ್ತಿದ್ದಾಗಲೂ "ಮೂಢ! ಮೂಢ!" ಎಂದು ಹಳಿಯುತ್ತಿತ್ತು ಅವನ ಮನಸ್ಸು.

"ಅಲ್ಲಾ! ಎಂಥಾ ಸೊಕ್ಕು ಇವರದು ಅಂತೀನಿ. ಗುಡಿಯ ಅಂಗಳದಾಗ ಕೂಡಾ ಕಾಲು ಹಾಕಿಲ್ಲ ನಾವು. ಆದರೂ ಹೀಂಗ ಹಚೀ ಹಚೀ ಅಂತಾರಲ್ಲಣ್ಣಾ, ನಾಯಿಗಳಿಗೆ ಅಂದ ಹಾಂಗ!"

"ಸಮಾಧಾನ ಹೊನ್ನಾ, ಸಮಾಧಾನ!" ಎಂದು ರಾಜಶೇಖರ ಹೇಳುತ್ತಿದ್ದಂತೆಯೆ ದೂರದಿಂದ ಸಂಸ್ಥಾನಿಕನ ಪರಿವಾರ ಬರುತ್ತಿದ್ದುದು ಕಾಣಬಂದಿತು.

ತನ್ನ ಕುಲದೇವತೆಯ ದರ್ಶನಕ್ಕೆ ಬರುವಾಗಲೆಲ್ಲಾ ಭಾಸ್ಕರರಾಯ ಪಾದಚಾರಿಯಾಗಿಯೆ ಬರುತ್ತಿದ್ದ. ಪ್ರತಿದಿನವೂ ಎರಡು ಬಾರಿ, ಮಧ್ಯಾಹ್ನ ಮತ್ತು ಸಾಯಂಕಾಲ ತಪ್ಪದೆ ದರ್ಶನಕ್ಕೆ ಬರುವುದು ಅವನು ಎಂದಿನಿಂದಲೂ ಅನುಸರಿಸಿಕೊಂಡು ಬಂದ ನಿಯಮವಾಗಿತ್ತು. ನಗರದಲ್ಲಿದ್ದಾಗಲೆಲ್ಲ, ದೇವರ ದರ್ಶನ ಪಡೆಯದೆ ಆತ ಊಟವನ್ನೂ ಮಾಡುತ್ತಿರಲಿಲ್ಲ. ವೆಂಕಟೇಶ್ವರನೆಂದರೆ ದೊರೆಗೆ ಅಷ್ಟು ಭಕ್ತಿಯಿತ್ತು.

ಎಡಕ್ಕೂ ಬಲಕ್ಕೂ ಅಂಗರಕ್ಷಕರು ನಡೆದು ಬರುತ್ತಿರಲು ಅವರ ಮಧ್ಯೆ ರಾಜೋಚಿತ ರೀತಿಯಿಂದ ಹೆಜ್ಜೆಯಿಡುತ್ತಾ ಭಾಸ್ಕರರಾಯ ಬರುತ್ತಿದ್ದ. ಅವನಿಗಾಗ ಪ್ರೌಢ ವಯಸ್ಸು. ಕೊಂಕಣದ ಜನರಿಗೆ ಸಹಜವಾದ ಗೌರವರ್ಣದ ಹೃಷ್ಟಪುಷ್ಟ ಶರೀರದ ಆಳು. ಮುಖದ ಮೇಲೆ ಅರಸುತನದ ದರ್ಪ ಬೆರೆತ ಗಾಂಭೀರ್ಯ. ಸ್ವತಂತ್ರ ಮನೋವೃತ್ತಿಯನ್ನು ಪ್ರಕಟಪಡಿಸುವ ದಿಟ್ಟತನದ ದೃಷ್ಟಿ. ದೇವರ ದರ್ಶನಕ್ಕೆ ಬರುವಾಗಲೆಲ್ಲ ಅವನೂ ಮಡಿಯಲ್ಲಿಯೆ ಇರುತ್ತಿದ್ದ. ಮಧ್ಯಾಹ್ನದ ಪ್ರಖರ ಪ್ರಕಾಶದಲ್ಲಿ ಬಂಗಾರದಂತೆ ಥಳಥಳಿಸುವ ಅವನ ತೆರೆದ ಮೈಮೇಲೆ ಒಂದೇ ಒಂದು ಜರತಾರಿ ಶಲ್ಯವಿರುತ್ತಿತ್ತು. ಬೆರಳುಗಳಲ್ಲಿನ ಹರಳಿನುಂಗುರಗಳು ಸೂರ್ಯಪ್ರಕಾಶದಲ್ಲಿ ಹೊಳೆಯುತ್ತಿರಲು ಕೈಗಳನ್ನು ಜೋಡಿಸಿಕೊಂಡು ವಿನಮ್ರಭಾವದಿಂದ ಆತ ಬರುತ್ತಿದ್ದ.

ಮಡಿಯಲ್ಲಿರುವಾಗ ಭಾಸ್ಕರರಾಯನೂ ಬ್ರಾಹ್ಮಣೇತರರನ್ನು ಮಾತನಾಡಿಸುತ್ತಿರಲಿಲ್ಲ. ಆ ದಿನ ಮಾತ್ರ ತನ್ನ ಆ ನಿಯಮವನ್ನು ಮುರಿದು ರಾಜಶೇಖರನೊಡನೆ ಆತ ಮಾತನಾಡಲೇ ಬೇಕಾಯಿತು.

ದೇವರ ದರ್ಶನ ಪಡೆದುಕೊಂಡು ದೊರೆ ದೇವಾಲಯದಿಂದ ಹೊರಹೊರಡುತ್ತಿದ್ದಂತೆಯೆ ರಾಜಶೇಖರನೂ ಹೊನ್ನನಾಯಕನೂ ಕಾಣಿಸಿಕೊಂಡು ಮುಜುರೆ

ಮಾಡಿದರು. , ಶಸ್ತ್ರವಿದ್ಯೆಯಲ್ಲಿ ಪಸ್ತಾದಿಯೆನಿಸಿಕೊಂಡಿದ್ದ ರಾಜಶೇಖರನನ್ನು ಭಾಸ್ಕರರಾಯ ಮರೆತಿರಲಿಲ್ಲ. ಸೈನ್ಯದಲ್ಲಿನ ಕೆಲಸ ತ್ಯಜಿಸಿ ಆತ ಪರಸ್ಥಳಕ್ಕೆ ಹೊರಟುಹೋಗಿದ್ದ ವಿಚಾರವು ದೊರೆಗೆ ತಿಳಿದಿತ್ತು. ಈ ಸಮಯದಲ್ಲಿ ರಾಜ ಶೇಖರನಂಥ ಶೂರ, ಚತುರ ಸೈನಿಕರಿರುವುದೂ ಅಗತ್ಯವೆಂದು ತಿಳಿದಿದ್ದ ಭಾಸ್ಕರ ರಾಯ, ತನ್ನ ಮಡಿಯನ್ನು ಮರೆತು, ರಾಜಶೇಖರನತ್ತ ದೃಷ್ಟಿ ತಿರುಗಿಸಿ, ಮುಗುಳ್ನಗೆಯಿಂದಲೇ ಅವನ ಮುಜುರೆಯನ್ನು ಸ್ವೀಕರಿಸಿದಂತೆ ಸೂಚಿಸಿ,

"ಏನ ದಳವಾಯಪ್ಪಾ, ಯಾವಾಗ ಬಂದಿ ಇತ್ತಲಾಕಡೆ?" ಎಂದು ಕೇಳಿದ, ಮರಾಠಿ ಶೈಲಿಯ ಕನ್ನಡದಲ್ಲಿ.

"ಜೀ ಸರಕಾರ್! ಬಂದು ನಾಲ್ಕೈದು ದಿವಸ ಆಯಿತು."

ದೊರೆಯೊಡನೆ ಮಾತನಾಡುವಾಗ, "ಜೀ ಸರಕಾರ್", "ಜೀ ಹುಜೂರ್" ಎನ್ನದೆ ಯಾರೂ ಚಕಾರವನ್ನೂ ಉಚ್ಚರಿಸುವಂತಿರಲಿಲ್ಲ.

"ಮತ್ತೇನ ಬಾತ್ಮೀ? ಅರಾಮು ಅದೀ ಇಲ್ಲಾ? ಇವಾ ಯಾರು?"

"ಇವನೂ ತಮ್ಮ ಪ್ರಜೆಯೇ ಹುಜೂರ್. ಒಂದು ಮಹತ್ವದ ಕೆಲಸ ಕ್ಕಾಗಿ ಮಹಾರಾಜರ ದರ್ಶನ ಪಡೆಯಬೇಕೆಂದು ಬಂದು ಹತ್ತು ಹದಿನೈದು ದಿನದಿಂದ ಪ್ರಯತ್ನಿಸುತ್ತಿದಾನೆ. ನಾನೂ ನಾಲ್ಕು ದಿನದಿಂದ ಅರಮನೆಗೆ ಓಡಾಡು ತ್ತಿದೇನೆ. ಖಾವಂದರ ದರ್ಶನ ಲಭಿಸಲಿಲ್ಲ."

"ಯಾಕೆ? ಯಾರೂ ಬಿಡಲಿಲ್ಲ ಅಂತೀಯಾ?" ಎಂದು ಮರಾಠಿಯಲ್ಲಿಯೆ ವಿಚಾರಿಸಿದ ಭಾಸ್ಕರರಾಯ.

ಮರಾಠಿ ಪ್ರಭುತ್ವವಿದ್ದ ದರಬಾರಗಳಲ್ಲಿ ಓಡಿಯಾಡಿದ್ದುದರಿಂದ ರಾಜಶೇಖರ ನಿಗೂ ಮರಾಠಿ ಅರ್ಥವಾಗುತ್ತಿತ್ತು. ಕನ್ನಡ ಛಾಯೆಯ ಮರಾಠಿಯಲ್ಲಿ ಆಗ ಮಾತನ್ನೂ ಆಡುತ್ತಿದ್ದ.

"ಯಾಕೋ ಏನೋ ತಿಳಿಯದು. ಅಂತೂ ನಮ್ಮನ್ನು ಅರಮನೆಯ ಅಂಗಳಕ್ಕೂ ಬಿಡಲಿಲ್ಲ ಹುಜೂರ್," ಎಂದು ಆತ ಹೇಳಿದ.

ಭಾಸ್ಕರರಾಯ ಕೋಪದಿಂದ ಮುಖ ತಿರುಗಿಸಿ ಜತೆಯಲ್ಲಿ ಬನ್ಯಾಬಾಪು ಇರುವನೇನೊ ಎಂದು ಸುತ್ತಲೂ ನೋಡಿದ. ಆದರೆ, ಅಂದು ಬನ್ಯಾಬಾಪು ದೊರೆಯ ಜತೆಗೆ ಬಂದಿರಲಿಲ್ಲ.

"ಹೌದೇನು ವಿಷ್ಣು? ಇವರನ್ನು ನನ್ನ ಭೆಟ್ಟಿಗೆ ಬಿಡಲಿಲ್ಲವೆ?"

" ನನಗೆ ಗೊತ್ತಿಲ್ಲ ಸರಕಾರ್. ನಾನು ಇವರನ್ನು ನೋಡಿಯೇ ಇಲ್ಲ. ಈ ವಿಷಯ ನನಗೆ ತಿಳಿದದ್ದು ಈಗಲೇ."

" ಇರಲಿರಲಿ. ಸಾಯಂಕಾಲ ಬನ್ನಿ ಇಬ್ಬರೂ. ಮಾತಾಡೋಣ," ಎಂದು ಹೇಳಿ ಭಾಸ್ಕರರಾಯ ಅರಮನೆಗೆ ನಡೆದ.

ಸಾಯಂಕಾಲ ರಾಜಗೃಹವೆದುರು ಉಪಸ್ಥಿತರಾದ ಆ ದರ್ಶನಾಕಾಂಕ್ಷಿಗಳನ್ನು ಉಪ್ಪರಿಗೆಯ ಮೇಲಿನ ತನ್ನ ಖಾಸಾ ಕೊಟಡಿಗೇ ಬರಮಾಡಿಕೊಂಡು ಭಾಸ್ಕರರಾಯ ಕೇಳಿದ :

" ಏನಪ್ಪಾ, ಬಹಳ ಗುಪ್ತ ಸುದ್ದಿಯೋ ಏನು ?"

ಬನ್ಯಾಬಾಪು ಕೊಟಡಿಯ ಹೊರಗೇ ಸುಳಿದಾಡುತ್ತಿದ್ದುದನ್ನು ಗಮನಿಸಿದ್ದ ರಾಜಶೇಖರ ಕೂಡಲೇ ಮಾತನಾಡಲಿಲ್ಲ. ಧೂರ್ತತನವೆ ಮೂರ್ತಿವೆತ್ತು ಬಂದಂತೆ ಕಾಣುತ್ತಿದ್ದ ಬಾಪುವಿನ ಬಗೆಗೆ ರಾಜಶೇಖರನಿಗೆ ಏನೋ ಅನುಮಾನ ಬಂದಿತ್ತು. ತಾನೂ ಹೊನ್ನನಾಯಕನೂ ದೊರೆಗೆ ತಿಳಿಸಲಿರುವ ವಿಚಾರ ಬಾಪುವಿನ ಕಿವಿಗೆ ಬೀಳದಿರುವುದೇ ಕ್ಷೇಮಕರವೆಂದು ಅವನಿಗನ್ನಿಸಿತ್ತು.

ರಾಜಶೇಖರ ಬಾಗಿಲಿನ ಕಡೆಗೇ ನೋಡುತ್ತ ಸುಮ್ಮನಿದ್ದುದನ್ನು ಗಮನಿಸಿ ಭಾಸ್ಕರರಾಯ ಮುಗುಳ್ನಕ್ಕು,

" ಅತ್ಯಂತ ಗುಪ್ತ ಸುದ್ದಿಯೇನು ?" ಎಂದು ಕೇಳಿದ.

" ಜೀ ಹುಜೂರ್."

ಭಾಸ್ಕರರಾಯ ಬಾಗಿಲಿನ ಹತ್ತಿರ ಹೋಗಿ, ಹೊರಗಡೆ ನಿಂತುಕೊಂಡಿದ್ದ ಬನ್ಯಾಬಾಪುವಿಗೆ ಹೊರಟುಹೋಗಲು ಸಂಜ್ಞೆ ಮಾಡಿದ. ಬಾಪು ಅಸಮಾಧಾನದಿಂದಲೇ ಉಪ್ಪರಿಗೆಯಿಳಿದು ಹೋದ.

ಭಾಸ್ಕರರಾಯ ವಿಷ್ಣುವನ್ನು ಕೂಗಿ, ಉಪ್ಪರಿಗೆಯ ಕೆಳಬಾಗಿಲಲ್ಲಿ ನಿಂತು, ಯಾರನ್ನೂ ಮೇಲೆ ಬಿಡಬಾರದೆಂದು ಅಪ್ಪಣೆಯಿತ್ತು ಕಳಿಸಿದ.

" ಇನ್ನೇನು ಚಿಂತೆಯಿಲ್ಲ. ಹೇಳು."

ಭೋಟೂಸಿಂಗನಿಗೆ ಫಾಸೀಶಿಕ್ಷೆ ವಿಧಿಸಲ್ಪಟ್ಟ ಸಮಾಚಾರ ತಿಳಿಸಿ ರಾಜಶೇಖರ ಹೇಳಿದ :

" ನನ್ನ ಮೂಲಕ ಅವರು ಖಾವಂದರಿಗೊಂದು ವಿನಂತಿ ಮಾಡಿಕೊಂಡಿದಾರೆ ಅದನ್ನು ಅರಿಕೆ ಮಾಡಿಕೊಳ್ಳಲೆಂದೇ ನಾನು ಬಂದದ್ದು."

ಘೋಟೂಸಿಂಗನಿಗೆ ಫಾಸೀಶಿಕ್ಷೆಯಾದ ಸಮಾಚಾರ ಭಾಸ್ಕರರಾಯನಿಗೂ ಆವೇಳೆಗಾಗಲೆ ಗೊತ್ತಾಗಿತ್ತು. ಜಮಖಂಡಿಯ ರಾಜಾಸಾಹೇಬರಿಂದ ಮಾತ್ರ ಅವನಿಗೆ ಅಧಿಕೃತವಾಗಿ ಏನೂ ತಿಳಿದಿರಲಿಲ್ಲ. ಅಂತೆಯೆ, ಜಮಖಂಡಿಯಿಂದ ಬಂದ ಈ ಸೈನಿಕನಿಂದ ಅನೇಕ ಉಪಯುಕ್ತ ಸಂಗತಿಗಳು ಗೊತ್ತಾಗಬಹುದೆಂದು ಬಗೆದು ಭಾಸ್ಕರರಾಯ ಕೇಳಿದ :

" ರಾಜಾಸಾಹೇಬರು ಸುಖವಾಗಿದ್ದಾರೋ ಇಲ್ಲೋ ?"

" ಸುಖವಾಗಿದ್ದಾರೆ ಹುಜೂರ್."

" ಈಗ ಅವರ ಮೇಲೇನೂ ಸಂಶಯವಿಲ್ಲ ಹೌದಲ್ಲೋ ಇಂಗ್ರೇಜರಿಗೆ ?"

" ಇಲ್ಲ ಹುಜೂರ್. ಘೋಟೂಸಿಂಗ್ ಸಾಹೇಬರೇ ಸ್ವತಃ ಎಲ್ಲಾ ತಪ್ಪು ಒಪ್ಪಿಕೊಂಡರು. ರಾಜಾಸಾಹೇಬರು ನಿರ್ದೋಷಿ ಅಂತ ನಿರ್ಣಯವಾಯಿತು."

" ಸರಿ. ಆದದ್ದೂ ಒಳ್ಳೆಯದೇ ಆಯಿತು. ಈಗ ರಾಜಾಸಾಹೇಬರ ಒಲವು ಎತ್ತ ಇದೆ ? ಬಂಡು ಮಾಡುವ ವಿಚಾರ ಈಗಲೂ ಇದೆಯೋ ಅಥವಾ ಇಲ್ಲವೋ?"

" ಈಗ ಅದೇನೂ ಇದ್ದ ಹಾಗಿಲ್ಲ ಹುಜೂರ್."

" ಇಲ್ಲ ಅಂದಿಯಾ ? ಖಂಡಿತವಾಗಿ ?"

" ನಾನೇನು ಅವರ ಹತ್ತಿರ ಈ ಬಗ್ಗೆ ಮಾತಾಡಿಲ್ಲ ಹುಜೂರ್. ನಾನಿಲ್ಲಿಗೆ ಬಂದದ್ದು ಅವರ ಅಪ್ಪಣೆಯಿಂದಲೂ ಅಲ್ಲ. ಘೋಟೂಸಿಂಗ್ ಸಾಹೇಬರ ವಿನಂತಿ ತಿಳಿಸಲೆಂದೇ ನಾನು ಬಂದದ್ದು...."

" ಏನು ಹೇಳಿದ ಘೋಟೂಸಿಂಗ್ ?" ಭಾಸ್ಕರರಾಯ ಪ್ರತಿಯೊಂದು ಶಬ್ದವನ್ನೂ ಎಚ್ಚರದಿಂದ, ತೂಗಿ ತೂಗಿ ಆಡುತ್ತಿದ್ದ. ಇಂಗ್ರೇಜರ ವಿರುದ್ಧ ಬಂಡಾಯದ ಸಮಾಚಾರ. ಫಾಸೀಶಿಕ್ಷೆಗೊಳಗಾದ ಘೋಟೂಸಿಂಗನ ಸಂದೇಶ....ಭಾಸ್ಕರರಾಯ ಜಾಗರೂಕತೆ ವಹಿಸುವುದೂ ಸಹಜವಾಗಿತ್ತು. ರಾಜಶೇಖರನೂ ಕೂಡಾ ಆತ ಒಮ್ಮಿಂದೊಮ್ಮೆಲೆ ನಂಬುವಂತಿರಲಿಲ್ಲ. ಇನ್ನು ಆ ಹೊನ್ನನಾಯಕ....ಇವರಿಬ್ಬರೂ ಇಂಗ್ರೇಜರ ಗೂಢಚಾರರೇ ಆಗಿರಲಿಲ್ಲವೆಂದು ಹೇಗೆ ನಂಬುವುದು ? ತನ್ನನ್ನು ಪರೀಕ್ಷಿಸಲೆಂದು ಆ ಕಪಟಿ ಮ್ಯಾನ್‌ಸನ್ನನೇ ಇವರನ್ನು ಕಳಿಸಿಕೊಟ್ಟಿರುವ ಸಂಭವವೂ ಇಲ್ಲದಿಲ್ಲ....

" ಖಾವಂದರಿಗೆ ಸಾವಿರ ಸಲಾಂ ಹೇಳಿ ಈ ರೀತಿ ಅರಿಕೆ ಮಾಡಿಕೊಳ್ಳಲು ತಿಳಿಸಿದ್ದಾರೆ ಘೋಟೂಸಿಂಗ್ ಸಾಹೇಬರು," ಎಂದು ಆರಂಭಿಸಿ, ಧ್ವನಿಯನ್ನು ಸಾಧ್ಯವಾದಷ್ಟೂ ತಗ್ಗಿಸಿ ರಾಜಶೇಖರ ಮುಂದುವರಿಸಿದ : " ಜಮಖಂಡಿಯಲ್ಲಿ

ಆರಂಭವಾದ ಬಂಡಾಯಕ್ಕೆ ತಮ್ಮ ಸಹಾನುಭೂತಿಯೂ ಇದ್ದಿತೆಂದು ಭೋಟೂ ಸಿಂಗ್ ಸಾಹೇಬರು ತಿಳಿದಿದ್ದರು. ಜಮಖಂಡಿಯ ರಾಜಾಸಾಹೇಬರೊಡನೆ ಈ ಬಗ್ಗೆ ತಾವು ಪತ್ರವ್ಯವಹಾರವನ್ನೂ ನಡಸಿದ್ದಿರಂತೆ...."

ಅದೆಲ್ಲವೂ ನಿಜವೇ ಆಗಿತ್ತು. ಜಮಖಂಡಿಯ ರಾಜರೊಡನೆ ಭಾಸ್ಕರ ರಾಯ ಪತ್ರವ್ಯವಹಾರ ನಡಸಿದ್ದುದೂ ಇತ್ತು. ಆದರೆ ಈಗ ಆತ ಆ ವಿಚಾರ ವನ್ನೊಪ್ಪಿಕೊಳ್ಳಲೂ ಇಲ್ಲ, ಅಲ್ಲಗಳೆಯಲೂ ಇಲ್ಲ.

ರಾಜಶೇಖರ ಮುಂದುವರಿಸಿದ್ದ : "ರಾಜಾಸಾಹೇಬರು ತಮ್ಮ ಪತ್ರ ಗಳನ್ನು ಭೋಟೂಸಿಂಗರಿಗೂ ತೋರಿಸಿದ್ದರಂತೆ. ಅಂದಿನಿಂದಲೂ ಇಲ್ಲಿಗೆ ಬಂದು ತಮ್ಮ ದರ್ಶನ ಪಡೆಯುವ ಅಭಿಲಾಷೆ ಅವರಿಗಿತ್ತು. ಆದರೆ, ಅವರಿತ್ತ ಬಂದರೆ ಇಂಗ್ರೇಜರಿಗೆ ತಮ್ಮ ಬಗ್ಗೆ ಸಂಶಯ ಬಂದೀತೆಂದು ಭಾವಿಸಿ ಆ ವಿಚಾರ ಬಿಟ್ಟು ಕೊಟ್ಟರು. ಅವರ ಬದಲು ನಾನೇ ತಮ್ಮನ್ನು ಭೆಟ್ಟಿಯಾಗಬೇಕಂತ ತಿಳಿಸಿದರು...."

"ಭೋಟೂಸಿಂಗನೇ ನಿನ್ನನ್ನು ಕಳಿಸಿರುವನೆಂಬುದಕ್ಕೆ ಆಧಾರವೇನಾದರೂ ಇದೆಯೆ ?"

"ಅವರ ಹಸ್ತಾಕ್ಷರಗಳಲ್ಲೇ ಅಧಿಕಾರಪತ್ರ ಬರೆದುಕೊಟ್ಟಿದ್ದಾರೆ, ಸರಕಾರ್," ಎಂದು ರಾಜಶೇಖರ ತನ್ನ ಅಂಗಿಯ ಒಳಜೇಬಿನಿಂದ ಮುದುಡಿಹೋದ ಕಾಗದ ವೊಂದನ್ನು ತೆಗೆದು ಭಾಸ್ಕರರಾಯನ ಕೈಗಿತ್ತ.

ಅದನ್ನು ನೋಡಿದ ಬಳಿಕ ಭಾಸ್ಕರರಾಯನಿಗೆ ರಾಜಶೇಖರನ ಬಗೆಗೆ ಸಂಶಯವುಳಿಯಲಿಲ್ಲ. ಭೋಟೂಸಿಂಗನ ಮಾತಿನ ಪ್ರಕಾರವೇ ಆತ ಇಲ್ಲಿಗೆ ಬಂದಿರುವುದು ಖಚಿತವಾಗುತ್ತಲೂ ದೊರೆಯ ಮುಖಮುದ್ರೆ, ಮಾತಿನ ರೀತಿ ಎಲ್ಲವೂ ಬದಲಾಯಿತು. ಅದುವರೆಗೂ ಅವನ ಮಾತಿನಲ್ಲಿದ್ದ ಬಿಗುವಿನ ಬದಲು ಆತ್ಮೀಯತೆ ತಲೆದೋರಿತು.

"ಒಳ್ಳೆಯದು ರಾಜಶೇಖರ್, ಭೋಟೂಸಿಂಗ್ ಹೇಳಿದ್ದಾದರೂ ಏನು ?"

"ಜಮಖಂಡಿಯಲ್ಲಿ ರಾಜಾಸಾಹೇಬರನ್ನು ನಂಬಿ ಕೂತುಕೊಳ್ಳಬಾರದು, ಸ್ವಂತ ಶಕ್ತಿಯನ್ನೇ ನಂಬಿ ಯುದ್ಧ ಹೂಡುವಂತಿದ್ದರೆ ಹೂಡಬಹುದು—ಅಂತ ಅರಿಕೆ ಮಾಡಿಕೊಳ್ಳಲು ತಿಳಿಸಿದರು ಹುಜೂರ್."

"ಅಷ್ಟೇನೇ ? ಇನ್ನೇನೂ ಇಲ್ಲವೆ ?"

" ಉತ್ತರ ಹಿಂದುಸ್ತಾನದಲ್ಲಿ ಝಾಂಸಿಯ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬರು ಯುದ್ಧ ಹೂಡುವ ಸುದ್ದಿಯಿದೆ. ದಕ್ಷಿಣದಲ್ಲಿ ಮುಂಡರಗಿ ಭೀಮರಾಯರು ಬಂಡು ಹೂಡಿಯೆ ಇದ್ದಾರೆ. ತಾವೂ ಅವರೊಡನೆ ಸೇರಿಕೊಂಡು, ಸಾಕಷ್ಟು ದಂಡು ಕೂಡಿಸಿ ಹೋರಾಡಿದರೆ ಈ ದೇಶದಿಂದ ಫಿರಂಗಿಗಳನ್ನು ಹೊರಗೆ ಹಾಕಬಹುದೆಂದು ಅರಿಕೆ ಮಾಡಿಕೊಂಡಿದ್ದಾರೆ."

" ಮತ್ತೇನೂ ಇಲ್ಲವೆ ?"

" ಏನೂ ಇಲ್ಲ ಹುಜೂರ್. ತಾವು ಲಢಾಯಿ ಸುರುಮಾಡಿದರೆ ನಾನೂ ಜೀವದ ಹಂಗು ತೊರೆದು ಕಾದಾಡಲು ತಯಾರಾಗಿದೀನಿ."

" ಶಾಬ್ಬಾಸ್ ! ನಿನ್ನಂಥ ಶೂರಪುರುಷರು ನಮಗಿಂದು ಅವಶ್ಯವಾಗಿ ಬೇಕು. ಲಢಾಯಿಯ ಪ್ರಸಂಗ ಬಂದರೆ ನೋಡೋಣವಂತೆ. ಸರಿ. ಇವನೆಲ್ಲಿಂದ ಬಂದಾನೆ?"

ಹೊನ್ನನಾಯಕ ತನ್ನ ಪಾವುಡದಿಂದ ಚೀಟಿಯೊಂದನ್ನು ತೆಗೆದು, ದೊರೆಗೆ ಮತ್ತೊಂದು ಬಾರಿ ಮುಜುರೆ ಹೊಡೆದು ಆ ಚೀಟಿಯನ್ನೊಪ್ಪಿಸಿದ.

ಭಾಸ್ಕರರಾಯ ಅದನ್ನೋದಿಕೊಂಡು ಹುಬ್ಬು ಗಂಟು ಹಾಕಿ ಕೇಳಿದ :

" ಮುಂಡರಗಿ ಭೀಮರಾಯರೇ ಇದನ್ನು ಕಳಿಸಿರುವರೇ ?"

" ಹೌದು ಹುಜೂರ್."

" ನೀನೊಬ್ಬನೇ ಬಂದೀಯಾ ?"

" ಹೌದು ಹುಜೂರ್."

" ಹಾದಿಯಲ್ಲಿ ಯಾರಿಗೂ ನಿನ್ನ ಮೇಲೆ ಸಂಶಯ ಬರಲಿಲ್ಲವೆ ? ಯಾರೂ ನಿನ್ನನ್ನು ಹಿಡಿದು ಶೋಧಿಸಲಿಲ್ಲವೆ ?"

" ಇಲ್ಲ ಹುಜೂರ್. ನಾನು ಬೈರಾಗಿಯ ವೇಷದಲ್ಲಿ ಬಂದೆ. ಯಾರಾದರೂ ಹಿಡಿದರೂ ಕೂಡಾ ಅವರಿಗೆ ಚೀಟಿ ಸಿಗದಂತೆ ಇದನ್ನು ಗುಪ್ತಜಾಗದಲ್ಲಿ ಮುಚ್ಚಿಟ್ಟುಕೊಂಡಿದ್ದೆ."

" ಇದು ಬಹಳ ಜರೂರ್ ಪತ್ರ. ನನಗೆ ಮುಟ್ಟಲು ಬಹಳ ತಡವಾಯಿತು."

" ಇದರಲ್ಲಿ ನನ್ನದೇನು ತಪ್ಪಿಲ್ಲ ಹುಜೂರ್. ತಮ್ಮನ್ನು ಭೆಟ್ಟಿಯಾಗಬೇಕೆಂದು ಎಷ್ಟು ಕೇಳಿಕೊಂಡರೂ ತಮ್ಮ ಆಳುಗಳು ಬಿಡಲಿಲ್ಲ."

" ಆಗಲೇ ನನ್ನನ್ನು ದೇವಸ್ಥಾನದೆದುರು ಏಕೆ ಕಾಣಲಿಲ್ಲ ?"

" ಆಗ ಅದು ನನಗೆ ಹೊಳೀಲಿಲ್ಲ ಹುಜೂರ್."

"ಸರಿ. ಸರಿ. ಆದದ್ದಾಯ್ತು. ಈ ಪತ್ರಕ್ಕೆ ಉತ್ತರವೇನೆಂಬುದನ್ನು ನಿನಗೆ ನಾಳೆ ಹೇಳುತ್ತೇನೆ. ಮುಂಜಾನೆ ಇಲ್ಲಿಗೆ ಬಾ," ಎಂದು ಹೇಳಿ ಭಾಸ್ಕರರಾಯ ವಿಷ್ಣುವನ್ನು ಕೂಗಿ ಕರೆದು ಹೊನ್ನನಾಯಕನ ಊಟ-ವಸತಿಗಳ ವ್ಯವಸ್ಥೆ ಮಾಡಲು ತಿಳಿಸಿದ, ಅನಂತರ ರಾಜಶೇಖರನತ್ತ ಹೊರಳಿ ಕೇಳಿದ:

"ನೀನೆಲ್ಲಿ ಇಳಿದುಕೊಂಡಿದ್ದೀಯಪ್ಪಾ?"

"ಇಲ್ಲಿ ನಮ್ಮ ಮನೆಯೇ ಇದೆಯಲ್ಲ ಹುಜೂರ್."

"ಆಯಿತು. ಅಲ್ಲೇ ಇರು ಹಾಗಾದರೆ. ನಾವು ಹೇಳಿಕಳಿಸಿದಾಗ ಬಂದು ನೋಡು," ಎಂದು ಹೇಳಿ ರಾಜಶೇಖರನಿಗೆ ನೂರು ರೂಪಾಯಿ ಕೊಡುವಂತೆ ವಿಷ್ಣುವಿಗೆ ತಿಳಿಸಿ ಅವರೆಲ್ಲರಿಗೂ ಹೊರಡಲು ಅಪ್ಪಣೆಯಿತ್ತ.



## ೬

ದರ್ಶನಕ್ಕೆ ಬಂದವರು ಹೊರಟುಹೋಗಿ ಎಷ್ಟೋ ಹೊತ್ತು ಕಳೆದು ಹೋಗಿತ್ತು. ಸಾಯಂಕಾಲದ ಪೂಜೆಯ ಸಮಯವಾಗಿದ್ದರೂ ಭಾಸ್ಕರರಾಯನಿಗೆ ಅದರ ಅರಿವಿರಲಿಲ್ಲ. ವಿರಾಮಾಸನದ ಮೇಲೊರಗಿಕೊಂಡು, ಎಡಗಡೆಯ ಕಿಟಕಿಯಿಂದ ಕಾಣುತ್ತಿದ್ದ ಕೋಟೆಯನ್ನೇ ದಿಟ್ಟಿಸುತ್ತ ಆತ ಗಾಢಯೋಚನೆಯಲ್ಲಿ ಮೈಮರೆತಿದ್ದ.

ಮುಂಡರಗಿ ಭೀಮರಾಯ ಸಹಾಯ ಯಾಚಿಸಿ ಬರೆದ ಕಾಗದಕ್ಕೆ ತಕ್ಷಣ ಉತ್ತರ ಕಳಿಸಬೇಕಾಗಿತ್ತು. ತಾನು ಸಹಾಯ ಕಳಿಸುವುದನ್ನೆ ಆತ ಕಾದು ಕುಳಿತಿರಲು ಸಾಕು. ಸಾಧ್ಯವಾದ ನೆರವನ್ನೆಲ್ಲಾ ನೀಡುವುದಾಗಿ ಅವನಿಗೆ ವಚನವನ್ನಂತೂ ಕೊಟ್ಟುದುದಾಗಿದೆ. ಈಗ ಆ ಮಾತನ್ನು ತಾನು ಉಳಿಸಿಕೊಳ್ಳಬೇಕು. ಜಮಖಂಡಿ-ಕೊಲ್ಲಾಪುರಗಳ ರಾಜರಂತೆ ತಾನೂ ಹಿಂದೇಟು ಹಾಕಬಾರದು....

ಭೀಮರಾಯ ಬೇಡಿರುವ ಮದ್ದುಗುಂಡುಗಳನ್ನೇನೊ ಕಳಿಸಬಹುದು. ಆದರೆ, ಹಾದಿಯಲ್ಲಿ ಅವು ಆಂಗ್ಲ ಅಧಿಕಾರಿಗಳ ಕೈಗೆ ಸಿಕ್ಕು, ತನ್ನ ಹೆಸರು ಹೊರಬೀಳುವ ಸಂಭವವೂ ಇಲ್ಲದಿಲ್ಲ. ಭೀಮರಾಯನಿಗೆ ತಾನು ಸಹಾಯ ಮಾಡುತ್ತಿರುವ ಅಂಶ ಪ್ರಕಟವಾಗುತ್ತಲೂ ಆಂಗ್ಲರು ತನ್ನನ್ನೂ ಸೆರೆಹಿಡಿಯದಿರಲಾರರು.

ತಾನೂ ಕೂಡಾ ಬಂಡಾಯದ ಸಿದ್ಧತೆ ನಡೆಸಿರುವುದು ಗೊತ್ತಾದ ಬಳಿಕ ತನಗೂ ಭೋಟೂಸಿಂಗನಿಗೊದಗಿದ ಗತಿಯೆ ಒದಗುವುದು ಖಂಡಿತ....

ಹೀಗೆ, ಸುಲಭವಾಗಿ ಅವರ ಕೈಗೆ ಸಿಕ್ಕು ಶೂಲಕ್ಕೇರುವುದರಲ್ಲಿ ಯಾವ ಪುರುಷಾರ್ಥವಿದೆ?

ಅದೇನೊ ಸರಿಯೆ. ಆದರೆ, ಇಂಗ್ರೇಜರ ವಿರುದ್ಧ ಬಂಡು ಹೂಡುವುದೇನೂ ಸಾಧಾರಣ ಸಂಗತಿಯಲ್ಲ. ಅವರ ಕೈಯಲ್ಲಿ ಲಕ್ಷಾಂತರ ಸೈನಿಕರಿದಾರೆ, ಅಪಾರ ವಾದ ಹಣವಿದೆ, ಎರಡು ನೂರು ವರ್ಷ ಯುದ್ಧ ನಡೆದರೂ ತೀರದಷ್ಟು ಮದ್ದು ಗುಂಡುಗಳ ಸಂಗ್ರಹವಿದೆ, ಯುದ್ಧ ಕಲೆಯಲ್ಲಿ ನಿಷ್ಣಾತರಾದ ಸೇನಾಪತಿಗಳಿದ್ದಾರೆ, ಎಲ್ಲವೂ ಇದೆ. ತನ್ನ ಬಳಿಯಲ್ಲಾದರೋ ಸಾಕಷ್ಟು ಸೈನಿಕರೂ ಇಲ್ಲ, ಹಣವೂ ಇಲ್ಲ, ಮದ್ದು ಗುಂಡೂ ಇಲ್ಲ, ಸೇನಾಪತಿಗಳೂ ಇಲ್ಲ, ಏನೂ ಇಲ್ಲ. ಇಂಗ್ರೇಜರ ಶಕ್ತಿಯೆದುರು ತನ್ನ ಶಕ್ತಿ ಅತ್ಯಂತ ಅಲ್ಪವಾದದ್ದು. ಅವರ ವಿರುದ್ಧ ಬಂಡು ಹೂಡುವುದೇನು ಹುಡುಗಾಟದ ಮಾತೇ?

ಹಾಗಾದರೇನು ಮಾಡುವುದು?

ಬಂಡಾಯದ ವಿಚಾರವನ್ನೇ ತ್ಯಜಿಸಿ, ಭೀಮರಾಯನ ಪತ್ರಕ್ಕೆ ಉತ್ತರವನ್ನೇ ಕೊಡದೆ ಸುಮ್ಮನಿದ್ದುಬಿಡುವುದೇ ಹೇಗೆ? ತಾನು ಸುಮ್ಮನಿದ್ದರೆ ಇಂಗ್ರೇಜರು ತನಗೇನನ್ನೂ ಮಾಡಲಾರರು. ತಾನು ಜೀವಿಸಿರುವವರೆಗೂ ಸುಖದಿಂದ ರಾಜ್ಯ ವಾಳಬಹುದು. ಅಷ್ಟರೊಳಗಾಗಿ ತನಗೆ ಪುತ್ರಸಂತಾನವಾದರೆ ಸಂಸ್ಥಾನ ತನ್ನ ವಂಶದವರ ಕೈಯಲ್ಲೇ ಉಳಿಯುವುದು. ಇಲ್ಲವಾದರೆ ಹಿಂದುಸ್ಥಾನದ ಬಹು ಭಾಗ ಆಂಗ್ಲರ ಕೈಗೆ ಹೋದ ಹಾಗೆ ತನ್ನ ರಾಜ್ಯವೂ ಹೋಗುವುದು. ಕಾಲಾಯ ತಸ್ಮೈನಮಃ ಎಂದುಕೊಂಡು ಸುಮ್ಮನಿರಬೇಕು, ಅಷ್ಟೆ.

ಆದರೆ, ಹಾಗೆ ಸುಮ್ಮನಿರುವುದು ತನ್ನಿಂದಂತೂ ಸಾಧ್ಯವಾಗದು.

ತನಗೆ ದತ್ತಕಕ್ಕೆ ಅನುಮತಿಯೀಯದೆ ಕಂಪನಿ ಸರಕಾರ ಪರಮ ಅನ್ಯಾಯ ವೆಸಗಿದೆ. ಸ್ವಾಭಿಮಾನವಿರುವವರಾರೂ ಇಂಥಾ ಅನ್ಯಾಯ ಸಹಿಸಿ ಸುಮ್ಮನಿರು ವಂತಿಲ್ಲ. ಹಾಗೆ ಸುಮ್ಮನಿರುವುದು ಆತ್ಮಗೌರವವಿಲ್ಲದ ದುರ್ಬಲ ಜೀವಿಗಳ ರೀತಿ, ಹೇಡಿಗಳ ರೀತಿ. ರಾಜವಂಶದಲ್ಲಿ ಜನಿಸಿದ ಈ ಭಾಸ್ಕರರಾಯ ಅಂಥ ಹೇಡಿಗಳ ಮಾಲಿಕೆಯಲ್ಲಿ ಸೇರಿಕೊಳ್ಳಲಾರೆ.

ಇನ್ನೂ ಕೆಲವು ದಿನ ಕಾದು ನೋಡಬೇಕೆಂದು ದಿವಾಣರಾದ ರಾಮರಾಯ ರೇನೋ ಹೇಳುತ್ತಾರೆ. ದಿವಾಣರಾದ ಅವರು ತಾಳ್ಮೆಯ ಸಲಹೆಯೀಯುವುದು

ಸಹಜವೇ ಆಗಿದೆ. ತನ್ನದು ಮೊದಲಿನಿಂದಲೂ ಸ್ವಲ್ಪ ದುಡುಕು ಸ್ವಭಾವ ವೆಂಬುದೂ ನಿಜ. ತನ್ನಂಥ ರಾಜರಿಗೆ ರಾಮರಾಯರಂಥ ದಿವಾಣರಿರುವುದೇ ಕ್ಷೇಮಕಾರಿ. ಹುಚ್ಚೆದ್ದು ಓಡುವ ಕುದುರೆಗೆ ಕಡಿವಾಣವಿದ್ದ ಹಾಗೆ....ರಾಮ ರಾಯರಿರುವರೆಂತಲೇ ಇಷ್ಟು ದಿನ ಯಾವ ಅನಾಹುತವೂ ಇಲ್ಲಿ ನಡೆಯಲಿಲ್ಲ ವೆನ್ನಬೇಕು. ತಾನು ಕೋಪಿಸಿಕೊಂಡು ದುಡುಕಿ ಕೆಲಸ ಮಾಡುವುದರಲ್ಲಿದ್ದಾಗ ಲೆಲ್ಲಾ ಅವರು ತನ್ನನ್ನು ತಡೆಯದಿದ್ದರೆ ಏನೇನು ನಡೆದುಹೋಗುತ್ತಿತ್ತೊ!

ಈಗಲೂ ರಾಮರಾಯರ ಸಲಹೆಯಂತೆಯೆ ನಡೆದುಕೊಳ್ಳುವುದು ಸೂಕ್ತ ವಾದುದೆಂದು ಭಾಸ್ಕರರಾಯನಿಗನ್ನಿಸಿತು. ಆತ ವಿಷ್ಣುವನ್ನು ಕೂಗಿ ರಾಮ ರಾಯರನ್ನು ಕರೆದುತರಲು ಅಪ್ಪಣೆ ಮಾಡಿದ.

ವಿಷ್ಣುವಿನ ಹಿಂದೆಯೆ ಉಪ್ಪರಿಗೆಯೇರಿ ಬಂದ ಬನ್ಯಾಬಾಪು, ದೊರೆಯ ಚಿಂತಾಗ್ರಸ್ತ ಮುಖವನ್ನು ನೋಡಿ, ರಾಜಶೇಖರ – ಹೊನ್ನನಾಯಕರೊಡನೆ ಯಾವುದೋ ಗಂಭೀರ ವಿಷಯದ ಬಗೆಗೆ ಮಾತು ನಡೆದಿರಬೇಕೆಂದು ಊಹಿಸಿ, ಅದೇನೆಂಬುದನ್ನು ಅರಿತುಕೊಳ್ಳುವ ಕುತೂಹಲದಿಂದ, ಕಾಲು ಚಾಚಿ ಒರಗಿದ್ದ ದೊರೆಯ ಬಳಿ ಬಂದು ಅವನ ಪಾದಗಳನ್ನು ಕೈಯಲ್ಲಿ ಹಿಡಿದು ಮೃದುವಾಗಿ ನೀವುತ್ತಾ ಕುಳಿತುಕೊಂಡ.

"ಬಹಳ ಆಯಾಸವಾಗಿದೆಯೆಂದು ತೋರುತ್ತೆ ಖಾವಂದರಿಗೆ?"

"ಹೌದು ಬಾಪು, ರಾಜಕಾರಣ ಅಂದರೆ ಆಯಾಸ ಇದ್ದದ್ದೇ."

"ಅದಕ್ಕೇ ನಾನು ಮೇಲಿಂದ ಮೇಲೆ ಖಾವಂದರನ್ನು ಬೇಡಿಕೊಳ್ಳುವುದು– ತಾವು ರಾಜಕಾರಣದತ್ತ ವಿಶೇಷವಾಗಿ ಲಕ್ಷ್ಯವನ್ನೇ ಕೊಡದೆ ಐಷಾರಾಮದಿಂದ ದಿನಗಳೆಯಬೇಕು ಅಂತ. ಈ ಮಂತ್ರಿಗಳು, ಕಾರಭಾರಿಗಳು, ಸೇವಕರಾದ ನಾವು ಇರುವುದಾದರೂ ಯಾತಕ್ಕಾಗಿ? ತಮ್ಮ ಭಾರವನ್ನು ಕಡಮೆ ಮಾಡದಿದ್ದರೆ ನಾವು ಸಂಬಳ ತಿಂದುದರ ಉಪಯೋಗವಾದರೂ ಏನು?"

"ನೀನನ್ನುವದೂ ನಿಜ ಬಾಪು. ಆದರೆ ನಾವೂ ಕೂಡಾ ಕೆಲವೊಂದು ಮಹತ್ವದ ವಿಷಯಗಳಿಗೆ ಲಕ್ಷ್ಯ ಕೊಡಲೇಬೇಕಾಗುತ್ತದೆ. ಮಂತ್ರಿಗಳ ಮೇಲೇ ಎಲ್ಲಾ ಜವಾಬ್ದಾರಿ ಹೊರಿಸಲೂ ಬರುವದಿಲ್ಲ...."

"ಖಾವಂದರ ದರ್ಶನಕ್ಕೆ ಬರುವ ಜನರಾದರೂ ಎಷ್ಟು ವಿಚಿತ್ರ ಇರುತ್ತಾರೆ ಸಣ್ಣ ಪುಟ್ಟ ವಿಚಾರಗಳಿಗೂ ಇವರು ಖಾವಂದರಿಗೇ ತೊಂದರೆ ಕೊಡಲು ಬರು ತ್ತಾರೆ."

"ಇವತ್ತು ಬಂದವರು ಮಹತ್ವದ ಕೆಲಸಗಳಿಗಾಗೇ ನಮ್ಮನ್ನು ನೋಡಲು ಬಂದಿದ್ದರು ಬಾಪು. ಅವರನ್ನು ನೀನು ಆಗಲೇ ನಮ್ಮ ಹತ್ತಿರ ಬಿಡದೆ ಬಹಳ ತಪ್ಪು ಮಾಡಿದೆ."

"ನನ್ನ ತಪ್ಪಾಗಿದ್ದರೆ ಖಾವಂದರು ಕ್ಷಮಿಸಬೇಕು. ಅವರು ತಮ್ಮ ದರ್ಶನ ಪಡೆಯುವುದು ಮಹತ್ವದ ಕೆಲಸಕ್ಕಾಗಿ ಎಂದು ನನಗೆ ಹೇಳಲೇ ಇಲ್ಲ. ಮಹಾರಾಜರ ಹತ್ತಿರ ಏನಾದರೂ ಭಿಕ್ಷೆ ಕೇಳಲು ಬಂದಿರಬಹುದೆಂದು ನಾನು ಭಾವಿಸಿದ್ದೆ...." ಎಂದು ಬಾಪು ಹೇಳುತ್ತಿದ್ದಂತೆಯೆ ದಿವಾಣ ರಾಮರಾಯನ ಆಕೃತಿ ಬಾಗಿಲಲ್ಲಿ ಕಾಣಿಸಿಕೊಂಡಿತು.

ಪದ್ಧತಿಯಂತೆ ಮೂರು ಬಾರಿ ತಲೆಬಾಗಿ ವಂದಿಸಿ ರಾಮರಾಯ ಮುಂದೆ ಬಂದ.

"ಬನ್ನಿ ದಿವಾಣಜಿ, ಕೂತುಕೊಳ್ಳಿರಿ," ಎನ್ನುತ್ತಾ ಭಾಸ್ಕರರಾಯ ತನ್ನ ಕಾಲುಗಳನ್ನೆಳೆದುಕೊಂಡು ಆಸನದಲ್ಲಿ ಸರಿಯಾಗಿ ಕುಳಿತುಕೊಂಡು ಬಾಪುವಿನ ಕಡೆಗೆ ಹೊರಳಿ ಹುಬ್ಬೆತ್ತಿದ.

ದೊರೆಯ ಪಾದಸೇವೆಯಲ್ಲಿ ತೊಡಗಿದಂತೆ ನಟಿಸುತ್ತ ಅಲ್ಲಿಯೆ ಕುಳಿತುಕೊಂಡು ಮಾತುಕತೆಯೆಲ್ಲವನ್ನೂ ತಿಳಿದುಕೊಳ್ಳಬೇಕೆಂದು ಬಯಸಿದ್ದ ಬಾಪುವಿಗೆ ನಿರಾಶೆಯಾಯಿತು. ಅಳುಮೊಗದಿಂದಲೇ ಆತ ಹೊರಟುಹೋಗಿ ಮೆಟ್ಟಲುಗಳ ಬಳಿ ನಿಂತುಕೊಂಡ. ದೊರೆಯ ಖಾಸಾ ಕೋಣೆಯಲ್ಲಿ ನಡೆದ ಮಾತು ಅಲ್ಲಿಗೂ ಕೇಳಿಸುವ ಸಂಭವವಿತ್ತು.

ದೊರೆಯ ಮುಖಮುದ್ರೆಯನ್ನೊಂದು ಬಾರಿ ನೋಡಿ, ಅವನ ವಿಚಾರಗಳನ್ನರಿತುಕೊಳ್ಳಲು ಯತ್ನಿಸುತ್ತ ರಾಮರಾಯ ಆಸನದ ಮೇಲೆ ಮಂಡಿಸಿದ. ಅವನಿಗಾಗ ಸುಮಾರು ಐವತ್ತರ ವಯಸ್ಸು. ಶಾಂತಪ್ರಕೃತಿಯ ಸೌಮ್ಯಮುದ್ರೆಯ ಆ ಗೃಹಸ್ಥ ಸಚಿವಸ್ಥಾನಕ್ಕೆ ಅಗತ್ಯವಾದ ವಿನಯಪೂರಿತ ಗಾಂಭೀರ್ಯದಿಂದ ಕೂಡಿದ ಆಕರ್ಷಕ ವ್ಯಕ್ತಿತ್ವವುಳ್ಳವನಾಗಿದ್ದ. ಅವನು ತೊಟ್ಟದ್ದುದು ಬಿಳಿಯ ರೇಶಿಮೆಯ, ಬಗಲುಬಂಡಿಯ ಅಂಗಿ, ಉಟ್ಟದ್ದುದು ಜರಿಯಂಚಿನ ಪಂಚೆ. ಜರತಾರಿಯದೊಂದು ಶಾಲು ಹೊದೆದು, ತಲೆಯ ಮೇಲೆ, ಮರಾಠಿಗರ ವಿಶಿಷ್ಟ ಶಿರೋಭೂಷಣವಾದ ಪಗಡಿಯನ್ನಿಟ್ಟುಕೊಂಡಿದ್ದ.

"ಮುಂಡರಗಿ ಭೀಮರಾಯರಿಗೆ ಸಹಾಯ ಮಾಡುವುದಾಗಿ ನಾವು ವಚನವಿತ್ತಿದುದು ನಿಮಗೆ ಗೊತ್ತಿದೆಯಲ್ಲ ದಿವಾಣಜಿ. ಆ ವಚನದಂತೆ ನಡೆದುಕೊಳ್ಳ

ಬೇಕಾದ ಪ್ರಸಂಗವೀಗ ಬಂದಿದೆ," ಎನ್ನುತ್ತಾ ಭೀಮರಾಯನ ಪತ್ರವನ್ನು ರಾಮ ರಾಯನ ಕೈಗೆ ಕೊಟ್ಟು ಭಾಸ್ಕರರಾಯನೆಂದ: "ಕೊಟ್ಟ ವಚನದಂತೆ ನಡೆದು ಕೊಳ್ಳಬೇಕಾದುದಂತೂ ನಮ್ಮ ಧರ್ಮ. ಅಲ್ಲವೆ ?"

"ಹೌದು ಸರಕಾರ್. ಅದರಲ್ಲೇನೂ ಸಂಶಯವಿಲ್ಲ." ಭೀಮರಾಯನ ಪತ್ರವನ್ನು ಎರಡು ಮೂರು ಬಾರಿ ಓದಿಕೊಂಡು ರಾಮರಾಯ ನಿಧಾನವಾಗಿ ಮಾತನಾಡಿದ: "ಮದ್ದು ಗುಂಡುಗಳ ಕೊರತೆಯಾಗಿರುವುದರಿಂದ ಅವುಗಳನ್ನು ಕಳಿಸಿಕೊಡುವಂತೆ ಭೀಮರಾಯನು ತಮ್ಮನ್ನು ವಿನಂತಿಸಿಕೊಂಡಿದಾರೆ. ಅವರಿಗೆ ಸಹಾಯ ಮಾಡಬೇಕಾದುದೇನೋ ತಮ್ಮ ಧರ್ಮವೇ. ಆದರೂ, ಈ ವಿಚಾರದಲ್ಲಿ ಸಹಾಯ ಮಾಡುವುದು ಸಾಧ್ಯವಿದೆಯೇ ಹೇಗೆ ಅಂತಲೂ ಯೋಚಿಸಬೇಕು ಪ್ರಭೂ."

"ಸಾಧ್ಯವಿಲ್ಲ ಅನ್ನುವಿರಾ ?"

"ನಮ್ಮಲ್ಲಿ ಮದ್ದು ಗುಂಡುಗಳ ಸಂಗ್ರಹ ಸಾಕಷ್ಟು ಇದ್ದರೆ ಅವರಿಗೂ ಅಷ್ಟು ಕಳಿಸಲು ಸಾಧ್ಯವಾಗಬಹುದು."

"ನಮ್ಮಲ್ಲಿ ಸಾಕಷ್ಟು ಇಲ್ಲವೆ ?"

"ಇಲ್ಲ ಸರಕಾರ್. ನಮ್ಮಲ್ಲಿರುವ ಸಂಗ್ರಹ ನಮಗೇ ಸಾಲದು. ಕೊಲ್ಲಾಪುರದ ಛತ್ರಪತಿ ಸರಕಾರದಿಂದ ಹತ್ತಿಪ್ಪತ್ತು ಬಂಡಿಗಳಷ್ಟಾದರೂ ಮದ್ದು ಗುಂಡು ಬರಬಹುದೆಂದು ನಂಬಿದ್ದುದು ವ್ಯರ್ಥವಾಯಿತು. ಸಾಧ್ಯವಾದಷ್ಟು ಮದ್ದು ಕಳಿಸಿಕೊಡಲು ರಾಮದುರ್ಗಕರರನ್ನೂ ಕೇಳಿಕೊಂಡಿದ್ದೆವು. ಅವರೂ ಇಲ್ಲವೆಂದರು. ಇನ್ನೂ ಒಂದೆರಡು ಕಡೆಗಳಿಂದ ಉತ್ತರ ಬರುವುದಿದೆ. ಇಂಥ ಪರಿಸ್ಥಿತಿಯಲ್ಲಿ ಭೀಮರಾಯರಿಗೆ ನಾವು ಮದ್ದು ಕಳಿಸುವುದು ಹೇಗೆ ಸಾಧ್ಯವಾದೀತು ಹುಜೂರ್?"

"ನಿಜ. ನೀವನ್ನುವದೂ ನಿಜ. ಆದರೂ, ಈ ಸಂದರ್ಭದಲ್ಲಿ ಇಲ್ಲವೆಂದು ಹೇಳಿ ಅವರನ್ನು ನಿರಾಶೆಗೊಳಿಸುವುದೂ ತರವಲ್ಲವೆಂದೇ ನಮಗನಿಸುತ್ತದೆ."

"ತರವಲ್ಲ. ಅದೇನೋ ನಿಜ. ಆದರೆ, ಅದಕ್ಕೆ ಬೇರೆ ಉಪಾಯವಿಲ್ಲ. ಮೊದಲನೆಯದಾಗಿ ತಮ್ಮ ಹಿತ ನೋಡಿಕೊಳ್ಳುವುದು ರಾಜಕಾರಣದಲ್ಲಿ ಎಲ್ಲರೂ ಅನುಸರಿಸುವ ನೀತಿ. ಅನ್ಯರಿಗಾಗಿ ತಮ್ಮ ಕಾಲ ಮೇಲೆ ಕಲ್ಲು ಹಾಕಿಕೊಳ್ಳುವುದು ಮುತ್ಸದ್ದಿತನವೆನಿಸುವುದಿಲ್ಲ."

"ಹಾಗಾದರೆ, ಮಾತಿಗೆ ಬೆಲೆಯೇ ಇಲ್ಲವೆ ? ನಮ್ಮ ವಚನ ಹುಸಿಯಾಗ ಬೇಕೆ ?"

“ಅದೇಕೆ ಹುಸಿಯಾದೀತು ಸರಕಾರ್? ವಚನವಿತ್ತ ಮೇರೆಗೆ ಒಂದಿಲ್ಲೊಂದು ದಿನ ಅವರಿಗೆ ಸಹಾಯ ಮಾಡಿದರಾಯಿತಲ್ಲ ?” ಎಂದ ರಾಮರಾಯ. ಭಾಸ್ಕರರಾಯ ಸಹಾಯ ಮಾಡುವುದರೊಳಗಾಗಿ ಭೀಮರಾಯನ ಇತಿಶ್ರೀಯಾಗಿ ಹೋಗಬಹುದು, ಅನಂತರ ಭಾಸ್ಕರರಾಯ ತನ್ನ ವಚನದಂತೆ ನಡೆದುಕೊಳ್ಳಬೇಕಾದ ಪ್ರಮೇಯವೂ ಬಾರದೆಂದು ರಾಮರಾಯ ಆಲೋಚಿಸಿದ್ದ. ಕಂಪನಿ ಸರಕಾರದ ವಿರುದ್ಧ ಬಂಡು ಹೂಡುವುದು ಆತ್ಮಘಾತಕ ಕೃತ್ಯವೆಂದೇ ರಾಮರಾಯನಿಗನ್ನಿಸಿತ್ತು. ಬಂಡಾಯದ ವಿಚಾರದಿಂದ ದೊರೆಯನ್ನು ಪರಾವೃತ್ತಗೊಳಿಸಲು ಆತ ಪರಿಪರಿಯಾಗಿ ಯತ್ನಿಸುತ್ತ ಬಂದಿದ್ದ. ಎಂಟು ಹತ್ತು ತಿಂಗಳ ಹಿಂದೆಯೆ ಯುದ್ಧ ಹೂಡುವ ವಿಚಾರದಲ್ಲಿದ್ದ ಭಾಸ್ಕರರಾಯ ಅಷ್ಟು ದಿನಗಳವರೆಗೂ ಸುಮ್ಮನಿರಲು ರಾಮರಾಯನ ಸಲಹೆಯೇ ಕಾರಣವಾಗಿತ್ತು.

“ಅಂದರೆ? ಈಗ ನಾವು ಅವರಿಗೆ ಏನನ್ನೂ ಕಳಿಸುವುದು ಬೇಡವೆಂದೇ ನಿಮ್ಮ ಅಭಿಪ್ರಾಯವೋ ?”

“ಕ್ಷಮಿಸಬೇಕು ಸರಕಾರ್ ತಮ್ಮ ಮನಸ್ಸು ನೋಯಿಸುವಂಥ ಮಾತು ಆಡಲು ಇಚ್ಛೆಯಿಲ್ಲ. ಆದರೂ, ಕರ್ತವ್ಯದೃಷ್ಟಿಯಿಂದ ಆಡಲೇಬೇಕಾಗಿ ಬಂದಿದೆ. ಈಗ ಭೀಮರಾಯರಿಗೆ ಮದ್ದು ಗುಂಡು ಕಳಿಸುವುದೆಂದರೆ ಕಂಪನಿ ಸರಕಾರದ ವಿರುದ್ಧ ಮೊದಲನೆಯ ತುಪಾಕಿ ಹಾರಿಸಿದ ಹಾಗೇ ಆಗುವುದು. ಅನಂತರ ಯುದ್ಧ ನಮ್ಮ ಬಾಗಿಲಿಗೇ ಬರುವುದು.”

“ನಿಜ. ಅದು ನಮ್ಮ ಲಕ್ಷ್ಯದಲ್ಲೂ ಇದೆ.”

“ಯುದ್ಧ ಹೂಡುವುದೇ ನಿಶ್ಚಿತವಾದಲ್ಲಿ ನಾನೇನೂ ಬೇಡ ಅನ್ನುವದಿಲ್ಲ. ಆದರೆ, ಯುದ್ಧ ಹೂಡುವುದಕ್ಕೂ ಒಂದು ಯೋಗ್ಯ ಸಮಯ ಸಂದರ್ಭ ಅವಶ್ಯ ಅಲ್ಲವೇ ಸರಕಾರ್? ಒಂದು ವರ್ಷದವರೆಗಾದರೂ ಸಾಲುವಷ್ಟು ಮದ್ದು ಗುಂಡುಗಳನ್ನು ನಾವು ಸಂಗ್ರಹಿಸಬೇಕು, ಸಾವಿರಾರು ದಂಡಾಳುಗಳನ್ನು ಕೂಡಿಸಬೇಕು, ಅವರಿಗೆಲ್ಲಾ ಸೈನಿಕಶಿಕ್ಷಣ ಕೊಡಬೇಕು, ಕತ್ತಿ ಕಠಾರಿ ಭಲ್ಲೆ ಬಂದೂಕು ತಯಾರಿಸಿ ಶೇಖರಿಸಬೇಕು, ದಂಡಾಳುಗಳಿಗೆಲ್ಲಾ ಒಂದು ವರ್ಷದವರೆಗೂ ಸಾಲುವಷ್ಟು ಆಹಾರ ಧಾನ್ಯಗಳನ್ನು ಕೋಟೆಯಲ್ಲಿ ಕೂಡಿಡಬೇಕು, ಸುತ್ತಲಿನ ಸಂಸ್ಥಾನಿಕರ ಸಹಾಯವನ್ನೂ ದೊರಕಿಸಬೇಕು—ಆಮೇಲೆ ಯುದ್ಧ ಸುರುವಾದರೆ ಯಶಸ್ವಿಯಾಗಿ ಹೋರಾಡಬಹುದು, ಎಂಥ ಶತ್ರುವಿಗೂ ಸೊಪ್ಪು ಹಾಕಲಾರದಂಥ

ಭದ್ರವಾದ ಕೋಟೆಯೂ ದೇವರ ದಯೆಯಿಂದ ನಮಗಿದೆ. ಆದರೆ, ಯಾವ ಸಿದ್ಧತೆಯೂ ಇಲ್ಲದಿದ್ದಾಗ ಇಂಥ ಕೋಟೆಯಿದ್ದೂ ಪ್ರಯೋಜನವಾಗದು."

"ನೀವು ಅನ್ನುವದೂ ನಿಜ ದಿವಾಣಜಿ. ನಾವಿನ್ನೂ ಸಿದ್ಧತೆ ಮಾಡುವುದಿದೆಯೆಂದು ನಾವೂ ಒಪ್ಪುತ್ತೇವೆ. ಆದರೂ, ಈಗ ಬಂದಿರುವ ಮನುಷ್ಯನನ್ನು ಬರಿಗೈಯಲ್ಲಿ ಕಳಿಸುವುದಕ್ಕಿಂತ ಏನನ್ನಾದರೂ – ಸ್ವಲ್ಪವಾದರೂ – ಕಳಿಸುವುದು ಮೇಲಲ್ಲವೆ ?"

"ಸರಕಾರದ ಚಿತ್ತ. ಬೇಕಾದರೆ ಅಷ್ಟು ಹಣ ಕಳಿಸಬಹುದು."

"ನಾವೂ ಅದನ್ನೇ ಯೋಚಿಸಿದ್ದೆವು. ಆಯಿತು. ಹಣವನ್ನೇ ಕಳಿಸೋಣ. ಅದಿರಲಿ. ದಿವಾಣಜಿ. ಸಾಂಗಲಿ ಮತ್ತು ಮಿರಜಗಳಿಂದಾದರೂ ನಮಗೆ ಸಹಾಯ ಸಿಕ್ಕಬಹುದಲ್ಲವೆ ?"

"ಯಾವುದೂ ನಿಶ್ಚಿತವಾಗಿ ತಿಳಿಯದಂತಾಗಿದೆ ಸರಕಾರ್. ಎಲ್ಲರೂ ತಮ್ಮ ತಮ್ಮ ಗಾದಿ ಭದ್ರವಾಗಿ ಉಳಿಯುವುದನ್ನೇ ನೋಡುತ್ತಿದಾರೆ. ತಮ್ಮ ಬಂಧುಗಳೇ ಆಗಿರುವ ರಾಮದುರ್ಗಕರರಿಗೇ ತಮಗೆ ಸಹಾಯ ಮಾಡುವ ಅಪೇಕ್ಷೆಯಿಲ್ಲ. ತಾವು ಅವರಿಗೆ ಬರೆದ ಪತ್ರಗಳನ್ನೆಲ್ಲಾ ಅವರು ಇಂಗ್ರೇಜರ ವಶಕ್ಕೆ ಕೊಟ್ಟಿರಬಹುದೆಂದೂ ನನಗೆ ಅನುಮಾನವುಂಟು. ರಾಮದುರ್ಗದ ದರಬಾರದಲ್ಲಿರುವ ನಮ್ಮ ಗೂಢಚಾರನೊಬ್ಬ ಈ ವಿಷಯ ತಿಳಿಸಿದ್ದಾನೆ."

"ಕೊಡಲಿಯ ಕಾವು ಕುಲಕ್ಕೆ ಮೂಲ ಅನ್ನುವ ಮಾತೇನೂ ಸುಳ್ಳಲ್ಲ ದಿವಾಣಜಿ," ಎನ್ನುತ್ತಾ ಭಾಸ್ಕರರಾಯ ನಿಟ್ಟುಸಿರು ಬಿಟ್ಟು ಮೌನ ತಳೆದ. ಅವನ ಮನಸ್ಸು ಬಹಳ ಕಹಿಯಾಗಿತ್ತು.

ಭಾಸ್ಕರರಾಯನಿಗೆ ಅಷ್ಟು ಬೇಸರವಾಗುವುದೂ ಸ್ವಾಭಾವಿಕವೆ ಆಗಿತ್ತು. ನರಗುಂದ ಮತ್ತು ರಾಮದುರ್ಗಗಳೆರಡೂ ಹತ್ತಿರ ಹತ್ತಿರ ಇದ್ದ ರಾಜ್ಯಗಳು, ಅವಳಿ ಜವಳಿ ಸೋದರರಂತೆ ಅವುಗಳ ಬಾಂಧವ್ಯ. ಒಂದುಕಾಲಕ್ಕೆ ರಾಮದುರ್ಗ ಕೂಡಾ ನರಗುಂದ ಸಂಸ್ಥಾನಕ್ಕೇ ಸೇರಿದ ಪ್ರದೇಶವಾಗಿದ್ದು ಕಾರಣಾಂತರಗಳಿಂದ ಅದು ಪ್ರತ್ಯೇಕ ರಾಜ್ಯವಾಗಿತ್ತು. ಕೆಲವರ್ಷಗಳ ಹಿಂದೆ ರಾಮದುರ್ಗದ ರಾಜನಾಗಿದ್ದ ನಾರಾಯಣರಾಯ ನಿಪುತ್ರಿಕನಾಗಿ ತೀರಿಕೊಂಡ ಬಳಿಕ, ಭಾಸ್ಕರರಾಯನ ಚಿಕ್ಕ ತಮ್ಮನಾದ ಹರಿಹರರಾಯನನ್ನು ನಾರಾಯಣರಾಯನ ವಿಧವೆಯಾದ ರಾಧಾಬಾಯಿಗೆ ದತ್ತು ಮಗನನ್ನಾಗಿ ಮಾಡಿ ರಾಮದುರ್ಗದ ಗಾದಿಗೆ ಅಧಿಪತಿಯನ್ನಾಗಿ ಮಾಡಲಾಗಿತ್ತು. ಅದೇ ಹರಿಹರರಾಯನೇ ಈಗಲೂ ಅಲ್ಲಿ

ರಾಜ್ಯವಾಳುತ್ತಿದ್ದ. ಹಿರಿಯಣ್ಣನಾದ ಭಾಸ್ಕರರಾಯನಿಗೆ ಸಹಾಯ ಸಲ್ಲಿಸುವುದು ತನ್ನ ಧರ್ಮವೆಂಬ ಅರಿವು ಹರಿಹರರಾಯನಿಗೆ ಕೊಂಚವೂ ಇರಲಿಲ್ಲ.

"ಬೆನ್ನಲ್ಲಿ ಜನಿಸಿದ ತಮ್ಮನೇ ಸಹಾಯ ಮಾಡದಿರುವಾಗ ಇತರರು ಮಾಡುವರೆಂದು ತಿಳಿಯುವುದೂ ಭ್ರಾಂತಿಯೆ!" ಎಂದುಕೊಳ್ಳುತ್ತಾ ಭಾಸ್ಕರ ರಾಯ ಸಾಯಂಕಾಲದ ವಿಧಿಗಳನ್ನು ತೀರಿಸಲೆಂದು ಎದ್ದು ಹೊರಟ.

ಸ್ನಾನ, ಸಂಧ್ಯಾವಂದನೆ. ಪೂಜೆ, ಕುಲದೇವತಾ ದರ್ಶನಾದಿಗಳನ್ನು ಮುಗಿಸಿ ಆತ ಊಟಕ್ಕೆ ಕುಳಿತಾಗಲೂ ಅವನ ಮುಖ ಉದ್ವಿಗ್ನವಾಗಿಯೆ ಇತ್ತು. ಸೊಸೆಯ ಕೈಯಲ್ಲಿ ಖಾದ್ಯಪದಾರ್ಥಗಳನ್ನು ಕೊಟ್ಟು ಕಳಿಸುತ್ತಿದ್ದ ಅವನ ತಾಯಿ ಯಮುನಾಬಾಯಿ ಮಗನ ಉದ್ವಿಗ್ನತೆಯನ್ನು ಗಮನಿಸಿ ಚಿಂತಾತುರಳಾಗಿ ಕೇಳಿದಳು:

"ಯಾಕೆ ಬಾಬಾಸಾಹೇಬ್, ಮತ್ತೇನು ವಿಶೇಷ? ಮುಖ ಯಾಕೆ ಹೀಗಾಗಿದೆ?" ಬಾಬಾಸಾಹೇಬ್ ಎಂಬ ಇನ್ನೊಂದು ಹೆಸರೂ ಭಾಸ್ಕರ ರಾಯನಿಗಿತ್ತು.

"ಹೇಗಾಗಿದೆಯವ್ವ?" ಬಾಬಾಸಾಹೇಬ್ ತಾಯಿಯ ಕಡೆಗೆ ತಿರುಗಿ ಮುಗುಳ್ನಗಲು ಪ್ರಯತ್ನಿಸುತ್ತ ಹೇಳಿದ: "ವಿಶೇಷವಿಲ್ಲ, ಏನಿಲ್ಲ. ನೀನು ಸುಮ್ಮ ಸುಮ್ಮನೆ ಚಿಂತೆ ಮಾಡುತ್ತೀಯಾ."

"ಉಹೂಂ. ಖಂಡಿತವಾಗಿಯೂ ಇವತ್ತು ವಿಶೇಷವೇನೋ ನಡೆದಿದೆ. ಊಟದ ಕಡೆಗೂ ನಿನ್ನ ಲಕ್ಷ್ಯವಿಲ್ಲ."

"ಹೌದವ್ವ. ನೀನನ್ನುವದೂ ನಿಜ. ಇವತ್ತು ಗಡುಚಾದ ಸಮಸ್ಯೆಯೊಂದು ನನ್ನ ತಲೆ ತಿನ್ನುತ್ತಿದೆ. ಪರಿಹಾರವೇನೆಂಬುದು ಹೊಳೆಯಲೊಲ್ಲದು."

"ಮತ್ತೇನು ಸಮಸ್ಯೆ ಬಂತು ಮಗೂ? ಇಂಗ್ರೇಜರಿಗೇನಾದರೂ ಗೊತ್ತಾ ಯಿತೇ?"

"ಗೊತ್ತಾಗಿರಬಹುದು. ನಮ್ಮವರೇ ನಮಗೆ ದ್ರೋಹ ಬಗೆಯಲು ನಿಂತಾಗ ವೈರಿಗಳಿಗೆ ನಮ್ಮ ಗುಟ್ಟು ಗೊತ್ತಾಗುವದೆಷ್ಟು ತಡ? ಹೇಳು."

"ಯಾರಪ್ಪಾ ಅವರು ದ್ರೋಹ ಬಗೆಯುತ್ತಿರುವವರು?"

ಹರಿಹರರಾಯನ ಪ್ರಸ್ತಾಪವೆತ್ತಿ ತನ್ನ ತಾಯಿಗೆ ವ್ಯಥೆಯನ್ನುಂಟು ಮಾಡಲು ಭಾಸ್ಕರರಾಯನಿಗಿಷ್ಟವಿರಲಿಲ್ಲ. ಎಂತಲೇ, ಆತ ಆ ವಿಚಾರವನ್ನೇ ಬಿಟ್ಟು,

"ಜಮಖಂಡಿ, ಮಿರಜ, ಸಾಂಗಲಿಗಳಿಗೆ ಸಹಾಯಕ್ಕಾಗಿ ಕೇಳಿದ್ದೆವಲ್ಲ ಅವ್ವಾ, ಅವರಾರೂ ನಮಗೆ ಸಹಾಯ ಮಾಡುವ ಹಾಗೆ ಕಾಣುವದಿಲ್ಲ," ಎಂದು ಹೇಳಿದ.

"ಹೀಗಾಗಬಹುದು ಅಂತ ನನಗೆ ಮೊದಲೇ ಅನ್ನಿಸಿತ್ತು. ನಮ್ಮ ಜನರಲ್ಲಿದ್ದ ದೇಶಪ್ರೇಮ ಸ್ವಾತಂತ್ರ್ಯಪ್ರೇಮ ತ್ಯಾಗಬುದ್ಧಿ ಎಲ್ಲಾ ಬಾಜೀರಾಯರಿಗಿಂತ ಮೊದಲೇ ಇಲ್ಲವಾದವು. ತಮ್ಮ ಬೇಳೆ ಹೇಗೆ ಬೇಯಬಹುದೆಂದು ನೋಡುವ ಜನರೇ ಈಗ ಹೆಚ್ಚು. ಇಂಥವರನ್ನು ನೆಚ್ಚಿಕೊಂಡು ಬಂಡು ಹೂಡುವುದು ಸರಿಯಲ್ಲವೆಂದು ನಾನು ಆಗಲೇ ಹೇಳಿರಲಿಲ್ಲವೇ ನಿನಗೆ?"

"ನೀನು ಅನ್ನುವದೂ ಸರಿಯವ್ವಾ. ಆದರೂ. ನನ್ನ ಮನಸ್ಸು ತಡೆಯುತ್ತಿಲ್ಲ. ನಮ್ಮ ವಂಶದ ಮೇಲಾದ ಅನ್ಯಾಯವನ್ನು ಹೇಗೆ ಸಹಿಸಲಿ?"

"ಈಗಲಾದರೂ ಸಮಯ ಮಿಂಚಿಹೋಗಿಲ್ಲವಲ್ಲ ತಮ್ಮಾ? ನನ್ನ ಮಾತು ಕೇಳು. ಮತ್ತೊಬ್ಬಳನ್ನು ಮದುವೆಯಾಗು. ವೆಂಕಟೇಶ್ವರನ ಕೃಪೆಯಿಂದ ಇಂಗಿಲ್ಲ ನಾಳೆ ನೀನೂ ಒಬ್ಬ ಸುಪುತ್ರನ ತಂದೆಯಾಗಬಹುದು."

ನೂರು ಬಾರಿಯಾದರೂ ಯಮುನಾಬಾಯಿ ಆ ರೀತಿ ಉಪದೇಶಿಸಿದ್ದಳು, ಭಾಸ್ಕರರಾಯನ ಪತ್ನಿಯಾದ ಸಾವಿತ್ರಿಬಾಯಿಯೂ ಕೂಡಾ ಆ ವಿಚಾರವಾಗಿ ತನ್ನ ಪತಿಗೆ ಅನೇಕ ಬಾರಿ ಒತ್ತಾಯಪಡಿಸಿದ್ದಳು. ಮಂತ್ರಿಗಳು, ಸೇನಾಪತಿಗಳು. ಇನ್ನಿತರ ಬಂಧುಗಳು, ಸ್ನೇಹಿತರಾದ ಸಂಸ್ಥಾನಿಕರು ಎಲ್ಲರೂ ಅದೇ ಉಪಾಯ ಸೂಚಿಸಿದ್ದರು. ಭಾಸ್ಕರರಾಯನಿಗೆ ಮಾತ್ರ ಎರಡನೆಯ ಮದುವೆಯ ಮಾತೇ ಅಸಹನೀಯವಾಗಿತ್ತು. ಮೊದಲನೆಯ ಪತ್ನಿ ಜೀವಿಸಿರುವಾಗ ಇನ್ನೊಬ್ಬಳನ್ನು ಮದುವೆಯಾಗುವುದೊಂದು ಮಹಾಪರಾಧವೆಂದೇ ಆತ ಭಾವಿಸಿಕೊಂಡಿದ್ದ. ಎಂತಲೇ ಯಾರ ಒತ್ತಾಯಕ್ಕೂ ಆತ ಮಣಿದಿರಲಿಲ್ಲ.

ತಾಯಿ ಪುನಃ ಅದೇ ಪಲ್ಲವಿಗಾರಂಭಿಸುತ್ತಲೂ ಆತ ಮಾತನ್ನೇ ನಿಲ್ಲಿಸಿ ತಲೆ ತಗ್ಗಿಸಿಕೊಂಡು ಊಟ ಮಾಡತೊಡಗಿದ.

ಸ್ವಲ್ಪ ಹೊತ್ತು ಯಮುನಾಬಾಯಿಯೂ ಸುಮ್ಮನಿದ್ದು ಅನಂತರ ಮತ್ತೆ ಮಾತನಾಡಿದಳು:

"ಈಗಲಾದರೂ ನಿನಗೇನು ವೃದ್ಧಾಪ್ಯ ಬಂದಿರುವುದು ಅಷ್ಟರಲ್ಲೇ ಇದೆ. ಸಾವಿತ್ರಿಬಾಯಿಯೂ ಇನ್ನೂ ಯುವತಿಯೆ. ಈಕೆಯಲ್ಲಿಯೆ ಇಂದಿಲ್ಲ ನಾಳೆ

ಮಕ್ಕಳು ಹುಟ್ಟಬಹುದೆಂದು ಆಸೆಯಿಟ್ಟುಕೊಂಡು ಬಂಡಾಯದ ವಿಚಾರ ಬಿಟ್ಟು ಸುಮ್ಮನಿರಬಾರದೇಕೆ ?"

"ನನಗೇಕೋ ಆ ಆಸೆಯೇ ಉಳಿದಿಲ್ಲ ಅವ್ವಾ."

ನಿಜವಾಗಿ ಭಾಸ್ಕರರಾಯನಿಗೆ ಆ ವಿಚಾರವಾಗಿ ಆಸೆಯುಳಿದಿರಲಿಲ್ಲ. ಸಾವಿತ್ರಿಬಾಯಿಯ ಜತೆಗೆ ಸಂಸಾರಕ್ಕಾರಂಭವಾದುದಕ್ಕೆ ಇಪ್ಪತ್ತು ವರ್ಷಗಳಷ್ಟು ಅವಧಿ ಕಳೆದುಹೋಗಿತ್ತು. ಈ ದೀರ್ಘ ಕಾಲಾವಧಿಯಲ್ಲಿ ಅವಳು ಒಂದು ಬಾರಿಯೂ ಗರ್ಭವತಿಯಾಗಿರಲಿಲ್ಲ. ಎಷ್ಟೋ ದೇವತೆಗಳಿಗೆ ಹರಕೆ ಹೊತ್ತು ಕೊಂಡುದುದಾಗಿತ್ತು, ಎಷ್ಟೋ ವ್ರತ ಆಚರಿಸಿದುದಾಗಿತ್ತು, ಎಷ್ಟೋ ಔಷಧಿ ಕೊಡಿಸಿದುದಾಗಿತ್ತು. ಯಾವುದರಿಂದಲೂ ಏನೂ ಪ್ರಯೋಜನವಾಗಿರಲಿಲ್ಲ. ಸಾವಿತ್ರೀಬಾಯಿ ಬಂಜೆಯೆಂಬುದು ಸ್ಪಷ್ಟವಾಗಿತ್ತು. ಭಾಸ್ಕರರಾಯನಿಗೆ ಆಸೆಯೆ ಉಳಿದಿರಲಿಲ್ಲ.

"ಲಂಡನ್ನಿನಲ್ಲಿರುವ ಕೋರ್ಟಿನವರಿಗೆ ಮತ್ತೊಮ್ಮೆ ವಿನಂತಿ ಮಾಡಿ ನೋಡಿದರೆ ಹ್ಯಾಗೆ ಮಗೂ ?"

"ವಿನಂತಿ ಮಾಡಿಕೊಂಡದ್ದೂ ಆಯಿತಲ್ಲಾ ಅವ್ವಾ ? ಅವರಿಂದ ಕಡೆಯ ಉತ್ತರವೂ ಬಂತು. ದತ್ತಕಕ್ಕೆ ಒಪ್ಪಿಗೆ ಕೊಡಲು ಸಾಧ್ಯವಾಗದೆಂದು ಸ್ಪಷ್ಟ ವಾಗಿಯೆ ತಿಳಿಸಿದ್ದಾರೆ."

"ಆದರೂ ಮತ್ತೊಮ್ಮೆ...."

"ಅದರಿಂದೇನೂ ಉಪಯೋಗವಾಗದು ತಾಯಿ. ಸುಮ್ಮನೆ ನಮ್ಮ ಮರ್ಯಾದೆ ಹೋಗುವದಷ್ಟೆ. ಈಗಾಗಲೆ ಸಾಕಷ್ಟು ಅವಮಾನವಾಗಿದೆ. ಇನ್ನೂ ಹೆಚ್ಚಿನ ಅವಮಾನವನ್ನೇಕೆ ಬಯಸಬೇಕು ?" ಎಂದು ಹೇಳುತ್ತಿದ್ದಂತೆಯೆ ಭಾಸ್ಕರ ರಾಯನಿಗೆ ಊಟವೂ ರುಚಿಸದಂತಾಯಿತು.

ಊಟವನ್ನು ಅಷ್ಟಕ್ಕೇ ಬಿಟ್ಟು ಆತ ಎದ್ದು ಹೊರಡುತ್ತಲೂ ಸಾವಿತ್ರಿ ಬಾಯಿಯ ಕಣ್ಣುಗಳಲ್ಲಿ ಅಶ್ರುಗಳು ಚಿಮ್ಮಿಬಂದುವು. ಯಮುನಾಬಾಯಿಯ ಕೊರಳೂ ಬಿಗಿದುಬಂತು. ಲಂಡನ್ನಿಂದ ಕೊನೆಯ ಉತ್ತರ ಬಂದಂದಿನಿಂದ ಭಾಸ್ಕರ ರಾಯನಿಗೆ ಊಟದಲ್ಲಿ ಆಸಕ್ತಿಯೆ ಉಳಿದಿರಲಿಲ್ಲ. ಅದರಿಂದಾಗಿ ಅತ್ತೆ ಸೊಸೆಯ ರಿಗೂ ಗಂಟಲಲ್ಲಿ ತುತ್ತು ಇಳಿಯದಂತಾಗಿತ್ತು. ಅರಮನೆಯಲ್ಲೆಲ್ಲಾ ಒಂದು ಬಗೆಯ ಉದಾಸ ವಾತಾವರಣ ಪಸರಿಸಿದಂತಾಗಿತ್ತು. ಯಾರಿಗೂ ಯಾವುದಕ್ಕೂ ಉತ್ಸಾಹವುಳಿದಿರಲಿಲ್ಲ.

ಉದ್ವಿಗ್ನ ಮನಸ್ಥಿತಿಯಲ್ಲಿಯೇ ಭೋಜನಗೃಹದಿಂದೆದ್ದು ಬಂದ ಭಾಸ್ಕರ ರಾಯ ರಾಘೋಪಂತನನ್ನು ಬರಮಾಡಿಕೊಂಡು,

"ನಾಳೆ ಮುಂಜಾನೆ ಒಂದು ಕಡೆಗೆ ಮದ್ದು ಗುಂಡು ಕಳಿಸಬೇಕಾಗಿದೆ. ರಾತ್ರಿಯೇ ಅದರ ತಯಾರಿಯಾಗಲಿ," ಎಂದು ಹೇಳಿದ.

"ಜೀ ಹುಜೂರ್!"

"ಊಟವಾಯಿತೋ ಇಲ್ಲವೋ ?"

"ಆಯಿತು ಹುಜೂರ್....ಇಲ್ಲ...." ಎಂದು ರಾಘೋಪಂತ ತಡವರಿಸುತ್ತ ಹೇಳಿದ. ಊಟಕ್ಕೆ ಕುಳಿತಿದ್ದಾಗಲೆ ದೊರೆಯಿಂದ ಕರೆ ಬಂದಿದ್ದುದರಿಂದ ಅರ್ಧಕ್ಕೇ ಊಟ ಬಿಟ್ಟಿದ್ದು ಆತ ಓಡುತ್ತ ಬಂದಿದ್ದ.

ಊಟ ತಿಂಡಿಗಳ ಬಗೆಗೆ ರಾಘೋಪಂತನಿಗಿದ್ದ ಮೋಹವನ್ನು ಭಾಸ್ಕರ ರಾಯನೂ ಬಲ್ಲವನಾಗಿದ್ದ. ಸೇನಾನಾಯಕನ ಸ್ಥಾನದ ಬದಲು ಇವನಿಗೆ ಭೋಜನ ಗೃಹದ ನಾಯಕನ ಸ್ಥಾನವೇ ಯೋಗ್ಯವಾದುದೆಂದು ಭಾಸ್ಕರರಾಯನಿಗೂ ಅನೇಕ ಬಾರಿ ಅನ್ನಿಸಿತ್ತು. ಸೇನಾಪತಿಯಾದವನಿಗೆ ಅತ್ಯಗತ್ಯವಾಗಿ ಇರಬೇಕಾದ ದೇಹ ದಾರ್ಢ್ಯವೂ ರಾಘೋಪಂತನಿಗಿರಲಿಲ್ಲ, ಕಲಿತನ, ಕೆಚ್ಚೆದೆಗಳೂ ಇರಲಿಲ್ಲ. ಇಂಥವ ನನ್ನು ಸೇನಾಪತಿಯನ್ನಾಗಿ ನಿಯಮಿಸಲು ಭಾಸ್ಕರರಾಯನಿಗೆ ಮನಸ್ಸಿರಲಿಲ್ಲ ವಾದರೂ ಇತರ ಜಾತಿಯ ಜನರನ್ನು ನಂಬಲಾರದೆ ಈ ಸ್ವಜಾತಿ ಬಾಂಧವನನ್ನು ಅಧಿಕಾರಕ್ಕೇರಿಸಬೇಕಾಗಿ ಬಂದಿತ್ತು. ಸೇನಾನಾಯಕನ ಸ್ಥಾನಕ್ಕೆ ಬಂದ ಮೇಲಾ ದರೂ ರಾಘೋಪಂತ ಆ ಸ್ಥಾನಕ್ಕೆ ತಕ್ಕ ಅರ್ಹತೆಗಳನ್ನು ತಂದುಕೊಳ್ಳಲು ಯತ್ನಿಸ ಬಹುದೆಂದು ಭಾಸ್ಕರರಾಯ ದೂರದ ಆಸೆಯೊಂದನ್ನಿರಿಸಿಕೊಂಡಿದ್ದ. ಆದರೆ, ನರಿ ಎಂದಾದರೂ ಹುಲಿಯಾಗಲು ಸಾಧ್ಯವೆ ? ಭೋಜನಪ್ರೇಮಿ ರಾಘೋಪಂತ ಸೇನಾಪತಿಯಾದ ತರುವಾಯವೂ ಸಮರಪ್ರೇಮಿಯಾಗದೆ ಭೋಜನಪ್ರೇಮಿ ಯಾಗಿಯೆ ಉಳಿದಿದ್ದ. ಸೈನಿಕರ ಕವಾಯತನ್ನು ಅರ್ಧಕ್ಕೆ ಬಿಟ್ಟು ಹೋಗುವು ದೆಂದರೆ ಅವನಿಗೇನೂ ಅನಿಸುತ್ತಿರಲಿಲ್ಲ. ಊಟವನ್ನು ಅರ್ಧಕ್ಕೇ ಬಿಟ್ಟೇಳುವ ಪ್ರಸಂಗಬಂದಾಗ ಮಾತ್ರ ಅವನ ಪ್ರಾಣವೆ ಹೋದಂತಾಗುತ್ತಿತ್ತು.

ಅದನ್ನು ಚೆನ್ನಾಗಿ ಬಲ್ಲವನಾಗಿದ್ದ ಭಾಸ್ಕರರಾಯ ಕೊಂಚ ಕನಿಕರದಿಂದಲೂ ಕೊಂಚ ತಿರಸ್ಕಾರದಿಂದಲೂ ಹೇಳಿದ :

"ಊಟ ಬಿಟ್ಟು ಬಂದಹಾಗೆ ಕಾಣುತ್ತೆ. ಹೋಗಿ ಮುಗಿಸಿಕೊಂಡು ಬನ್ನಿ."

" ಊಟದ ಮಾತಿರಲಿ ಸರಕಾರ್. ಮೊದಲು ತಮ್ಮ ಆಜ್ಞೆಯಂತೆ ಕೆಲಸವಾಗಬೇಕು. ಮದ್ದು ಗುಂಡುಗಳನ್ನು ಪೆಟ್ಟಿಗೆಗಳಲ್ಲಿ ತುಂಬುವುದೇ? ಎಷ್ಟು ಪೆಟ್ಟಿಗೆಗಳು?" ಇಲ್ಲದ ಉತ್ಸಾಹ ಪ್ರದರ್ಶಿಸುವ ಯತ್ನ ಮಾಡುತ್ತ ರಾಘೋಪಂತನೆಂದ.

" ನಮ್ಮಲ್ಲೀಗ ಎಷ್ಟು ಪೆಟ್ಟಿಗೆ ತುಂಬುವಷ್ಟು ಸಾಮಗ್ರಿಯುಂಟು?"

" ನೂರಿನ್ನೂರು ಪೆಟ್ಟಿಗೆಯಷ್ಟು ಇದ್ದಿತು ಸರಕಾರ್."

" ಸರಿ. ಈಗ ಎರಡು ಪೆಟ್ಟಿಗೆ ತುಂಬಿ ತಯಾರು ಮಾಡಿರಿ. ಇನ್ನೂ ಕತ್ತಲಿರುವಾಗಲೇ ಬಂಡಿ ಸಿದ್ಧವಾಗಲಿ," ಎಂದು ಆಜ್ಞೆಯಿತ್ತು ರಾಘೋಪಂತನನ್ನು ಕಳಿಸಿ ವಿಷ್ಣುವನ್ನು ಬರಮಾಡಿಕೊಂಡು ಭಾಸ್ಕರರಾಯ ಕೇಳಿದ:

" ಆ ಮನುಷ್ಯನ ಊಟವಾಯಿತೇ ವಿಷ್ಣು?"

" ಆಯಿತು ಸರಕಾರ್."

" ಇಲ್ಲೇ ಇದಾನೆಯೆ ಆತ?"

" ಇಲ್ಲ ಸರಕಾರ್. ಊಟ ಮುಗಿಸಿದವನೇ ಊರಲ್ಲಿ ಹೋಗಿ ಬರುತ್ತೇನೆಂದು ಹೇಳಿ ಹೋಗಿದ್ದಾನೆ."

" ಒಳ್ಳೆಯದು. ಅವನು ಬಂದ ಕೂಡಲೇ ಇನ್ನೂ ಎರಡು ತಾಸು ರಾತ್ರಿಯಿರುವಾಗಲೇ ಇಲ್ಲಿಂದ ಹೊರಡಲು ತಯಾರಾಗಿರಬೇಕು ಎಂದು ಅವನಿಗೆ ತಿಳಿಸು."

" ಅವನು ಬೇಗ ಬರದಿದ್ದರೇನು ಮಾಡುವುದು ಹುಜೂರ್?"

" ಹುಡುಕಿಸಿ ಕರೆತರಬೇಕು. ಅವನು ಬಹಳ ಮಾಡಿ ಆ ರಾಜಶೇಖರನ ಮನೆಗೆ ಹೋಗಿರಬಹುದು."

" ಅಪ್ಪಣೆ ಹುಜೂರ್," ಎಂದು ನುಡಿದು ವಿಷ್ಣು ಹೊರಡುತ್ತಿದ್ದಂತೆಯೆ ದೊರೆ ಅವನನ್ನು ತಡೆದು ನಿಲ್ಲಿಸಿ,

" ಕೊಟ್ಟ ವಚನಕ್ಕೆ ತಪ್ಪಬಾರದಲ್ಲವೇ ವಿಷ್ಣು?" ಎಂದು ಪ್ರಶ್ನಿಸಿದ.

" ತಪ್ಪಬಾರದು ಹುಜೂರ್."

" ಎಂಥಾ ಪ್ರಸಂಗದಲ್ಲೂ?"

" ಎಂಥಾ ಪ್ರಸಂಗದಲ್ಲೂ ತಪ್ಪಬಾರದೆಂದು ಧರ್ಮಶಾಸ್ತ್ರಗಳು ಹೇಳುತ್ತವಲ್ಲ ಹುಜೂರ್. ಕರ್ಣ ತನ್ನ ವಚನದಂತೆ ನಡೆದುಕೊಳ್ಳಲೆಂದು ಪ್ರಾಣವನ್ನೂ ಅರ್ಪಿಸಿದ...."

"ಶಹಬ್ಬಾಸ್! ನೀನೀಗ ಸರಿಯಾದ ಮಾತು ಆಡಿದೆ. ನಾವು ಮೆಚ್ಚಿದೆವು!" ಎಂದ ಭಾಸ್ಕರರಾಯ. ರಾಮರಾಯ ಬಂದು ಹೋದಂದಿನಿಂದ ಅವನ ಎದೆಯಲ್ಲಿ ನಡೆದಿದ್ದ ತುಮುಲ ಆಗ ಶಾಂತವಾಯಿತು.

೭

ಮಧ್ಯರಾತ್ರಿ. ನರಗುಂದ ನಗರದ ಬೀದಿಗಳಲ್ಲಾಗಲಿ ಮನೆಗಳಲ್ಲಾಗಲಿ ಕೊಂಚವೂ ಬೆಳಕು ಕಾಣುತ್ತಿರಲಿಲ್ಲ. ಎಲ್ಲೆಲ್ಲೂ ನೀರವತೆ. ರಸ್ತೆಗಳಲ್ಲಿ ಜನರ ಸುಳುವಿರಲಿಲ್ಲ. ಅಂಥ ಸಮಯದಲ್ಲಿ ಬನ್ಯಾಬಾಪುವಿನ ನಿವಾಸಸ್ಥಾನದಲ್ಲಿ ಮಾತ್ರ ಹಣತೆಯೊಂದುರಿಯುತ್ತಿತ್ತು. ಅಟ್ಟದ ಮೇಲಿನ ಕೊಟಡಿಯಲ್ಲಿ ಕುಳಿತು ಬಾಪುವೂ ಕೃಷ್ಣಾಜಿಯೂ ಗಂಭೀರವಾದ ಆಪ್ತಾಲೋಚನೆಯಲ್ಲಿ ಮಗ್ನರಾಗಿದ್ದರು. ಕೃಷ್ಣಾಜಿ ಅಲ್ಲಿಗೆ ಬಂದು ಬಹಳ ವೇಳೆಯಾದ ಹಾಗಿರಲಿಲ್ಲ. ಅವನಿನ್ನೂ ತನ್ನ ಮುಖದ ಮೇಲಿನ ಬೆವರನ್ನು ಒರಸಿಕೊಳ್ಳುತ್ತಿದ್ದ. ಬನ್ಯಾಬಾಪುವಿನ ಕರೆ ಬರುತ್ತಲೂ ಆತ ಅವಸರದಿಂದ ಧಾವಿಸಿ ಬಂದಂತೆ ತೋರುತ್ತಿತ್ತು.

"ಅಂದರೆ? ಮುಂಡರಗಿಯ ಬಂಡುಗಾರನಿಗೆ ಮದ್ದು ಗುಂಡು ಹೋಗುವುದು ಖಾತ್ರಿಯಾಯಿತೇ?" ಎಂದು ಕೃಷ್ಣಾಜಿ ಕೇಳಿದ.

"ರಾಘೋಬನನ್ನು ಕರೆದು ರಾಜಾಸಾಹೇಬರು ಅಪ್ಪಣೆ ಕೊಟ್ಟುದನ್ನು ಈ ಕಿವಿಗಳಿಂದಲೇ ಕೇಳಿ ಬಂದೆ. ಎರಡು ತಾಸು ರಾತ್ರಿಯಿರುವಾಗಲೇ ಬಂಡಿ ಹೊರಡುವುದು."

"ಈಗ ಏನು ಮಾಡಬೇಕಂತೀ ಬಾಪು?"

"ಇದೊಂದು ಅತ್ಯಂತ ಮಹತ್ವದ ವಾರ್ತೆ. ಈಗಿಂದೀಗ ನಾವು ಈ ವಾರ್ತೆ ತಿಳಿಸಿದರೆ ಮದ್ದು ಗುಂಡು ಎಲ್ಲಾ ಸರಕಾರದ ಕೈಗೆ ಸಿಗುವುದು. ಇಂಥ ಕಾರ್ಯ ಸಾಧಿಸಿಕೊಟ್ಟದ್ದಕ್ಕಾಗಿ ನಮಗೆ ದೊಡ್ಡ ಬಹುಮಾನವೂ ದೊರೆಯಬಹುದು."

"ಅದೇನೋ ನಿಜ. ಆದರೆ ಸಾಹೇಬರು ಸಮೀಪದಲ್ಲಿಲ್ಲವಲ್ಲ? ನಾವು ಕಳಿಸಿದ ಆಳು ಅಲ್ಲಿಗೆ ಹೋಗಿ ಮುಟ್ಟುವುದಕ್ಕೇ ಒಂದು ದಿನ ಹಿಡಿಯುವುದು. ಅಷ್ಟರೊಳಗಾಗಿ ಮದ್ದು ಗುಂಡು ಮುಂಡರಗಿಯ ಬಂಡುಗಾರನಿಗೆ ಮುಟ್ಟಬಹುದೊ ಏನೊ."

"ಅದೆಂತು ಮುಟ್ಟುತ್ತೆ ಪಂತಜಿ? ನಮ್ಮ ಆಳು ಹೋಗುವುದು ಕುದುರೆಯ ಮೇಲೆ. ಮದ್ದು ಗುಂಡು ಹೋಗುವುದು ಎತ್ತಿನ ಚಕ್ಕಡಿಯ ಮೇಲೆ. ಅದು ಭೀಮರಾಯನಿಗೆ ಮುಟ್ಟುವುದಕ್ಕೆ ಮೂರು ದಿನವಾದರೂ ಬೇಕು. ಅಷ್ಟರಲ್ಲಿ ಅದನ್ನು ಹಿಡಿಯುವುದು ಶಕ್ಯವಿದೆ."

"ಹಾಗಿದ್ದರೆ ಅಡ್ಡಿಯಿಲ್ಲ," ಎಂದ ಕೃಷ್ಣಾಜಿ.

ಅವನ ಅನುಮತಿ ಸಿಕ್ಕುತ್ತಲೂ ಬಾಪು ಅಟ್ಟ ಇಳಿದು ಹೋಗಿ, ಕೆಳಗೆ ಮಲಗಿಕೊಂಡಿದ್ದ ಮನುಷ್ಯನೊಬ್ಬನನ್ನು ಎಬ್ಬಿಸಿ, ಸುದ್ದಿ ತಿಳಿಸಿ ಬರುವ ಕೆಲಸ ವನ್ನು ಅವನಿಗೊಪ್ಪಿಸಿ, ಕೂಡಲೆ ನರಗುಂದದಿಂದ ಹೊರಡಲು ಅಪ್ಪಣೆಯಿತ್ತು ಮತ್ತೆ ಅಟ್ಟಕ್ಕೆ ಬಂದ.

ಅವನು ಬರುವವರೆಗೆ ಗುಡುಗುಡಿ ಸೇದುತ್ತ ಹಾಸುಗೆ ಸುರುಳಿಗೊರಗಿ ಸುಖವಾಗಿ ಕುಳಿತಿದ್ದ ಕೃಷ್ಣಾಜಿ, ಬಾಪು ಬರುತ್ತಲೂ ಕೇಳಿದ:

"ರಾಜಾಸಾಹೇಬರು ರಾಘೋಬನಿಗೆ ಮತ್ತೇನು ಹೇಳಿದರು ಬಾಪು?"

"ಮತ್ತೇನೂ ಇಲ್ಲ."

"ಅವರ ಮನಸ್ಸಿನಲ್ಲಾದರೂ ಏನಿರಬಹುದು?"

"ಅವರು ಲಹರಿಯ ಮನುಷ್ಯರೆಂಬುದು ನಿಮಗೂ ಗೊತ್ತಿದೆಯಲ್ಲ ಪಂತಜಿ? ಅಂಥವರ ಮನಸ್ಸಿನಲ್ಲಿ ಯಾವ ವಿಚಾರವೂ ಸ್ಥಿರವಾಗಿ ಉಳಿಯು ವುದಿಲ್ಲ."

"ಅದು ನಿಜ."

"ಇತ್ತಿತ್ತಲಾಗಿ ನನ್ನ ಬಗ್ಗೆ ಸ್ವಲ್ಪ ಸಂಶಯವೂ ಬಂದ ಹಾಗೆ ಕಾಣುತ್ತೆ."

ಕೃಷ್ಣಾಜಿಯ ಎದೆಗುಂಡಿಗೆ ಡವಡವನೆ ಹೊಡೆದುಕೊಳ್ಳತೊಡಗಿತು.

"ಸಂಶಯ ಬಂದಿದೆಯೆ? ಹೇಗೆ ಗೊತ್ತಾಯಿತು ನಿನಗೆ?"

"ಮೊದಲು ಮೊದಲು, ಯಾರೇ ಬಂದಾಗಲೂ ನಾನು ರಾಜಾಸಾಹೇಬರ ಸಮೀಪದಲ್ಲೇ ಇದ್ದರೂ ಅವರೇನು ಬೇಡ ಅನ್ನುತ್ತಿರಲಿಲ್ಲ. ಈಚೆಗೆ ಮಾತ್ರ, ಮಹತ್ವದ ಮಾತು ನಡೆಯುವ ಸಂದರ್ಭವಿದ್ದಾಗಲೆಲ್ಲಾ ನನ್ನನ್ನು ಹೊರಗೆ ಕಳಿಸುತ್ತಾರೆ. ನಿನ್ನೆ ಸಾಯಂಕಾಲ ಆ ರಾಜಶೇಖರನೂ ಇನ್ನೊಬ್ಬನೂ ಭೇಟಿಗೆ ಬಂದಾಗಲೂ ಹಾಗೇ ಆಯಿತು."

"ಅಂದರೆ– ಅವರು ಯಾತಕ್ಕಾಗಿ ಬಂದಿದ್ದರೆಂಬುದು ನಿನಗೆ ತಿಳಿಯಲೇ ಇಲ್ಲವೆ?"

"ಹೊನ್ನನೇನೋ ಮುಂಡರಗಿ ಭೀಮರಾಯನ ಕಡೆಯಿಂದ ಬಂದದ್ದು ತಿಳಿಯಿತು. ರಾಜಶೇಖರ ಮಾತ್ರ...."

"ಜಮುಖಂಡಿಯ ರಾಜಾಸಾಹೇಬರೇ ಅವನನ್ನು ಕಳಿಸಿರಬಹುದೋ ಏನೊ."

"ಇದ್ದರೂ ಇರಬಹುದು. ಈ ವಿಷಯ ಇನ್ನೂ ಪತ್ತೆ ಮಾಡಬೇಕು. ಇವತ್ತೂ ಅವನ ಹಿಂದೆ ನಮ್ಮ ಗೂಢಚಾರರಿದ್ದೇ ಇದಾರೆ. ನಾಳೆಗೆ ಏನಾದರೂ ತಿಳಿಯಬಹುದು."

"ಇವರೆಲ್ಲಾ ಕೂಡಿದ್ದು ನೋಡಿದರೆ ನಮ್ಮ ರಾಜಾಸಾಹೇಬರು ಇನ್ನು ಒಂದೆರಡು ವಾರಗಳಲ್ಲೇ ಏನಾದರೂ ಗದ್ದಲ ಮಾಡಬಹುದು ಅಂತ ಅನಿಸುತ್ತೆ."

"ರಾಮರಾಯ ಮಾತ್ರ ಯಾವ ಗದ್ದಲವೂ ಬೇಡ ಅನ್ನುತ್ತಾನೆ."

"ಅವನೊಬ್ಬ ಕಳ್ಳ. ಒಳಗೊಂದು ಇಟ್ಟುಕೊಂಡು ಹೊರಗೊಂದು ಆಡುತ್ತಾನೆ. ರಾಜಾಸಾಹೇಬರು ಬಂಡು ಹೂಡದಿರುವುದಿಲ್ಲ ಅನ್ನುವುದು ಅವನಿಗೆ ಗೊತ್ತಿದೆ, ಆತ ಬೇಡ ಅಂದರೂ ಅವರೇನು ಬಿಡುವುದಿಲ್ಲ – ಅದಕ್ಕೇ ಬೇಡ ಅಂದ ಹಾಗೆ ನುಡಿವುದು. ಮುಂದೆ ತಾನು ನಿರಪರಾಧಿಯೆಂದು ಸಾಧಿಸಲು ಈ ಮಾತು ಉಪಯೋಗವಾಗುವುದಿಲ್ಲವೆ ? ಅದಕ್ಕಾಗಿ...."

"ಆಗ ಇವನ ಮಾತನ್ನು ನಂಬುವವರಾದರೂ ಯಾರು ?"

"ಆ ಇಂಗ್ರೇಜರೂ ಬಲು ವಿಚಿತ್ರ ಮಂದಿ ಬಾಪು. ಅವರು ಯಾವಾಗ ಏನು ಮಾಡಿಯಾರೆಂದು ನಿಶ್ಚಿತವಾಗಿ ಹೇಳಲು ಬರುವುದಿಲ್ಲ. ಅವರು ರಾಮರಾಯನನ್ನು ಬಿಟ್ಟರೂ ಬಿಡಬಹುದು. ಮೈಸೂರಿನಲ್ಲಿ ನಡೆದದ್ದು ನಿನಗೆ ಗೊತ್ತಿಲ್ಲವೆ ? ಟೀಪುಸುಲ್ತಾನನ ಮುಖ್ಯಮಂತ್ರಿಯಾಗಿದ್ದ ಪೂರ್ಣಯ್ಯನಿಗೆ ಇಂಗ್ರೇಜರೇನೂ ಮಾಡಲಿಲ್ಲ. ಮತ್ತೆ ಅವನನ್ನೇ ಹೊಸರಾಜರಿಗೂ ಮಂತ್ರಿಯನ್ನಾಗಿ ನೇಮಿಸಿದರು."

"ಹಾಗೇ ಇಲ್ಲೂ ಆಗಬಹುದು ಅಂತೀರಾ ಪಂತಜಿ ?"

"ಆಗಬಹುದು. ಆಗಲಿಕ್ಕಿಲ್ಲ. ಹೀಗೇ ಆದೀತು ಅಂತ ಹೇಳಲಾರೆ. ಆ ಕೆಂಪು ಮೋರೆಯವರ ತಲೆಯೇ ಹೀಗೆ!"

"ಬಂಡಾಯದ ಸದ್ದು ಅಡಗಿದ ಮೇಲೂ ರಾಮರಾಯನೇ ದಿವಾಣನಾಗಿ ಉಳಿದರೆ ನಮ್ಮ ಸ್ಥಾನಮಾನಗಳ ಗತಿಯೇನು ?"

ಗುಡುಗುಡಿಯ ಹೊಗೆಯೆಳೆಯುತ್ತ ಕೃಷ್ಣಾಜಿ ಕೆಲಹೊತ್ತು ಸುಮ್ಮನೆ ಕುಳಿತಿದ್ದು ಅನಂತರ ಮಾತನಾಡಿದ:

"ಸಾಹೇಬರು ನಮ್ಮೆದುರು ಹೇಳಿದ್ದುದೇನು ಬಾಪು? ಸಂಸ್ಥಾನವನ್ನೇ ಖಾಲಸಾ ಮಾಡುವುದಾಗಿ ಅವರು ಹೇಳಿರಲಿಲ್ಲವೆ? ನನಗೂ ನಿನಗೂ ಜಹಗೀರು ಹಾಕಿಕೊಡುವರಷ್ಟೆ."

"ರಾಮದುರ್ಗಕರರಿಗೆ ಬಹಳ ದಿನದಿಂದ ಈ ಸಂಸ್ಥಾನದ ಮೇಲೆ ಕಣ್ಣಿದೆ. ಅವರು ನಮ್ಮ ರಾಜಾಸಾಹೇಬರ ತಮ್ಮಂದಿರಾದುದರಿಂದ ನ್ಯಾಯವಾಗಿ ಈ ಸಂಸ್ಥಾನ ತಮಗೇ ಸೇರಬೇಕೆಂದು ಸಾಹೇಬರೆದುರು ವಾದಿಸಿರುವರಂತೆ. ಕಂಪನಿ ಸರಕಾರದ ಒಪ್ಪಿಗೆ ದೊರೆತರೆ ಹಾಗೂ ಮಾಡಲು ಬರಬಹುದೆಂದು ಸಾಹೇಬರು ಹೇಳಿರುವರಂತೆ. ಒಂದುವೇಳೆ ಒಪ್ಪಿಗೆ ದೊರೆತರೆ...."

"ರಾಮರಾಯನನ್ನೇ ಅವರು ಇಲ್ಲಿ ದಿವಾಣನನ್ನಾಗಿ ಇಡಬಹುದು ಅಂತೀಯಾ?"

"ಮುದುಕನಂತೂ ಬಹಳ ಧೂರ್ತನಿದಾನೆ. ಅವನು ಎಂಥವರನ್ನೂ ಮರುಳು ಮಾಡಬಲ್ಲ."

"ನೋಡೋಣ. ಅಷ್ಟು ದೂರದ ಮಾತು ಈಗೇಕೆ? ಇಂದು ನಾಳೆ ಏನಾಗಬಹುದೆಂಬುದನ್ನು ಮಾತ್ರ ವಿಚಾರ ಮಾಡಿದರೆ ಸಾಕು. ಮದ್ದು ಗುಂಡಿನ ಬಂಡಿ ಇಂಗ್ರೇಜರ ಕೈಗೆ ಸಿಕ್ಕ ಬಳಿಕ ಅವರೇನು ಮಾಡಬಹುದು ಬಾಪು?"

"ಬಂಡಿ ಹೊಡೆದುಕೊಂಡು ಹೋಗುವವನನ್ನು ಹಿಡಿದು ವಿಚಾರಣೆ ನಡೆಸುವರು."

"ನಮ್ಮ ರಾಜಾಸಾಹೇಬರು ಮದ್ದು ಗುಂಡು ಕಳಿಸಿದರೆಂದು ಅವನೇನು ಹೇಳಲಿಕ್ಕಿಲ್ಲ, ಅಲ್ಲದೆ?"

"ಹೇಳಲಿಕ್ಕಿಲ್ಲ. ಆದರೆ ನಮ್ಮ ಸಾಕ್ಷಿ ಇದ್ದೇ ಇವೆಯಲ್ಲ?"

"ಮುಂದೆ ಇಂಗ್ರೇಜರೇನು ಮಾಡಬಹುದು? ಆಗಿಂದಾಗ ನಮ್ಮ ರಾಜಾ ಸಾಹೇಬರನ್ನು ಹಿಡಿಯಬಹುದು ಅಂತೀಯಾ?"

"ಅವರು ಅಷ್ಟು ಅವಸರ ಮಾಡಲಿಕ್ಕಿಲ್ಲ ಅಂತ ನನಗೇನೋ ಅನಿಸುತ್ತೆ. ಆದರೂ ಏನೂ ಹೇಳಲು ಬರುವಂತಿಲ್ಲ. ನಮ್ಮ ತಯಾರಿಯಲ್ಲೇ ನಾವಿರಬೇಕು."

"ನಾವು ಪಿತೂರಿಯಾಗಿರುವುದು ರಾಜಾಸಾಹೇಬರಿಗೆ ಈಗಲೇ ತಿಳಿದರೆ ದೇವರೇ ಗತಿ!" ಎಂದ ಕೃಷ್ಣಾಜಿ.

"ಈಗಲೇ ಹ್ಯಾಗೆ ತಿಳಿಯುತ್ತೆ ಪಂತಜಿ? ನೀವೇನೂ ಅಂಜಬೇಡಿರಿ."

"ನಿನಗೇನಪ್ಪ! ಮನೆಯಿಲ್ಲ, ಮಾರಿಲ್ಲ, ಹೆಂಡಿರಿಲ್ಲ, ಮಕ್ಕಳಿಲ್ಲ. ಪ್ರಸಂಗ ಬಂದರೆ ಉಟ್ಟ ಬಟ್ಟೆಯ ಮೇಲೇ ಊರು ಬಿಟ್ಟು ಹೊರಡಬಲ್ಲೆ. ನಾನು ಹಾಗೆ ಮಾಡಲು ಬರುತ್ತದೆಯೆ? ದೊಡ್ಡ ಸಂಸಾರ ಕಟ್ಟಿಕೊಂಡು...."

"ಏನೂ ಆಗುವುದಿಲ್ಲ ಸುಮ್ಮನಿರ್ರಿ ಪಂತಜಿ. ವೆಂಕಟೇಶ್ವರ ನಮ್ಮನ್ನು ಕಾಪಾಡುತ್ತಾನೆ," ಎಂದು ದೇವರ ಭರವಸೆ ತೋರಿಸಿದ ಬಾಪು. "ನನಗೆ ಜಹಗೀರು ದೊರೆತ ಬಳಿಕ ಒಂದು ವಾರದವರೆಗೂ ಬ್ರಾಹ್ಮಣಭೋಜನ ಏರ್ಪಡಿಸುವುದಾಗಿ ದೇವರಿಗೆ ಅರಕೆ ಹೊತ್ತಿದ್ದೇನೆ."

"ಆಯಿತಪ್ಪ. ನಾನಿನ್ನು ಹೊರಡುತ್ತೇನೆ. ಸ್ವಲ್ಪವಾದರೂ ನಿದ್ದೆ ಬೇಕಲ್ಲಾ?" ಎಂದು ಕೃಷ್ಣಾಜಿ ಎದ್ದು ಹೊರಡುತ್ತಲೂ ಬಾಪು ಚೇಷ್ಟೆಯ ಸ್ವರದಲ್ಲಿ ಕೇಳಿದ:

"ಇಲ್ಲಿಂದ ನೇರವಾಗಿ ಮನೆಗೆ ಹೋಗುವಿರೋ – ಅಥವಾ...."

"ಅಯ್ಯೋ ಮಾರಾಯಾ. ಸದ್ಯಕ್ಕಂತೂ ಅಲ್ಲಿಗೆ ಹೋಗುವುದಿಲ್ಲಪ್ಪ. ಗದ್ದಲವೆಲ್ಲಾ ಮುಗಿದ ಬಳಿಕ ಚೈನಿಯ ಮಾತು...." ಎಂದು ಕೃಷ್ಣಾಜಿಯೂ ನಗುನಗುತ್ತಾ ನುಡಿದು ಅಟ್ಟ ಇಳಿಯುತ್ತಿದ್ದಂತೆಯೇ ಹೊರಬಾಗಿಲ ಮೇಲೆ ಟಕ್‌ಟಕ್ ಎಂದು ಸದ್ದಾದುದು ಕೇಳಬಂದಿತು.

"ಯಾರೋ ಬಂದಾರೆ ನೋಡು ಬಾಪು."

"ನೀವು ಸ್ವಲ್ಪ ಇಲ್ಲೇ ಇರ್ರಿ ಹಾಗಾದರೆ," ಎಂದು ಹೇಳಿ ಬಾಪು ತಾನೇ ಕೆಳಗಿಳಿದು ಹೋದ.

ಬಾಗಿಲಿನ ಮೇಲೆ ಪುನಃ ಸಾಂಕೇತಿಕ ಸದ್ದಾಯಿತು. ಬಾಪು ಬಾಗಿಲು ತೆಗೆಯುತ್ತಲೂ ಕಂಬಳಿಯಲ್ಲಿ ಮೈಯನ್ನೆಲ್ಲಾ ಮುಚ್ಚಿಕೊಂಡಿದ್ದ ಮನುಷ್ಯನೊಬ್ಬ ಅವಸರದಿಂದ ಒಳಗೆ ಬಂದು ಒಂದು ಮಾತನ್ನೂ ಆಡದೆ ನೆಲದ ಮೇಲೆ ಬಿದ್ದುಕೊಂಡ. ಅವನ ಮುಖದಿಂದ ಉಸಿರು ಪುಟಿದು ಪುಟಿದು ಬರುತ್ತಿತ್ತು, ಆಗಾಗ ಸಣ್ಣಗಿನ ಧ್ವನಿಯಲ್ಲಿ ನರಳುವಿಕೆಯೂ ಕೇಳುತ್ತಿತ್ತು.

"ಪಂತಜಿ, ದೀಪ ತನ್ನಿ." ಎಂದ ಬಾಪು. ರಾಜಶೇಖರನ ಚಲನವಲನಗಳನ್ನರಿತುಕೊಳ್ಳಲೆಂದು ಆತ ಕಳಿಸಿದ್ದ ಆಳು ಚೆನ್ನಾಗಿ ಏಟು ತಿಂದು ಬಂದಿದ್ದುದಂತೂ ಸ್ಪಷ್ಟವಿತ್ತು.

ದೀಪ ಬರುತ್ತಲೂ ಬಾಪುವೂ ಕೃಷ್ಣಾಜಿಯೂ ಸೇರಿ ಅವನ ಕಂಬಳಿಯನ್ನು ಓರೆ ಮಾಡಿ ದೇಹವನ್ನೆಲ್ಲ ಪರೀಕ್ಷಿಸಿದರು. ಅವನ ಮೈಮೇಲೆ ಕತ್ತಿ ಕಠಾರಿಗಳ

ಪ್ರಯೋಗವೇನೂ ಆಗಿರಲಿಲ್ಲ. ದೊಣ್ಣೆಯಿಂದಲೂ ಮುಷ್ಟಿಯಿಂದಲೂ ಮುಖ ತಲೆ ಭುಜ ಬೆನ್ನು ಕೈಕಾಲುಗಳಿಗೆಲ್ಲಾ ಏಟು ಹಾಕಿದಂತಿತ್ತು. ಬಾಯಿಯೊಡೆದು ರಕ್ತ ಸುರಿಯುತ್ತಿತ್ತು. ಹಣೆಯ ಮೇಲೂ ನೆತ್ತಿಯ ಮೇಲೂ ಚಿಕ್ಕ ಚಿಕ್ಕ ಗಾಯ ಗಳಾಗಿದ್ದುವು. ಬೆನ್ನ ಮೇಲೆ ದೊಡ್ಡ ದೊಡ್ಡ ಬಾಸುಂಡೆ ಮೂಡಿದ್ದುವು. ಕೈಕಾಲು ಗಳ ಮೂಳೆಗಳೂ ಮುರಿದ ಹಾಗೆ ತೋರುತ್ತಿತ್ತು.

"ಯಾರು ಹೊಡೆದರೋ ಹೆಗ್ಗಾ ?"

ಆ ಪ್ರಶ್ನೆಗೆ ಉತ್ತರವೀಯುವ ಸ್ಥಿತಿಯಲ್ಲಿ ಹೆಗ್ಗನಿರಲೇ ಇಲ್ಲ. ತನ್ನ ಮೊಳ ಕಾಲುಗಳನ್ನು ಮೇಲೆತ್ತಿಕೊಳ್ಳುತ್ತ ಆತ "ಅಯ್ಯೋ" ಎಂದು ವಿಕಾರವಾಗಿ ಕೂಗಿಕೊಂಡ.

"ಇವನ ಪ್ರಾಣಕ್ಕೇನೂ ಅಪಾಯವಾಗಲಿಕ್ಕಿಲ್ಲವಷ್ಟೆ ?" ಎಂದ ಕೃಷ್ಣಾಜಿ,

"ಹೊಡೆತವಂತೂ ಭಯಂಕರ ಬಿದ್ದಿದೆ. ಈಗಿಂದೀಗ ವೈದ್ಯರನ್ನು ಕರೆಸಿ ಮದ್ದು ಕೊಡಿಸಬೇಕು."

"ಈ ಅಪರಾತ್ರಿಯಲ್ಲಿ ಯಾವ ವೈದ್ಯ ಬಂದಾನು ಬಾಪು ?"

"ಹಣ ಕೊಟ್ಟರೆ ಯಾವನಾದರೂ ಬರುತ್ತಾನೆ."

"ಅಯ್ಯಯ್ಯೋ ಅವ್ವಾ ! ಸತ್ತೆನೇ !" ಎಂದು ಹೆಗ್ಗ ಕೂಗಿಕೊಂಡ.

"ಸಾಯುವುದಿಲ್ಲ ಸುಮ್ಮನಿರೋ. ವೈದ್ಯರು ಬಂದು ಔಷಧ ಕೊಡ್ತಾರೆ," ಎಂದು ಬಾಪು ಅವನನ್ನು ಸಂತೈಸಲು ಯತ್ನಿಸಿದ.

"ನೀವು ಮನೆಗೆ ಹೋಗುತ್ತಾ ಹಾಗೇ ವೈದ್ಯರನ್ನು ಕಳಿಸಿಕೊಡಿರಿ ಪಂತಜಿ."

"ಆಗಲಿ. ಏನೋ ಹೆಗ್ಗಾ, ಯಾರು ಹೊಡೆದರೋ ? ಮೈಯಲ್ಲಿ ಎಚ್ಚರ ವಿದೆಯೋ ಇಲ್ಲೋ ? ಮಾತಾಡೋ," ಎಂದ ಕೃಷ್ಣಾಜಿ.

"ಯಾರು ಅನ್ನೂದು....ಕತ್ತಲಾಗ....ಹೆಂಗ ತಿಳೀತೈತಿ ?" ಎಂದು ಹೆಗ್ಗ ಗೋಳಾಡುತ್ತ ಹೇಳಿದ.

"ಎಲ್ಲಿ ನಿಂತಿದ್ದೆಯೋ ಧಡ್ಡ ಸೂ....ಮಗನೇ ?" ಎಂದ ಕೃಷ್ಣಾಜಿ.

"ಮಲಿಕಾಸಾಸಿಯ ಮನೆಯ ಮುಂದೆ."

"ಇವತ್ತೂ ಅಲ್ಲಿಯೇ ಇದ್ದನೇನು ಅವ ?" ಎಂದು, ಕೃಷ್ಣಾಜಿ ಹಲ್ಲು ಕಡಿಯುತ್ತಾ ಕೇಳಿದ.

"ಹೌದು.....ಹೌದು....ಅಯ್ಯೋ ಬೆನ್ನು ನೋವು....ಸತ್ತೆ.....ಸತ್ತೆ....." ಎಂದು ಕಿರಿಚುತ್ತಾ ಗಂಟಲಲ್ಲಿಳಿಯುತ್ತಿದ್ದ ರಕ್ತವನ್ನು ಥುತ್ತೆಂದು ಉಗುಳಿದ ಹೆಗ್ಗ.

ಉಗುಳು ಬೆರೆತ ಆ ಹೊಲಸು ರಕ್ತ, ಸಮೀಪದಲ್ಲಿಯೆ ನಿಂತುಕೊಂಡಿದ್ದ ಕೃಷ್ಣಾಜಿಯ ಮುಖಕ್ಕೂ ಮೈಗೂ ಸಿಡಿಯಿತು.

"ಥೂ ಮುಂ....ಮಗನೇ, ನನ್ನ ಜಾತಿ ಕೆಡಿಸಿಬಿಟ್ಟೆ! ನಿನ್ನ ಮನೆ ಹಾಳಾಗಾ!" ಎಂದು ಶಪಿಸುತ್ತ ಕೃಷ್ಣಾಜಿ ಅಲ್ಲಿಂದ ಕಾಲ್ದೆಗೆದ.

## ೮

"ಈ ಕೃತಘ್ನರಿಗಾಗಿ ನೀನು ನಿನ್ನ ಜೀವವನ್ನು ಗಂಡಾಂತರದಲ್ಲಿ ಸಿಲುಕಿಸುವುದು ನನಗೇನು ಸರಿಬರುವುದಿಲ್ಲ. ಯಾವ ಕಾರಣವೂ ಇರದಿದ್ದರೂ ನಿನ್ನನ್ನು ಸೇನಾಪತಿ ಸ್ಥಾನದಿಂದ ತೆಗೆದು ಎಂಥಾ ಅವಮಾನ ಮಾಡಿದ್ದರಿವರು ನಿನಗೆ! ಇಷ್ಟು ಬೇಗ ಅದನ್ನು ಮರೆತಿಯಾ ರಾಜಶೇಖರಾ!" ಎಂದ ಕೆಂಚಣ್ಣ. ಅದೇ ತಾನೆ ಮಧ್ಯಾಹ್ನದೂಟ ಮುಗಿದಿತ್ತು. ರಾಜಶೇಖರ ಕುದುರೆಯೇರಿ ಕೋಟೆಗೆ ಹೊರಡುವುದರಲ್ಲಿದ್ದಾಗಲೆ ಕೆಂಚಣ್ಣ ಬಂದುಬಿಟ್ಟಿದ್ದ. ಕೋಟೆಯಲ್ಲಿ ಕೈತುಂಬಾ ಕೆಲಸವಿದ್ದುದರಿಂದ ರಾಜಶೇಖರ ತಕ್ಷಣವೆ ಹೊರಡಬೇಕಿದ್ದಿತಾದರೂ ಸ್ವಲ್ಪ ಹೊತ್ತಿನವರೆಗಾದರೂ ಮಾತನಾಡದೆ ಹಾಗೆಯೆ ಹೊರಟುಬಿಡುವಂತಿರಲಿಲ್ಲ. ಎಂತಲೇ ರಾಜಶೇಖರ ಮತ್ತೆ ಕುಳಿತುಕೊಂಡಿದ್ದ. ಎರಡು ದಿನಗಳ ಹಿಂದೆಯಷ್ಟೆ ಆತನನ್ನು ಭಾಸ್ಕರರಾಯ ವಿಶೇಷ ದಂಡನಾಯಕನನ್ನಾಗಿ ನೇಮಿಸಿಕೊಂಡಿದ್ದ. ಯುದ್ಧದ ಸಿದ್ಧತೆಯನ್ನು ಭರದಿಂದ ಸಾಗಿಸುವುದೂ ಸೈನ್ಯದ ವಿಚಾರಗಳಲ್ಲಿ ದೊರೆಗೆ ಸಲಹೆಯೀಯುವುದೂ ಅವನ ಮುಖ್ಯ ಕರ್ತವ್ಯಗಳಾಗಿದ್ದುವು.

ರಾಜಶೇಖರ ಪುನಃ ಅಧಿಕಾರಿಯಾಗಿ ಬರುತ್ತಲೂ ಸೈನಿಕರಿಗೆಲ್ಲಾ ಸಹಜವಾಗಿಯೆ ಸಂತೋಷವುಂಟಾಗಿತ್ತು. ಸಪ್ಪೆಮೊಗದ ರಾಘೋಬನ ಸೇನಾನಾಯಕತ್ವಕ್ಕಾರಂಭವಾದಂದಿನಿಂದ ಉದಾಸೀನವಾಗಿದ್ದ ನರಗುಂದದ ದಂಡು ರಾಜಶೇಖರನ ಆಗಮನವಾಗುತ್ತಲೂ ಮತ್ತೆ ಚೇತರಿಸಿಕೊಂಡಿತ್ತು. ಅವನ ನೇಮಕವನ್ನು ದಂಡಾಳುಗಳೆಲ್ಲರೂ ಸ್ವಾಗತಿಸುತ್ತಿದ್ದರಾದರೂ ರಾಘೋಬನಾದಿಯಾಗಿ ಕೆಲವೊಂದು ಜನರು ಮಾತ್ರ ಒಳಗೊಳಗೇ ತಳಮಳಿಸತೊಡಗಿದ್ದರು. ಕೃಷ್ಣಾಜಿ ಮತ್ತು ಬನ್ಯಾಬಾಪು ಇವರಿಗಂತೂ ಎದೆಗುದಿಯೆ ಆರಂಭವಾಗಿತ್ತು.

ರಾಜಶೇಖರನ ಸಮೀಪದ ಮಿತ್ರರಿಗೂ ಕೂಡಾ ಆತ ಮತ್ತೆ ನರಗುಂದಕರನ ಸೇವೆಗೆ ನಿಂತುದುದು ಸರಿಬಂದಿರಲಿಲ್ಲ. ಅವನ ತಂದೆ ಗುರುಶಾಂತಪ್ಪನಿಗೂ

ಮಗನ ಕೃತ್ಯ ಒಪ್ಪಿಯಾಗಿರಲಿಲ್ಲ. ಅವನು ಸೈನ್ಯಕ್ಕೆ ಸೇರಿಕೊಂಡದ್ದು ತಪ್ಪಾಯಿ ತೆಂದು ಹೇಳುವ ಜನರದೊಂದು ದೊಡ್ಡ ಗುಂಪೇ ನಗರದಲ್ಲಿತ್ತು. ಮರಾಠಿಗರಾದ ಆಡಳಿತಗಾರರೊಡನೆ ಈ ಸಂದರ್ಭದಲ್ಲಿ ಸಹಕರಿಸಬಾರದೆಂಬುದೇ ಈ ಗುಂಪಿನ ಅಭಿಮತವಾಗಿತ್ತು. ಕೆಂಚಣ್ಣನೂ ಈ ಗುಂಪಿಗೆ ಸೇರಿದ ವ್ಯಕ್ತಿಯೇ ಆಗಿದ್ದ.

"ಸ್ವಾಭಿಮಾನ ಸ್ವಲ್ಪಾದರೂ ಇದ್ದವರು ಮತ್ತೊಮ್ಮೆ ಆ ಅರಮನೆಯಲ್ಲಿ ಕಾಲಿಡಲಿಕ್ಕಿಲ್ಲ," ಎಂದು ಕಟುವಾಗಿಯೆ ಹೇಳಿದ ಕೆಂಚಣ್ಣ.

ಆ ಮಾತು ರಾಜಶೇಖರನ ಮರ್ಮಕ್ಕೆ ಮುಟ್ಟಿ ಅವನನ್ನು ನೋಯಿಸಿತ್ತು. ಆದರೂ, ಕೆಂಚಣ್ಣನ ಮಾತನ್ನು ಆತ ಅಲ್ಲಗಳೆಯುವುದೂ ಸಾಧ್ಯವಿರಲಿಲ್ಲ. ಕೆಂಚಣ್ಣನಾಡುತ್ತಿದ್ದುದು ನ್ಯಾಯವಾದ ಮಾತೇ ಆಗಿತ್ತು. ಸ್ವಾಭಿಮಾನವೆಂಬುದು ತನಗೂ ಉಂಟು. ಮತ್ತೆ ಆ ಅರಮನೆಯಲ್ಲಿ ಕಾಲಿಡಬಾರದು, ಆ ಸೈನ್ಯದಲ್ಲಿ ಸೇವೆಗೆ ನಿಲ್ಲಬಾರದು ಎಂಬ ವಿಚಾರವು ತನಗೂ ಇತ್ತು. ಆದರೂ, ಈ ಸಂದರ್ಭ ದಲ್ಲಿ ವೈಯಕ್ತಿಕ ಮಾನಾಪಮಾನಗಳನ್ನೂ ಮರೆತು, ಕೇವಲ ಕರ್ತವ್ಯವೊಂದನ್ನೇ ಗಮನದಲ್ಲಿಟ್ಟುಕೊಂಡು ಮತ್ತೆ ಕೆಲಸಕ್ಕೆ ಸೇರಿಕೊಂಡುದುದಾಗಿದೆ. ತನ್ನ ಈ ನಿಲುವು ಕೆಂಚಣ್ಣನಿಗೆ ಮಾತ್ರ ಅರ್ಥವಾಗದಹಾಗಿದೆ.

"ಇಲ್ಲಿ ನೋಡು ಕೆಂಚಣ್ಣಾ, ಇಂದಿನ ಪ್ರಸಂಗವೇ ಬೇರೆಯಿದ್ದೆ. ಈ ಮರಾಠಿ ಅರಸರಿಗೂ ಅವರ ಅಧಿಕಾರಿಗಳಿಗೂ ನಮಗೂ ಏನೇ ಜಗಳ ಇದ್ದರೂ ಈಗ ಅದನ್ನು ಮರೆತು ನಮ್ಮೆಲ್ಲರಿಗೂ ಶತ್ರುವಾದ ಇಂಗ್ರೇಜರ ವಿರುದ್ಧ ಯುದ್ಧ ಮಾಡಬೇಕಾಗಿದೆ. ಅದೊಂದೇ ಒಂದು ಉದ್ದೇಶಕ್ಕಾಗಿಯೆ ನಾನು ಮತ್ತೆ ಸೈನ್ಯಕ್ಕೆ ಸೇರಿಕೊಂಡಿದೇನೆ."

"ಇಂಗ್ರೇಜರ ವಿರುದ್ಧ ಯುದ್ಧ ಮಾಡುವುದೇ ಆದರೆ ಸ್ವತಂತ್ರ ರೀತಿಯಲ್ಲಿ ಮಾಡೋಣ. ನೂರಾರು ವರ್ಷಗಳಿಂದ ನಮ್ಮ ಜನರನ್ನು ಸುಲಿದು ಅವಮಾನ ಗೊಳಿಸಿರುವ ಈ ಮಂದಿಯ ಕೈಕೆಳಗೆ ಹೋರಾಡುವುದು ಮಾತ್ರ ಬೇಡ."

"ಈಗ ಮಹಾರಾಷ್ಟ್ರ ಕರ್ನಾಟಕ ಎಂಬ ಪ್ರಶ್ನೆಯಿಲ್ಲ ಕೆಂಚಣ್ಣಾ. ಈಗ ಇರುವುದು ಒಂದೇ ಪ್ರಶ್ನೆ, ಪರದೇಶೀಯರಾದ ಇಂಗ್ರೇಜರನ್ನು ನಮ್ಮ ದೇಶದಿಂದ ಹೊರಗೆ ಹಾಕುವುದೇ ಇಂದು ನಮ್ಮೆಲ್ಲರ ಮುಂದೆ ಇರುವ ಕಾರ್ಯ. ಎಲ್ಲರೂ ಕೂಡಿಕೊಂಡೇ ಅದನ್ನು ಸಾಧಿಸಬೇಕು."

"ಇಂಗ್ರೇಜರು ಮಾತ್ರ ಪರದೇಶೀಯರು, ಇವರು ಅಲ್ಲ ಅಂತ ನಿನ್ನ ಅಭಿ ಪ್ರಾಯವೊ?"

"ಎಷ್ಟಾದರೂ ಇವರೂ ನಮ್ಮ ದೇಶದವರೇ ಅಲ್ಲವೆ?"

"ನಮ್ಮ ದೇಶದವರು, ನಮ್ಮ ಅಣ್ಣತಮ್ಮಂದಿರು!! ನಿಜವಾಗಿ ಇಂದು ನಮ್ಮ ಅಣ್ಣತಮ್ಮಂದಿರೇ ಆಗಿದ್ದರೆ ಎರಡು ನೂರು ವರ್ಷಗಳಿಂದ ನಮ್ಮ ಸೀಮೆಯನ್ನು ಏಕೆ ಸುಲಿಯುತ್ತಿದ್ದರು? ಇವರ ದಾಳಿಗೆ ಒಂದು ಊರು ಉಳಿದಿಲ್ಲ, ಒಂದು ಹಳ್ಳಿ ಉಳಿದಿಲ್ಲ. ಇವರು ಹೋದಲ್ಲೆಲ್ಲಾ ಹಾಹಾಕಾರವೆದ್ದಿದೆ, ನಮ್ಮ ನಮ್ಮ ಅಕ್ಕತಂಗಿಯರು ವಿಧವೆಯರಾಗಿದ್ದಾರೆ, ನಮ್ಮ ಮನೆಗಳು ಲೂಟಿಯಾಗಿವೆ, ಧ್ವಂಸವಾಗಿವೆ. ಊರುಗಳನ್ನೆಲ್ಲಾ ಸುಲಿದು ಅನಂತರ ಬೆಂಕಿಯಿಟ್ಟು ಸುಟ್ಟು ಪಿಶಾಚಿಗಳಂತೆ ಕುಣಿದಿದ್ದಾರೆ ಈ ಜನರು! ಎರಡು ನೂರು ವರ್ಷಗಳಿಂದ ಇವರಿಂದಾಗಿ ನಮ್ಮ ಜನರಿಗೆ ಸ್ವಲ್ಪವೂ ಶಾಂತಿಯಿಲ್ಲ, ಸುಖವಿಲ್ಲ, ಸಮಾಧಾನವಿಲ್ಲ. ಇಂಗ್ರೇಜರು ಬಂದು ಇವರ ಜುಟ್ಟು ಕೈಯಲ್ಲಿಟ್ಟುಕೊಂಡಂದಿನಿಂದ ನಮಗೆ ಸ್ವಲ್ಪವಾದರೂ ಉಸಿರಾಡಲು ಅವಕಾಶ ಸಿಕ್ಕಿದೆ. ಮೊದಲಿನಂತೆ ಇವರು ಮೇಲಿಂದ ಮೇಲೆ ಲೂಟಿ ಸುಲಿಗೆ ಕೊಳ್ಳೆ ನಡೆಸಲು ಸಾಧ್ಯವಾಗುತ್ತಿಲ್ಲ. ಅದಕ್ಕೇ ಇವರು ಇಂಗ್ರೇಜರನ್ನು ಹೊರಗೆ ಹಾಕಬೇಕೆಂದು ಹೇಳುವುದು...."

"ಅಂಥವರೂ ಕೆಲವರಿರಬಹುದು. ಆದರೆ ಎಲ್ಲರೂ ಅಂಥವರೇ ಇರುತ್ತಾರೇನು ಕೆಂಚಣ್ಣ? ನಮ್ಮ ಸರದಾರ್ ಭೋಟೋಸಿಂಗ್...."

"ಅವನೊಬ್ಬ ಶೂರಪುರುಷ. ಒಪ್ಪಿಕೊಂಡೆ. ಆದರೆ, ಅಂಥವನಿಗೇನು ಗತಿಯೊದಗಿತು, ಯಾಕೆ ಒದಗಿತು? ವಿಚಾರ ಮಾಡು. ಹೇಡಿ ಸಂಸ್ಥಾನಿಕರನ್ನು ನಂಬಿ ಆತ ವ್ಯರ್ಥವಾಗಿ ಪ್ರಾಣ ಕಳೆದುಕೊಂಡ. ನಿನಗೂ ಅದೇ ಗತಿ ಬರಬಾರದೆಂದೇ ನಾನಿಷ್ಟು ಹೇಳುತ್ತಿರುವುದು."

"ಜಮಖಂಡಿಯ ರಾಜಾಸಾಹೇಬರ ಮಾತು ಬೇರೆ, ನಮ್ಮ ರಾಜಾಸಾಹೇಬರದೇ ಬೇರೆ, ಅವರಂತೆ ಇವರು ಹೇಡಿಗಳಲ್ಲ."

"ಇವರು ಹೇಡಿಯಲ್ಲ ಅನ್ನುವುದನ್ನು ಈಗಲೇ ಹೇಗೆ ಹೇಳುವುದು? ಉತ್ತರಕುಮಾರನ ಕಥೆ ನಿನಗೆ ಗೊತ್ತಿಲ್ಲವೆ? ಅಂತಃಪುರದಲ್ಲಿ ಕುಳಿತು ಹೆಂಗಳೆಯರೆದುರು ಬಾಯಿ ಬಡಾಯಿ ಕೊಚ್ಚುತ್ತಿದ್ದ ಆ ಕುಮಾರ ಯುದ್ಧಭೂಮಿಯನ್ನು ನೋಡುತ್ತಲೂ ಹೇಗೆ ಅಂಜಿಹೋದ! ಜಮಖಂಡಿಯ ರಾಜಾಸಾಹೇಬರು, ನಮ್ಮ ರಾಜಾಸಾಹೇಬರು, ಎಲ್ಲಾ ಒಂದೇ ಜನಾಂಗಕ್ಕೆ ಸೇರಿದವರು. ಉಂಡೆ ಅವಲಕ್ಕಿ ಹೋಳಿಗೆ ಹೊಡೆಯುವುದೆಂದರೆ ಇವರಿಗೆ ಬಹಳ ಹುರುಪು. ತೋಫಿನ ಸಪ್ಪಳವಾದರೂ ಸಹ ಗಡಗಡನೆ ನಡುಗಿ ಅಡುಗೇ ಮನೆಯಲ್ಲಿಯೆ ಅಡಗಿಕೊಳ್ಳುವ

ಮುಂದಿ ಇವು. ಇಂಥವರು ರಣಾಂಗಣದಲ್ಲಿ ನಿಂತು ಕತ್ತಿ ಹಿಡಿದು ಯುದ್ಧಮಾಡ ಬಹುದೆಂದು ನಂಬುವುದು ಮೂರ್ಖತನ."

"ಹೌದು ರಾಜಣ್ಣಾ. ಹೊಡೆದಾಡುವ ಕೆಲಸ ಅವರಿಂದಾಗುವದಿಲ್ಲ. ಅದೇನು ಸುಳ್ಳಲ್ಲ," ಎಂದು ಗುರುಶಾಂತಪ್ಪನೂ ಧ್ವನಿಗೂಡಿಸಿದ.

"ಬಾಪೂ ಗೋಖಲೆಯ ಕಥೆ ನೀವು ಕೇಳಿರುವರೋ ಇಲ್ಲವೊ!"

"ಆ ಜನಾಂಗದಲ್ಲಿ ಅವನೊಬ್ಬ ಗಂಡುಗಲಿಯಿದ್ದನೆಂದು ಒಪ್ಪುತ್ತೇನೆ. ಆದರೆ, ಅಂಥವನಿಗೂ ಆ ಬಾಜೀರಾಯ ಎಷ್ಟು ಬಾರಿ ಅಪಮಾನ ಮಾಡಲಿಲ್ಲ! ಬಾಪೂ ಗೋಖಲೆ ಮುಂದೆ ಮುಂದೆ ಹೋಗುತ್ತಿದ್ದರೆ ಬಾಜೀರಾಯ ಹಿಂದೆ ಹಿಂದೇ ಓಡುತ್ತಿದ್ದ. ಲಾಡೂ ಲಢಾಯಿ, ಗಾಯನ ವಾದನ, ನಾಟಕ ನರ್ತನ, ಇಂಥಾವ್ದರಲ್ಲೆಲ್ಲಾ ಇವರ ಕೈ ಹಿಡಿಯುವವರೇ ಇಲ್ಲ. ಯುದ್ಧ ಮಾಡುವು ದೆಂದರೆ...."

"ಇದೆಲ್ಲಾ ನಿಜವೆಂಬೇ ಒಪ್ಪೋಣ. ಆದರೂ ನಮ್ಮ ರಾಜರು ಮಾತ್ರ ಯುದ್ಧದ ಬಗ್ಗೆ ಬಹಳ ಹುರುಪಿನಿಂದ್ದಿದ್ದಾರೆ. ದಿನಾಲೂ ಅವರೇ ಸ್ವತಃ ಕೋಟೆಯ ವರೆಗೂ ಬಂದು ಸಂಜೆಯುವರೆಗೂ ಇದ್ದು ಎಲ್ಲಾ ನೋಡಿಕೊಳ್ಳುತ್ತಾರೆ."

"ಇವರೊಬ್ಬರು ಬಂಡು ಹೂಡಿದ ಮಾತ್ರಕ್ಕೆ ಇಂಗ್ರೇಜರು ಹೊರಟು ಹೋಗಬಹುದೆಂದು ತಿಳಿದೀಯಾ ರಾಜಾ?"

"ಇವರೊಬ್ಬರೇ ಯಾಕೆ ಕೆಂಚಣ್ಣಾ, ಉತ್ತರ ಹಿಂದೂಸ್ಥಾನದಲ್ಲೂ ಬಂಡು ನಡೆದಿದೆ, ದಕ್ಷಿಣದಲ್ಲೂ ನಡೆಯುತ್ತಿದೆ, ಕೊಲ್ಲಾಪುರದ ಛತ್ರಪತಿಗಳೂ ಇಷ್ಟ ರಲ್ಲಿಯೇ ಯುದ್ಧ ಹೂಡುವವರಿದ್ದಾರೆ, ಸುತ್ತುಮುತ್ತಲಿನ ಎಷ್ಟೋ ಸಂಸ್ಥಾನಿಕರೂ ನಮ್ಮ ರಾಜರಿಗೆ ನೆರವಾಗುವುದಾಗಿ ಮಾತು ಕೊಟ್ಟದ್ದಾರೆ."

"ಮಾತು ಕೊಟ್ಟಿರಬಹುದು. ಅದರಂತೆ ಅವರೆಲ್ಲಾ ನಡೆದುಕೊಳ್ಳಬಹು ದೆಂದು ನನಗೇನು ಅನಿಸುವುದಿಲ್ಲ."

"ಉಹೂಂ. ಹಾಗೆ ಹೇಳಲು ಬರುವುದಿಲ್ಲ ಕೆಂಚಣ್ಣಾ. ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ, ಧರ್ಮರಕ್ಷಣೆಗಾಗಿ ಸಂಸ್ಕೃತಿ ರಕ್ಷಣೆಗಾಗಿ ಇವರೆಲ್ಲಾ ಎದ್ದೇಳ ಬಹುದು. ಸನಾತನಧರ್ಮ, ಸನಾತನ ಸಂಸ್ಕೃತಿ ಅಂದರೆ ಇವರಿಗೆಲ್ಲಾ ಬಹಳ ಅಭಿಮಾನ."

"ಅಹಾಹಾ! ಇವರ ಅಭಿಮಾನವೆ! ಇವರ ದೇಶಪ್ರೇಮವೆ! ಇಂದು ದೇಶಪ್ರೇಮದ ಮಾತು ಆಡುವ ಇದೇ ಜನರ ಹಿರಿಯರೇ ಕೆಲವೇ ವರ್ಷಗಳ

ಹಿಂದೆ ತಮ್ಮ ದೇಶಬಾಂಧವರಿಗೇ ದ್ರೋಹ ಮಾಡಿ ಇಂಗ್ರೇಜರ ಪಕ್ಷ ಕಟ್ಟಿದ್ದ
ರೆಂಬುದು ನಿನಗೆ ಗೊತ್ತಿದ್ದಂತೆ ಕಾಣುವದಿಲ್ಲ."

"ಯಾರು? ನರಗುಂದದ ಅಧಿಪತಿಗಳೂ ಹೀಗೆ ಮಾಡಿರುವರೇ ?" ರಾಜ
ಶೇಖರ ಆಶ್ಚರ್ಯದಿಂದಲೇ ಪ್ರಶ್ನಿಸಿದ. ಕೆಂಚಣ್ಣನಿಗಿದ್ದಷ್ಟು ಲೋಕಾನುಭವ
ಅವನಿಗಿರಲಿಲ್ಲ. ದೇಶದ ಬಗೆಗೆ ಅವನಿಗೆ ತಿಳಿದಿದ್ದುದೂ ಅಲ್ಪವೆ. ಕೆಂಚಣ್ಣ
ಮಾತ್ರ ಹತ್ತು ಸೀಮೆ ಸುತ್ತಿದವನು, ನೂರಾರು ಜನರನ್ನು ಕಂಡವನು, ಜಗ
ತ್ತನ್ನು ಬಲ್ಲವನು. ಅಲ್ಲಲ್ಲಿನ ಜನರ ಬಾಯಿಂದ ಹಿಂದಿನ ಇತಿಹಾಸವನ್ನು ಕೇಳಿ
ತಿಳಿದವನು. ನರಗುಂದ ಸಂಸ್ಥಾನದ ಪೂರ್ವಚರಿತ್ರೆಯಂತೂ ಅವನಿಗೆ ಪೂರ್ತಿ
ಯಾಗಿ ಗೊತ್ತಿದ್ದಿತು.

"ನರಗುಂದದ ಅಧಿಪತಿಗಳೇ ತಾಯಿನಾಡಿಗೆ ದ್ರೋಹ ಬಗೆದಿದ್ದಾರೆ.
ಇದೇನು ಬಹಳ ಹಳೆಯ ಸಂಗತಿಯಲ್ಲ. ಇನ್ನು ನಲವತ್ತು ವರ್ಷವೂ ಆಗಿಲ್ಲ ಆ
ಮಾತಿಗೆ. ಪೇಶ್ವೆಯರಿಗೂ ಇಂಗ್ರೇಜರಿಗೂ ಕಡೆಯ ಸಲ ಯುದ್ಧವಾಯಿತಲ್ಲ,
ಆಗ ನರಗುಂದಕರನೂ ರಾಮದುರ್ಗಕರನೂ ಮೊದಲು ಪೇಶ್ವೆಯರ ಕಡೆಗೇ ಇದ್ದ
ವರು ಗೆಲ್ಲುವ ಎತ್ತಿನ ಬಾಲ ಹಿಡಿದು ಸ್ವಾರ್ಥ ಸಾಧಿಸಿಕೊಳ್ಳುವ ಆಸೆಯಿಂದ
ಇಂಗ್ರೇಜರನ್ನು ಕೂಡಿಕೊಂಡು, ತಮ್ಮ ದೇಶಬಾಂಧವರೂ ಜಾತಿಬಾಂಧವರೂ,
ಯಜಮಾನರೂ ಆಗಿದ್ದ ಪೇಶ್ವೆಯರ ಮೇಲೆಯೇ ತಿರುಗಿಬಿದ್ದರು. ಯುದ್ಧ
ಮುಗಿದು ಒಪ್ಪಂದವಾದಾಗ ಇವರಿಬ್ಬರಿಗೂ ಚೆನ್ನಾಗಿ ಲಾಭವಾಯಿತು, ಸಂಸ್ಥಾನ
ಗಳೂ ಉಳಿದವು. ಇವರ ಆಳಿಕೆ ಈಗಲೂ ಉಳಿದಿರುವುದಕ್ಕೆ ಮುಖ್ಯ ಕಾರಣ
ವೆಂದರೆ ಇದೇ—ಆ ಕಾಲದಲ್ಲಿ ಇವರು ಮಾಡಿದ ದೇಶದ್ರೋಹವೇ. ಈ ಸಂಗತಿ
ನಿಮ್ಮಪ್ಪನಿಗೂ ಗೊತ್ತಿದೆ."

"ಹೌದು ರಾಜಣ್ಣಾ. ಇದೆಲ್ಲಾ ನಿಜ," ಎಂದ ಗುರುಶಾಂತಪ್ಪ.

"ಹಿರಿಯರು ಮಾಡಿದ ತಪ್ಪಿಗೆ ನಮ್ಮ ರಾಜಾಸಾಹೇಬರನ್ನು ದೂಷಿಸು
ವುದು ನ್ಯಾಯವೆ ?" ಎಂದ ರಾಜಶೇಖರ.

"ಉಹೂಂ. ನಾವೇನು ಇವರನ್ನು ದೂಷಿಸುವುದಿಲ್ಲ. ಇವರು ನಿಜ
ವಾಗಿಯೂ ಬಹಳ ಧಾರ್ಮಿಕ ಮನೋವೃತ್ತಿಯವರು, ಸಂಸ್ಕೃತಿಪ್ರಿಯರು,
ದೇಶಾಭಿಮಾನಿಗಳು ಎಂದೇ ಭಾವಿಸೋಣ. ಇವರ ರಾಜ್ಯದಲ್ಲಿನ ರೈತರಿಗೆ ತಿನ್ನಲು
ಕೂಳಿಲ್ಲದಿದ್ದರೂ ಚಿಂತೆಯಿಲ್ಲ, ವೆಂಕಟೇಶ್ವರ ದೇವಾಲಯದಲ್ಲಿ ಬ್ರಾಹ್ಮಣಭೋಜನ
ಮಾತ್ರ ನಡೆಸಿಯೇ ಇರುತ್ತಾರೆ. ತಮ್ಮ ಜಾತಿಯ ಜನರನ್ನು ಮಾತ್ರ ದೊಡ್ಡ

ದೊಡ್ಡ ಅಧಿಕಾರ ಸ್ಥಾನಗಳಿಗೇರಿಸಿದ್ದಾರೆ. ಅವರ ಧರ್ಮಾಭಿಮಾನದ ಅನುಭವ ನಿನಗಂತೂ ಚೆನ್ನಾಗಿಯೆ ಇದೆ!"

"ಅದೆಲ್ಲಾ ನಿಜ ಕೆಂಚಣ್ಣ. ಆದರೂ ಈ ಸಮಯದಲ್ಲಿ ಅದನ್ನೆಲ್ಲಾ ನಾವು ಮರೆಯಬೇಕು. ಯುದ್ಧ ಮಾಡುವುದಷ್ಟೇ ಈಗ ನಮ್ಮ ಕರ್ತವ್ಯವಾಗಬೇಕು."

"ನೀನೊಬ್ಬ ಕೋಣ ಅಷ್ಟೆ. ಮನುಷ್ಯನಲ್ಲ. ನಿನಗೆ ಏನು ಹೇಳಿದರೂ ತಿಳಿಯುವುದಿಲ್ಲ," ಎಂದು ಕೋಪದಿಂದಲೇ ನುಡಿದು ಕೆಂಚಣ್ಣ ಎದ್ದುಹೋದ.

ಗುರುಶಾಂತಪ್ಪ ಮಾತ್ರ ಮಗನಿಗೆ ಮತ್ತೇನನ್ನೂ ಆಡಲಿಲ್ಲ.

ಮನಸ್ಸು ಗೊಂದಲದಲ್ಲಿ ಸಿಲುಕಿ ಹೊಯ್ದಾಡುತ್ತಿರಲು ರಾಜಶೇಖರ ಕುದುರೆ ಯೇರಿ ಕೋಟೆಯತ್ತ ಸಾಗಿದ.

## ೯

"ಹಾಗಾದರೆ ಯುದ್ಧ ಹೂಡುವದು ನಿಶ್ಚಯವೇ ಆದಂತಾಯಿತೇ ಹುಜೂರ್!" ಎಂದು ರಾಮರಾಯ ಪ್ರಶ್ನಿಸಿದ.

"ಹೌದು ದಿವಾಣಜಿ. ನಿಶ್ಚಯವಂತೂ ಆದಂತಾಯ್ತು. ಹಾಗೇ ಕೂಡ್ರು ವುದೆಂದರೆ ಹೇಡಿತನವೆಂದೇ ನಮಗನಿಸಿತು. ನಮ್ಮಲ್ಲೂ ಗಂಡಸುತನವಿದೆ ಯೆಂಬುದು ಈ ಕೆಂಪುಮೋರೆಯ ಜನರಿಗೆ–ಅದರಲ್ಲೂ ಆ ದುಷ್ಟ ವ್ಯಾನ್‌ಸನ್ನನಿಗೆ ಗೊತ್ತಾಗಬೇಕು," ಎಂದ ಭಾಸ್ಕರರಾಯ.

ವ್ಯಾನ್‌ಸನ್ ಸಾಹೇಬನ ಬಗೆಗೆ ರಾಜಾಸಾಹೇಬನಿಗಿದ್ದ ರೋಷವನ್ನು ರಾಮರಾಯನೂ ಬಲ್ಲವನಾಗಿದ್ದ. ಯಾರು, ಯಾವ ರೀತಿಯಲ್ಲಿ ಸಂಧಾನ ನಡೆಸಿ ದರೂ ಆ ರೋಷ ಅಳಿಯಲಾರದೆಂಬುದೂ ಅವನಿಗೆ ಗೊತ್ತಿತ್ತು. ಎಂತಲೇ, ವ್ಯಾನ್‌ಸನ್ನನ ಮಾತು ಬಂದೊಡನೆಯೆ ರಾಮರಾಯ ಮೌನ ವಹಿಸುತ್ತಿದ್ದ.

"ನಮ್ಮ ವಂಶವನ್ನೇ ಮುಳುಗಿಸಲು ಯತ್ನಿಸಿದ ಆ ಚಂಡಾಲ ವ್ಯಾನ್‌ ಸನ್ನನನ್ನು ಹಾಗೇ ಬಿಡುವುದುಂಟೇ ದಿವಾಣಜಿ? ಶಠಂ ಪ್ರತಿ ಶಾಠ್ಯಂ ಎಂಬಂತೆ ಅವನಿಗೆ ತಕ್ಕದ್ದು ಮಾಡಲೇ ಬೇಕು. ಅಲ್ಲಿಯವರೆಗೂ ನಮ್ಮ ಮನಸ್ಸಿಗೆ ಸಮಾ ಧಾನವಾಗದು," ಎಂದ ಭಾಸ್ಕರರಾಯ.

ರಾಮರಾಯ ಆಗಲೂ ಮಾತನಾಡಲಿಲ್ಲ. ಕೋಣೆಯಲ್ಲಿ ಶತಪಥ ಹಾಕು ತ್ತಿದ್ದ ದೊರೆ ಇದ್ದಕ್ಕಿದ್ದಂತೆಯೆ ನಿಂತುಕೊಂಡು ತನ್ನ ದಿವಾಣನ ಮುಖವನ್ನು ತೀಕ್ಷ್ಣದೃಷ್ಟಿಯಿಂದ ನೋಡುತ್ತ,

"ನಾವು ಯುದ್ಧ ಹೂಡುವುದು ನಿಮಗೆ ಒಪ್ಪಿಗೆಯಿಲ್ಲವೋ ಏನು?" ಎಂದು ಪ್ರಶ್ನಿಸಿದ.

ಆ ಪ್ರಶ್ನೆಗೆ ರಾಮರಾಯ ಒಡನೆಯೇ ಉತ್ತರವೀಯಲಿಲ್ಲ. ಯುದ್ಧದ ಮಾತನ್ನೆತ್ತುವುದೂ ಕೂಡಾ ಮೂರ್ಖತನವೆಂದು ಮೊದಲಿನಿಂದಲೂ ಅವನಿಗನ್ನಿಸುತ್ತಿತ್ತು. ನರಗುಂದದಂಥ ಪುಟ್ಟ ಸಂಸ್ಥಾನವೊಂದು ಬಲಾಢ್ಯವಾದ ಆಂಗ್ಲ ಸಾಮ್ರಾಜ್ಯದ ವಿರುದ್ಧ ಯುದ್ಧ ಹೂಡುವುದು ಹಾಸ್ಯಾಸ್ಪದವೆಂದೇ ಅವನ ಭಾವನೆಯಾಗಿತ್ತು. ಅಂಥ ಆತ್ಮಘಾತಕ ಕ್ರಮದಿಂದ ದೊರೆಯನ್ನು ಪರಾವೃತ್ತಗೊಳಿಸಲು ರಾಮರಾಯ ಪರಿಪರಿಯಾಗಿ ಯತ್ನಿಸಿ ನಿರಾಶನಾದುದಾಗಿತ್ತು. ಅವನ ಅಭಿಪ್ರಾಯವನ್ನರಿತುಕೊಂಡಿದ್ದುದರಿಂದಲೋ ಏನೋ, ಇತ್ತೀಚೆಗೆ ಕೆಲದಿನಗಳಿಂದ ಯುದ್ಧದ ವಿಚಾರವಾಗಿ ಅವನ ಹತ್ತಿರ ಮಾತನ್ನೇ ಆಡಿರಲಿಲ್ಲ ಭಾಸ್ಕರರಾಯ. ಮುಂಡರಗಿ ಭೀಮರಾಯನಿಗೆ ಮದ್ದು ಗುಂಡು ಕಳಿಸುವುದು ಬೇಡವೆಂದು ರಾಮರಾಯ ಸಲಹೆಯಿತ್ತಿದ್ದರೂ ಭಾಸ್ಕರರಾಯ ಆ ಸಲಹೆಯಂತೆ ನಡೆದುಕೊಂಡಿರಲಿಲ್ಲ. ಮುಂದೆ ರಾಜಶೇಖರನನ್ನು ವಿಶೇಷ ಸೈನ್ಯಾಧಿಕಾರಿಯನ್ನಾಗಿ ನೇಮಿಸಿಕೊಳ್ಳುವಾಗಲೂ ಆತ ರಾಮರಾಯನ ಅಭಿಪ್ರಾಯ ಕೇಳಿರಲಿಲ್ಲ. ತನ್ನ ಮನಸ್ಸಿನಂತೆ ನಡೆದುಕೊಳ್ಳುವುದೇ ಸರಿಯಾದುದೆಂದು ಭಾಸ್ಕರರಾಯ ನಿಶ್ಚಯಿಸಿದಂತಿತ್ತು. ಅದುವರೆಗೂ ನಿಧಾನವಾಗಿ ನಡೆದಿದ್ದ ಸಮರಸಿದ್ಧತೆ ಕೆಲದಿನಗಳಿಂದಲೂ ಅತ್ಯಂತ ರಭಸದಿಂದ ನಡೆಯುತ್ತಿತ್ತು. ಸಾವಿರಗಳ ಸಂಖ್ಯೆಯಲ್ಲಿ ಸೈನ್ಯಕ್ಕೆ ಜನರನ್ನು ಸೇರಿಸಿಕೊಳ್ಳುವುದೂ ಆರಂಭವಾಗಿತ್ತು. ಅರ್ಥಾತ್, ಇದಾವುದೂ ರಾಮರಾಯನಿಗೆ ಒಪ್ಪಿಗೆಯಾಗಿರಲಿಲ್ಲ. ಆದರೆ, ಸ್ವಯಂ ದೊರೆಯೇ ನಿಂತುಕೊಂಡು ಈ ಸಿದ್ಧತೆ ನಡೆಸುತ್ತಿದ್ದಾಗ ದಿವಾಣನಾದರೂ ಏನು ಮಾಡಬಲ್ಲ? ಎಂತಲೇ, ರಾಮರಾಯ ಬಾಯಿ ಹೊಲಿದುಕೊಂಡು ಸುಮ್ಮನಿರಬೇಕಾಗಿ ಬಂದಿತ್ತು.

ಈಗಲೂ ಸುಮ್ಮನಿರುವುದೇ ಒಳ್ಳೆಯದೆಂದು ಅವನಿಗನ್ನಿಸಿತು.

ಆದರೆ, ಭಾಸ್ಕರರಾಯ ಅವನನ್ನು ಅಷ್ಟಕ್ಕೇ ಬಿಡಲಿಲ್ಲ. ಯುದ್ಧದ ಸಿದ್ಧತೆಯ ಸಮಯ ಹಿಂದುಳಿದು ಪ್ರತ್ಯಕ್ಷ ಯುದ್ಧ ಹೂಡುವ ಸಂದರ್ಭವೇ ಹತ್ತಿರ ಬಂದುಬಿಟ್ಟಿತ್ತು. ನರಗುಂದದ ಮೇಲೆ ಸಾಗಿಬರಲು ಆಂಗ್ಲ ಸೈನ್ಯಕ್ಕೆ ಅಪ್ಪಣೆಯಾಗಿದೆಯೆಂಬ ವಾರ್ತೆಯೂ ಅದೇ ತಾನೆ ಬಂದಿತ್ತು. ಎಂತಲೇ ಭಾಸ್ಕರರಾಯ ತನ್ನ ದಿವಾಣನನ್ನು ಅವಸರದಿಂದ ಬರಮಾಡಿಕೊಂಡಿದ್ದ.

"ನಿಮ್ಮ ಮನಸ್ಸಿನಲ್ಲೇನಿದೆಯೋ ಸ್ಪಷ್ಟವಾಗಿ ಹೇಳಿಬಿಡಿರಿ. ಇದು ಅನುಮಾನದಿಂದಿರುವ ಸಮಯವಲ್ಲ. ಇನ್ನೇನು ಇಂದು ನಾಳೆಯೊಳಗಾಗಿಯೆ ಇಂಗ್ರೇಜರ ದಂಡು ಬಂದುಬಿಡಬಹುದು."

"ಅನುಮಾನವೇನೂ ಇಲ್ಲ ಹುಜೂರ್. ಯುದ್ಧ ಮಾಡಬೇಕೆಂದು ತಾವು ನಿಶ್ಚಯ ಮಾಡಿದ ಮೇಲೆ ಸೇವಕನಾದ ನಾನು ಹಿಂದೇಟು ಹಾಕುವುದುಂಟೇ? ಸರಕಾರದ ಅಪ್ಪಣೆಯನ್ನು ಶಿರಸಾವಹಿಸಿ...."

"ಉಹೂಂ. ನಮ್ಮ ಅಪ್ಪಣೆಗಾಗಿ ನೀವು ಒಪ್ಪಿಗೆ ಕೊಡಬೇಕು ಎಂದು ನಾವು ಹೇಳುವುದಿಲ್ಲ. ನಾವೀಗ ಇಡುವ ಹೆಜ್ಜೆ ಸರಿಯಾದದ್ದೆಂದು ನಿಮಗೂ ಮನವರಿಕೆಯಾಗಿದ್ದರೆ ಮಾತ್ರ ಹಾಗೆ ಹೇಳಬೇಕು. ಬಲವಂತ ಮಾಘಸ್ನಾನದಿಂದೇನೂ ಉಪಯೋಗವಿಲ್ಲವೆಂಬುದು ನಮಗೂ ಗೊತ್ತು."

"ಯುದ್ಧ ಅಗತ್ಯವಿಲ್ಲವೆಂದು ನಾನು ಹಿಂದೆ ನಾಲ್ಕೈದು ಬಾರಿ ಸಲಹೆಯಿತ್ತದ್ದು ನಿಜ. ರಾಜ್ಯದಲ್ಲಿ ಶಾಂತತೆಯನ್ನುಳಿಸುವ ಉದ್ದೇಶದಿಂದಲೇ ನಾನು ಹಾಗೆ ಹೇಳಿದ್ದು. ನನ್ನ ಅಭಿಪ್ರಾಯವನ್ನು ತಪ್ಪು ಭಾವಿಸಬಾರದು ಹುಜೂರ್."

ರಾಜ್ಯದಲ್ಲಿ ಶಾಂತತೆಯನ್ನುಳಿಸುವುದು ತನಗೂ ಇಷ್ಟವಾದುದೇ. ಆದರೆ, ತನ್ನ ಹೃದಯದಲ್ಲಿ ಮಾತ್ರ ಶಾಂತಿಯೆನ್ನುವ ಸುಳಿವೂ ಇಲ್ಲದಾಗಿದೆಯಲ್ಲ? ಅದಕ್ಕೇನು ಮಾಡುವುದು? ತನ್ನ ಪರಮವೈರಿಯಾದ ಆ ಮ್ಯಾನ್‌ಸನ್ ಸಾಹೇಬನನ್ನು ಕಡಿದು ಚೆಲ್ಲುವವರೆಗೂ ಆರಲಾರದು ತನ್ನೆದೆಯ ಬೆಂಕಿ....ಎಂದು ಭಾಸ್ಕರರಾಯ ಯೋಚಿಸಿದ.

ಮ್ಯಾನ್‌ಸನ್ನನಿಂದ ತನಗಾದ ಅನ್ಯಾಯವೇನು ಅಲ್ಪವಾದುದೇ? ಭಾರತೀಯರಾದ ತಮ್ಮನ್ನು ಕಂಡರೇ ಅವನಿಗಾಗದು. ಆತ ಕೊಲ್ಹಾಪುರದಲ್ಲಿ ಪೊಲಿಟಿಕಲ್ ಏಜಂಟನಾಗಿದ್ದಾಗ ತನ್ನನ್ನು ಅವಮಾನಗೊಳಿಸಲು ಎಷ್ಟು ಬಾರಿ ಯತ್ನಿಸಲಿಲ್ಲ! ತನ್ನ ಆಡಳಿತದಲ್ಲಿ ಯಾವುದಾದರೊಂದು ತಪ್ಪು ಕಂಡು ಹಿಡಿದು ಅದನ್ನೇ ನಿಮಿತ್ತವಾಗಿಟ್ಟು ತನ್ನನ್ನು ಗಾದಿಯಿಂದ ದೂರಗೊಳಿಸಲು ಎಷ್ಟು ಬಾರಿ ಹಾತೊರೆಯಲಿಲ್ಲ!

"ಆ ಮ್ಯಾನ್‌ಸನ್ನನನ್ನು ತೀರಿಸಿಬಿಡುವವರೆಗೆ ನಮಗೆ ಯಾವುದೂ ರುಚಿಸದು ದಿವಾಣಜಿ!" ಎಂದ ಭಾಸ್ಕರರಾಯ.

ಮ್ಯಾನ್‌ಸನ್‌ಸಾಹೇಬ ಸ್ವಭಾವತಃ ದುಷ್ಟನಲ್ಲವೆಂಬುದು ರಾಮರಾಯನಿಗೆ ಚೆನ್ನಾಗಿ ಗೊತ್ತಿತ್ತು. ಆತ ಕೊಂಚ ಶೀಘ್ರಕೋಪಿ, ಅಷ್ಟೆ, ಹಟವಾದಿಯೂ

ಹೌದು. ಹಿಡಿದ ಛಲವನ್ನು ಬಿಡುವವನೂ ಅಲ್ಲ. ತಮ್ಮ ದೊರೆಯ ಸ್ವಭಾವವೂ ಅಂಥದೇ ಅಲ್ಲವೆ? ಭಾಸ್ಕರರಾಯ, ಮ್ಯಾನ್‌ಸನ್‌ಸಾಹೇಬ ಇಬ್ಬರೂ ಒಂದೇ ಮಾದರಿಯ ವ್ಯಕ್ತಿಗಳು. ಇಬ್ಬರೂ ತೀವ್ರ ಸ್ವಾಭಿಮಾನವುಳ್ಳವರು; ಆ ಅಭಿಮಾನಕ್ಕೆ ಆಘಾತವೊದಗಿದರೆ ಕೆರಳಿ ಸೇಡು ತೀರಿಸಿಕೊಳ್ಳಲು ಹಾತೊರೆಯುವವರು.

ಮ್ಯಾನ್‌ಸನ್ ಸಾಹೇಬನು ಪೊಲಿಟಿಕಲ್ ಏಜಂಟನಾಗಿದ್ದಾಗ ನಡೆದ ಘಟನೆಯೊಂದು ರಾಮರಾಯನಿಗೆ ನೆನಪಾಯಿತು. ಸಂಸ್ಥಾನದ ಆಡಳಿತದ ಮೇಲ್ವಿಚಾರಣೆಗೆಂದು ಮ್ಯಾನ್‌ಸನ್ ಆಗಾಗ ಇಲ್ಲಿಗೆ ಬರಬೇಕಾಗುತ್ತಿತ್ತು. ಹಾಗೆ ಒಂದು ಸಲ ಬಂದಾಗ ಬೊಕ್ಕಸದಲ್ಲಿ ಸಾಕಷ್ಟು ಹಣವಿಲ್ಲದಿದ್ದುದು ಗೊತ್ತಾಗುತ್ತಲೂ ಮ್ಯಾನ್‌ಸನ್ ಕೇಳಿದ್ದ :

"ಶಿಲ್ಲಕು ಹಣವಿಲ್ಲದೆ ರಾಜ್ಯ ಹ್ಯಾಗೆ ನಡಸುತ್ತೀರಿ ಬಾಬಾಸಾಹೇಬ್ ?"

ಆ ಪ್ರಶ್ನೆಯಿಂದಾಗಿ ದೊರೆಗೆ ಕೋಪ ಬಂದಿತ್ತು. ಅವರು ಕೊಂಚ ಗಡಸು ಧ್ವನಿಯಲ್ಲಿಯೆ ಉತ್ತರವಿತ್ತಿದ್ದರು :

"ದೇವರೇ ನಮ್ಮ ರಾಜ್ಯ ನಡಸುತ್ತಾನೆ. ನೀವೇನೂ ಚಿಂತಿಸಬೇಕಾಗಿಲ್ಲ."

ಆಗಲೂ ಸುಮ್ಮನಾಗದೆ ಮ್ಯಾನ್‌ಸನ್ ಮತ್ತೆ ಹೇಳಿದ್ದ :

"ಉಹೂಂ. ಇದೆಲ್ಲ ಸರಿಯೆಂದು ನನಗೇನು ಅನಿಸುವುದಿಲ್ಲ ಬಾಬಾ ಸಾಹೇಬ್. ದೇವತಾರ್ಚನಗಳಿಗೂ ಬ್ರಾಹ್ಮಣ ಭೋಜನಗಳಿಗೂ ನೀವು ಬಹಳ ಹಣ ಖರ್ಚು ಮಾಡುತ್ತೀರಿ. ಬೊಕ್ಕಸದಲ್ಲಿನ ಹಣದ ಬಹು ಭಾಗ ಇವುಗಳಿಗೇ ಖರ್ಚಾಗುತ್ತದೆ. ಒಕ್ಕಲಿಗರಿಗಾಗಿ ಕೆರೆ ಕಾಲುವೆ ಕಡಿಸಲು ನಿಮ್ಮಲ್ಲಿ ಹಣವಿಲ್ಲ. ನಿಮ್ಮ ರೈತರೆಲ್ಲಾ ಚಿಂತಾತುರರಾಗಿದ್ದಾರೆ."

ಆಗ ಮಾತ್ರ ದೊರೆಗೆ ತನ್ನ ಮನಸ್ಸಿನ ಮೇಲೆ ಹಿಡಿತವೆ ಉಳಿದಿರಲಿಲ್ಲ. ಅವರು ಅತ್ಯಂತ ಕಠೋರವಾಗಿ ಉತ್ತರವಿತ್ತಿದ್ದರು :

"ನಮ್ಮ ರೈತರ ಬಗ್ಗೆ ನಿಮಗೆಷ್ಟು ಚಿಂತೆಯಿದೆಯೆಂಬುದು ನಮಗೂ ಚೆನ್ನಾಗಿ ಗೊತ್ತಿದೆ. ಅವರು ಉಪವಾಸ ಬಿದ್ದು ಸತ್ತರೂ ನೀವು ಅತ್ತ ಹೊರಳಿ ನೋಡದೆ ನಿಮ್ಮ ಜಾತಿ ಬಾಂಧವರೊಡನೆ ವಿಲಾಸಗಳಲ್ಲೇ ಮುಳುಗೇಳುತ್ತೀರಿ. ಅದಕ್ಕಾಗಿ ನೀರಿನಂತೆ ಹಣ ಹಾಳುಮಾಡುತ್ತೀರಿ. ನಾನು ಮಾತ್ರ ನಿಮ್ಮ ಹಾಗೇನೂ ಮಾಡುವುದಿಲ್ಲ. ದೇವತಾರ್ಚನೆಗಳಿಗೂ ಬ್ರಾಹ್ಮಣ ಭೋಜನಾದಿಗಳಿಗೂ ನಾನು ಮಾಡುವ ಖರ್ಚು ರೈತರಿಗೆ ಉಪಯುಕ್ತವೇ ಆಗಿದೆ. ಪ್ರತ್ಯಕ್ಷವಾಗಿ ಅದರ ಲಾಭ ಒಕ್ಕಲಿಗರಿಗೇ ಮುಟ್ಟುತ್ತದೆ."

" ಬ್ರಾಹ್ಮಣರು ತಿಂದು ತೇಗುವುದರಿಂದ ಒಕ್ಕಲಿಗರಿಗೆ ಹೇಗೆ ಲಾಭವಾಗುತ್ತದೆ ?" ಎಂದು ಸಾಹೇಬ ಕೇಳಿದ್ದ.

ಅದಕ್ಕೆ ದೊರೆ ಕಟುವಾಗಿ ಉತ್ತರಿಸಿದ್ದರು :

" ಅವರಿಗೇನೋ ಲಾಭವಾಗುತ್ತದೆ. ಆದರೆ, ನಿಮ್ಮಂಥವರ ಆತಿಥ್ಯಕ್ಕಾಗಿ ನಾನು ಮಾಡುವ ವ್ಯಯ ಮಾತ್ರ ನಿಷ್ಫಲವಾದದ್ದು !"

ಹಾಗೆ ಮುಖಭಂಗಿತನಾದ ಮ್ಯಾನ್‌ಸನ್ ಮತ್ತೊಂದು ಮಾತನಾಡದೆ ಹೊರಟುಹೋಗಿದ್ದ. ಅಂದಿನಿಂದಲೂ ಅವರಿಬ್ಬರಲ್ಲಿ ದ್ವೇಷಾಗ್ನಿ ದಿನದಿನಕ್ಕೆ ಹೆಚ್ಚುತ್ತಾ ಬಂದು ಒಳಗೊಳಗೇ ಪ್ರಜ್ವಲಿಸಿತ್ತು. ದತ್ತು ಸ್ವೀಕಾರಕ್ಕೆ ಅನುಮತಿಯಿಾಯಬೇಕೆಂದು ತಮ್ಮ ದೊರೆ ಕೇಳಿಕೊಂಡಾಗ ಪೊಲಿಟಿಕಲ್ ಏಜಂಟನಾದ ಮ್ಯಾನ್‌ಸನ್ ಸಹಜವಾಗಿಯೆ ಆ ಬೇಡಿಕೆಯನ್ನು ನಿರಾಕರಿಸುವಂತೆ ಸರಕಾರಕ್ಕೆ ಸೂಚಿಸಿದ್ದ. ಕೆಲದಿನಗಳ ತರುವಾಯ, ದೇಶೀಯ ಸಂಸ್ಥಾನಿಕರ ಬೇಡಿಕೆಗಳ ವಿಚಾರಣೆಗೆಂದೇ " ಇನಾಮ್ ಕಮಿಶನ್ " ಎಂಬ ಸಮಿತಿಯೊಂದನ್ನು ಸರಕಾರ ನೇಮಿಸಿತ್ತು. ಅದರಲ್ಲಿಯೂ ಮ್ಯಾನ್‌ಸನ್ ಸಾಹೇಬನೇ ಪ್ರಮುಖನಾಗಿದ್ದ. ನರಗುಂದಕರರ ಬೇಡಿಕೆ ಈ ಇನಾಮು ಕಮಿಶನ್ನಿನೆದುರು ಬಂದಾಗ ಮ್ಯಾನ್‌ಸನ್ ಅಲ್ಲಿಯೂ ಅದಕ್ಕೆ ಕಲ್ಲು ಹಾಕಿದ್ದ. ದೊರೆ ಅಷ್ಟಕ್ಕೇ ನಿರಾಶರಾಗದೆ ಕಂಪನಿ ಸರಕಾರದ " ಕೋರ್ಡ್ ಆಫ್ ಡೈರೆಕ್ಟರ್ಸ್ "ಗೆ ಬರೆದುಕೊಂಡಿದ್ದರು. ಅವರ ಅರ್ಜಿಯನ್ನು ಪುನರ್ವಿಚಾರಣೆಗೆಂದು ಕೋರ್ಟಿನವರು ಮತ್ತೆ ಇನಾಮ್ ಕಮಿಶನ್ನಿಗೇ ರವಾನಿಸಿದ್ದರು. ನರಗುಂದ ಸಂಸ್ಥಾನವನ್ನು ನುಂಗಿ ನೀರು ಕುಡಿಯಬೇಕೆಂದು ನಿರ್ಧರಿಸಿದ್ದ ಮ್ಯಾನ್‌ಸನ್ ಪುನಃ ತನ್ನ ಮೊದಲಿನ ಅಭಿಪ್ರಾಯವನ್ನೇ ವ್ಯಕ್ತಗೊಳಿಸಿದ್ದ. ಡೈರೆಕ್ಟರರ ಕೋರ್ಟು ಅವನ ಅಭಿಪ್ರಾಯವನ್ನೇ ಎತ್ತಿ ಹಿಡಿದು ದೊರೆಯ ವಿನಂತಿಯನ್ನು ತಳ್ಳಿಹಾಕಿತ್ತು....

ಅಂತೂ ಕೊನೆಗೆ ಸೇಡು ತೀರಿಸಿಕೊಂಡುಬಿಟ್ಟಿದ್ದ ಮ್ಯಾನ್‌ಸನ್. ಇನ್ನು ಸೇಡು ತೀರಿಸಿಕೊಳ್ಳುವುದು ದೊರೆಯ ಸರದಿಯಾಗಿತ್ತು ! ಸೌಮ್ಯಸ್ವಭಾವದವನಾಗಿದ್ದ ರಾಮರಾಯನಿಗೆ ಸಿಟ್ಟು, ದ್ವೇಷ, ಸೇಡು ಎಂದರಾಗುತ್ತಿರಲಿಲ್ಲ. ಮುಂದಾಗಬಹುದಾದ ಅನಾಹುತವನ್ನು ಕಲ್ಪಿಸಿಕೊಂಡಾಗ ಅವನ ಮೈಗೂದಲು ನಿಮಿರಿನಿಂತವು.

" ನಮ್ಮನ್ನು, ಸದೆಬಡಿಯಲೆಂದು ಮ್ಯಾನ್‌ಸನ್ನನನ್ನೇ ನೇಮಿಸಿದೆಯಂತೆ

ಸರಕಾರ!" ಎಂದ ಭಾಸ್ಕರರಾಯ. "ಒಳ್ಳೆಯದೇ ಆಯ್ತು. ನಾವೂ ಅವನ ಹಾದಿಯನ್ನೇ ಕಾಯುತ್ತಿದ್ದೇವೆ."

"ಸೈನ್ಯವೇ ಬರುತ್ತಿದೆಯೇ ಸರಕಾರ್? ಹಾಗೆ ಒಮ್ಮಿಂದೊಮ್ಮೆಲೆ ಬರುವಂತಿಲ್ಲ."

"ಮ್ಯಾನ್‌ಸನ್ನನಂತೂ ಬರುತ್ತಿದ್ದಾನಂತೆ. ಇದೇ ಈಗ ನಮ್ಮ ಚಾರ ನೊಬ್ಬ ಸುದ್ದಿ ತಂದಿದಾನೆ. ಈಗಾಗಲೇ ರಾಮದುರ್ಗಕ್ಕೆ ಬಂದು ಮುಟ್ಟಿದಾನಂತೆ ಮ್ಯಾನ್‌ಸನ್."

"ಅವನು ಇತ್ತಕಡೆಗೆ ಹೊರಟಿರುವನೆಂದು ಖಂಡಿತವಾಗಿದೆಯೇ ಹುಜೂರ್?"

"ಹೌದು. ಅದನ್ನು ಖಚಿತಮಾಡಿಕೊಂಡೇ ಬಂದಿದಾನೆ ನಮ್ಮ ಚಾರ."

"ಸಾಧಾರಣ ಮಾತುಕತೆ ನಡೆಸಲು ಬರುತ್ತಿರುವನೊ ಏನೊ. ಯುದ್ಧ ಕ್ಕಾಗಿಯೆ ಬರುತ್ತಿರುವನೆಂದು ಹ್ಯಾಗೆ ಹೇಳಲು ಬರುತ್ತದೆ ಹುಜೂರ್?"

"ಇನ್ನೆಂಥ ಮಾತುಕತೆ ನಮ್ಮೊಡನೆ? ಭೀಮರಾಯರಿಗೆ ನಾವು ಮದ್ದು ಗುಂಡು ಕಳಿಸಿದ್ದೂ, ಬಂಡಾಯದ ಸಿದ್ಧತೆ ನಡಸಿದ್ದೂ, ಸೈನಿಕರನ್ನು ಕೂಡಿಸು ತ್ತಿರುವುದೂ ಎಲ್ಲಾ ಗೊತ್ತಾಗಿದೆಯಂತೆ ಅವನಿಗೆ. ಬಹಳ ಮಾಡಿ ನಮ್ಮಲ್ಲೇ ಯಾರೋ ಪಿತೂರಾಗಿರಬೇಕು ಅವರಿಗೆ. ಅವರಿಂದಲೇ ಇಲ್ಲಿಯ ಸುದ್ದಿಯೆಲ್ಲಾ ಇಷ್ಟು ಬೇಗ ಗೊತ್ತಾಗಿರಬೇಕು."

"ನಮ್ಮ ದೂತರು ಅವರ ಹತ್ತಿರ ಸುತ್ತಾಡುವಂತೆ ಅವರ ದೂತರು ಇಲ್ಲಿ ಸುತ್ತಾಡುವುದೂ ಸಾಧ್ಯವುಂಟು ಸರಕಾರ್. ನನಗೆ ತಿಳಿದಮಟ್ಟಿಗೆ ಇಲ್ಲಿ ಪಿತೂರಿ ಏನೂ ನಡೆದಿಲ್ಲ."

"ಹಾಗಾದರೆ ದೇವರೇ ನಮ್ಮನ್ನು ರಕ್ಷಿಸುತ್ತಿದ್ದಾನೆ ಅನ್ನಬೇಕು. ಈ ಧರ್ಮಯುದ್ಧದಲ್ಲಿ ನಮಗೆ ಜಯ ದೊರೆಯುವುದೂ ಅವನ ಕೃಪೆಯಿಂದಲೇ. ವೆಂಕಟೇಶ್ವರನ ಸನ್ನಿಧಿಯಲ್ಲಿ ಸಂತರ್ಪಣೆಗಾರಂಭವಾಗಲಿ ದಿವಾಣಜಿ!" ಎಂದ ಭಾಸ್ಕರರಾಯ.

ದೊರೆಯ ಅಪ್ಪಣೆಯಂತೆ ದೇವಸ್ಥಾನದಲ್ಲಿ ಅನ್ನಸಂತರ್ಪಣೆಯ ವ್ಯವಸ್ಥೆ ಯಾಯಿತು. ಮೇಲೆ ಕೋಟೆಯಲ್ಲಿಯೆ ಸೈನಿಕರು ಕವಾಯತು ನಡಸುತ್ತಿದ್ದರೆ ಕೆಳಗೆ ದೇವಾಲಯದಲ್ಲಿ ಬ್ರಾಹ್ಮಣರು ಪಕ್ವಾನ್ನಗಳುಂಡು ಹೊಟ್ಟೆಯ ಮೇಲೆ ಕೈ ಎಳೆಯತೊಡಗಿದರು. ಅನ್ನಸಂತರ್ಪಣೆ ನಡದಿರುವುದು ಎತಕ್ಕಾಗಿ ಎಂಬುದರ

ಅರಿವಾಗಲಿ, ಅದನ್ನರಿತುಕೊಳ್ಳುವ ಆಸ್ಥೆಯಾಗಲಿ ಅವರಲ್ಲೊಬ್ಬರಿಗೂ ಇರಲಿಲ್ಲ. ತಮ್ಮ ದೊರೆ ಯುದ್ಧದ ಸಿದ್ಧತೆ ನಡೆಸಿದ್ದುದು, ಕೋಟೆಯ ಮೇಲೆ ಅದಕ್ಕಾಗಿ ಭಾರಿ ಸಿದ್ಧತೆ ನಡೆಯುತ್ತಿದ್ದುದು, ಇಂಗ್ಲೀಷರ ದಂಡು ತಮ್ಮ ನಗರದ ಮೇಲೆ ದಾಳಿ ಮಾಡಲು ಸಾಗಿಬರುತ್ತಿದ್ದುದು – ಇದಾವುದೂ ಅವರಿಗೆ ಗೊತ್ತಿರಲಿಲ್ಲ. ಈ ಸಂಗತಿಗಳನ್ನು ಅವರಿಗೆ ತಿಳಿಸುವ ಶ್ರಮವನ್ನೂ ಯಾರೂ ವಹಿಸಿರಲಿಲ್ಲ. ಭಟ್ಟರು ಅಡುಗೆ ಮಾಡುತ್ತಿದ್ದರು, ಪೂಜಾರಿಗಳು ಗಂಟೆ ಬಾರಿಸುತ್ತಿದ್ದರು, ಅರಮನೆಯ ಸೇವಕರು ಹೋಗಿ ಬ್ರಾಹ್ಮಣರನ್ನು ಭೋಜನಕ್ಕೆ ಕರೆದು ಬರುತ್ತಿದ್ದರು, ಅವರು ಹೆಂಡರುಮಕ್ಕಳ ಸಮೇತ ಬಂದು ಉಂಡು ತೇಗಿ, ದಕ್ಷಿಣೆಗಳನ್ನು ಪಡೆದು ದೊರೆಯನ್ನು ಹರಸುತ್ತ ಮನೆಗೆ ಹೋಗುತ್ತಿದ್ದರು.

"ಎಂಥಾ ಧರ್ಮಬುದ್ಧಿ ನಮ್ಮ ರಾಜಾಸಾಹೇಬರದು! ತಿಂಗಳಲ್ಲಿ ಹದಿನೈದು ಇಪ್ಪತ್ತು ದಿನವಾದರೂ ಸಮಾರಾಧನೆ ಇದ್ದೆಯಿರುತ್ತದೆ. ಅಖಂಡವಾಗಿರಲಪ್ಪ ಇವರ ಆಳಿಕೆ!"

ಸೈನಿಕರಿಗೆ ಒಂದು ವರ್ಷದವರೆಗಾದರೂ ಸಾಲುವಷ್ಟು ಆಹಾರಧಾನ್ಯಗಳನ್ನು ಕೋಟೆಯಲ್ಲಿ ಸಂಗ್ರಹಿಸಲು ಯತ್ನಿಸುತ್ತಿದ್ದ ರಾಜಶೇಖರನಿಗೆ ಮಾತ್ರ ದೇವಸ್ಥಾನದಲ್ಲಿ ನಡೆಯುತ್ತಿದ್ದ ಈ ಭೋಜನಸಮಾರಂಭಗಳಿಂದಾಗಿ ಪೀಕಲಾಟಕ್ಕಿಟ್ಟುಕೊಂಡಿತ್ತು. ರೈತರನ್ನು ಕಾಡಿ ಬೇಡಿ ದೂರದೂರದಿಂದ ಆತ ತರಿಸುತ್ತಿದ್ದ ಅಕ್ಕಿ ಜೋಳ ಗೋಧಿ ಮೊದಲಾದ ಧಾನ್ಯಗಳು ಕೋಟೆಗೆ ಬಂದು ಬೀಳುವ ಮೊದಲೇ ಅಧಿಕಾರಿಗಳು ದೇವಸ್ಥಾನದ ಉಗ್ರಾಣಕ್ಕೆ ಸಾಗಿಸುತ್ತಿದ್ದರು. ಹಾಗೆ ಮಾಡಕೂಡದೆಂದು ಆತ ವಾದಿಸಿದ್ದುದು ನಿಷ್ಪ್ರಯೋಜಕವಾಗಿತ್ತು. ಆತ ಮತ್ತೆ ತನ್ನ ಸಮದರ್ಜೆಯ ಅಧಿಕಾರಿಯಾಗಿ ಬಂದುದನ್ನು ಕಂಡು ಅಸೂಯೆಯಿಂದ ಉರಿಯುತ್ತಿದ್ದ ರಾಘೋಪಂತನೂ ಅವನಿಗೆ ಸಾಧ್ಯವಾದಷ್ಟು ತೊಂದರೆಯುಂಟಾಗುವಂತೆ ನೋಡಿಕೊಳ್ಳುತ್ತಿದ್ದ. ರಾಜಶೇಖರನ ಆಜ್ಞೆಯಂತೆ ಧಾನ್ಯಗಳನ್ನು ಕೋಟೆಗೆ ತರುತ್ತಿದ್ದ ಜನರು ರಾಘೋಬನ ಆಜ್ಞೆಯಾಗುತ್ತಲೂ ಅವುಗಳನ್ನು ಅವನು ಸೂಚಿಸಿದತ್ತ ಸಾಗಿಸುತ್ತಿದ್ದರು.

ರಾಜಶೇಖರ ಈ ವಿಚಾರವಾಗಿ ದಿವಾಣನಲ್ಲಿ ದೂರಿಕೊಂಡಾಗ ಈ ಬಗೆಗೆ ತಾನೇನನ್ನು ಮಾಡುವುದೂ ಸಾಧ್ಯವಾಗದೆಂದು ಹೇಳಿ ರಾಮರಾಯ ನುಣುಚಿಕೊಂಡ. ಕಡೆಯ ಉಪಾಯವೆಂದು ರಾಜಶೇಖರ ದೊರೆಯೆದುರಿಗೇ ದೂರಿಕೊಂಡ. ಸೈನ್ಯಕ್ಕೆಂದು ಸಂಗ್ರಹಿಸಲ್ಪಡುವ ಧಾನ್ಯ ಸಂತರ್ಪಣೆಗೆ ವ್ಯಯವಾಗು

ವುದು ಭಾಸ್ಕರರಾಯನಿಗೂ ಸರಿಯೆನಿಸಲಿಲ್ಲ. ಕಾರಭಾರಿ ಕೃಷ್ಣಾಜಿಯನ್ನು ಕರೆದು ದೊರೆ ವಿಚಾರಿಸಿದ :

"ದೇವಸ್ಥಾನಕ್ಕೆ ಬೇರೆ ಧಾನ್ಯ ಸಿಗುತ್ತಿಲ್ಲವೇ ಪಂತರೆ?"

"ಇಲ್ಲ ಹುಜೂರ್. ಉಗ್ರಾಣವೂ ಖಾಲಿಯಾಗಿದೆ. ಜನರಲ್ಲಿಯೂ ಕಾಳಿಲ್ಲವಂತೆ."

ಭಾಸ್ಕರರಾಯನಿಗೆ ಆ ಮಾತಿನಲ್ಲಿ ನಂಬುಗೆ ಮೂಡಲಿಲ್ಲ.

"ಇಷ್ಟು ಬೇಗ ಕಾಳು ತೀರಿಹೋದುವೇ? ಸುಗ್ಗಿಯಾಗಿ ಇನ್ನೂ ಆರು ತಿಂಗಳಾಗಿಲ್ಲವಲ್ಲ!"

"ಏನೋ ಯಾರಿಗೆ ಗೊತ್ತು ಹುಜೂರ್! ಅಂತೂ ರೈತರು ಕಾಳು ಮಾರಲು ತಯಾರಿಲ್ಲ. ಮಾರಲು ತಯಾರಿರುವರು ಒಂದಕ್ಕೆ ನಾಲ್ಕು ಬೆಲೆ ಕೇಳುತ್ತಾರೆ."

"ಅವರು ಕೇಳಿದಷ್ಟು ಕೊಟ್ಟು ಕೊಂಡುಕೊಳ್ಳಿರಿ. ಸೈನ್ಯಕ್ಕಾಗಿ ತರಿಸುವ ಕಾಳನ್ನು ಮಾತ್ರ ಮುಟ್ಟಬೇಡಿರಿ."

"ಅಪ್ಪಣೆ ಹುಜೂರ್. ಆದರೆ, ಎಷ್ಟು ಹಣ ತೆತ್ತರೂ ಕಾಳು ಸಿಗದೇ ಇದ್ದರೆ ಆಗ ಏನು ಮಾಡೋಣ?"

ಆ ಪ್ರಶ್ನೆಗೆ ಭಾಸ್ಕರರಾಯ ಉತ್ತರವೀಯಲಿಲ್ಲ. ಬ್ರಾಹ್ಮಣ ಭೋಜನ ದಿಂದ ವೆಂಕಟೇಶ್ವರ ತೃಪ್ತನಾಗುವನು, ಅವನು ತೃಪ್ತನಾದರೆ ತನಗೆ ಜಯ ದೊರೆಯುವುದು – ಎಂದು ಆತ ದೃಢವಾಗಿ ನಂಬಿಕೊಂಡಿದ್ದ. ಆದರೂ, ರಾಜ ಶೇಖರನೆದುರು ಆ ಮಾತನ್ನಾಡಲು ಅವನ ಮನಸ್ಸು ಸಿದ್ಧವಾಗಲಿಲ್ಲ.

"ನಾವು ಬೇರೇನಾದರೂ ವ್ಯವಸ್ಥೆ ಮಾಡುವೆವು. ನೀನೇನು ಚಿಂತಿಸ ಬೇಡ," ಎಂದಿಷ್ಟೆ ಹೇಳಿ ಆತ ರಾಜಶೇಖರನನ್ನು ಕಳಿಸಿಕೊಟ್ಟ.

ಸಾಯಂಕಾಲ ರಾಘೋಪಂತನನ್ನೂ ರಾಮರಾಯನನ್ನೂ ಕರೆಸಿಕೊಂಡು ಭಾಸ್ಕರರಾಯ ವಿಚಾರಿಸಿದ :

"ರೈತರು ನಮಗೆ ಕಾಳು ಮಾರಲೂ ಸಿದ್ಧರಿಲ್ಲವೆನ್ನುತ್ತೀರಾ?"

"ನಿಜ ಹುಜೂರ್."

"ಎಂದಿನಿಂದ ಹೀಗಾಗಿದೆ?"

"ಹೋದ ವರ್ಷದ ಸುಗ್ಗಿಯಿಂದಲೂ ಹೀಗೇ ನಡೆದಿದೆ."

"ಇದಕ್ಕೇನು ಕಾರಣವಿರಬಹುದು? ಏನಾದರೂ ಶಿಕ್ಷೆ ಮಾಡಿದ್ದೀರಾ?"

"ರೈತರೆಲ್ಲಾ ಬಹಳ ಸೊಕ್ಕಿಹೋಗಿದಾರೆ ಹುಜೂರ್. ಒಬ್ಬೊಬ್ಬರನ್ನೇ ಒದ್ದು ಮನೆಮಾರು ಜಪ್ತುಮಾಡಿದಾಗ ಹಾದಿಗೆ ಬರುತ್ತಾರೆ," ಎಂದ ರಾಘೋಬ.

ರಾಮರಾಯ ಮಾತ್ರ ಸೌಮ್ಯವಾಗಿಯೆ ಹೇಳಿದ:

"ಹಾಗೇನಾದರೂ ಮಾಡಿದರೆ ಮುಂದೆ ನಮಗೆ ಒಂದು ಕಾಳೂ ಸಿಕ್ಕಲಿಕ್ಕಿಲ್ಲ. ರೈತರು ಕಾಳು ಕೊಡದಿರುವುದಕ್ಕೆ ಕಾರಣ ಬೇರೆ ಇದೆ."

"ಅದೇನು ದಿವಾಣಜಿ?"

"ನನಗೆ ತಿಳಿದದ್ದನ್ನು ಹೇಳಿಬಿಡುತ್ತೇನೆ ಹುಜೂರ್. ಅದು ತಮ್ಮ ಮನಸಿಗೆ ಬರದಿದ್ದರೆ ಸೇವಕನ ಮೇಲೆ ಸಿಟ್ಟಾಗಬಾರದು. ಈ ಯುದ್ಧಗಳಿಂದಾಗಿ ಜನರಿಗೆ ಬೇಜಾರಾಗಿದೆ. ಅವರು ಶಾಂತಿಯಿಂದ ಜೀವಿಸಲು ಬಯಸುತ್ತಾರೆ. ಯಾವ ಕಾರಣದಿಂದಲೂ ಅವರಿಗೀಗ ಯುದ್ಧ ಬೇಕಾಗಿಲ್ಲ. ಅಂತೆಯೇ, ನಾವು ಧಾನ್ಯ ಕೂಡಿಸುತ್ತಿರುವುದು ಯುದ್ಧಕ್ಕೆಂದೇ ಭಾವಿಸಿ ಅವರು ಅದನ್ನು ಮುಚ್ಚಿಡುತ್ತಿದಾರೆ."

"ದರಬಾರಕ್ಕೆ ಕಾಳು ಮಾರಬಾರದೆಂದು ರೈತರಲ್ಲಿ ಪ್ರಚಾರ ಮಾಡುವವರದೊಂದು ಗುಂಪೂ ಇದೆ ಹುಜೂರ್" ಎಂದ ರಾಘೋಬ.

"ನಿಜವೇ ದಿವಾಣಜಿ?"

"ಹೌದು ಹುಜೂರ್. ಅಂಥಾದೊಂದು ಗುಂಪು ಇರುವುದೂ ನಿಜ. ಅವರಿಗೂ ಯುದ್ಧ ಬೇಡವಾಗಿದೆ."

"ಯುದ್ಧವಷ್ಟೇ ಅಲ್ಲ, ಮರಾಠಿಗರಾದ ನಮ್ಮ ಆಳಿಕೆಯೂ ಅವರಿಗೆ ಬೇಡವಾಗಿದೆ," ಎಂದ ರಾಘೋಬ. "ಈ ವಿಷಯವನ್ನೇಕೆ ನೀವು ಬಚ್ಚಿಡುವಿರಿ ದಿವಾಣಜಿ?"

"ನಾನೇಕೆ ಬಚ್ಚಿಡಲಿ? ನಾನೂ ಅದನ್ನೇ ಹೇಳುವವನಿದ್ದೆ. ಅಷ್ಟರಲ್ಲಿ ನೀವೇ ಹೇಳಿದಿರಿ."

"ಹಾಗಾದರೆ ನಮ್ಮ ವಿರುದ್ಧ ಪ್ರಚಾರ ಮಾಡುತ್ತಿದಾರೆಯೇ ಈ ಗುಂಪಿನ ಜನರು?" ಎಂದು ಭಾಸ್ಕರರಾಯ ಪ್ರಶ್ನಿಸಿದ. ಅಂಥದೊಂದು ಗುಂಪು ಅಸ್ತಿತ್ವದಲ್ಲಿದ್ದ ಸಂಗತಿ ಅವನಿಗೂ ಎಂದೋ ಗೊತ್ತಾಗಿಹೋಗಿತ್ತು. ಅವರ ಇತ್ತೀಚಿನ ಚಟುವಟಿಕೆಗಳನ್ನು ಮಾತ್ರ ಆತ ಗಮನಿಸಿರಲಿಲ್ಲ.

"ರಾಜ್ಯದುದ್ದಕ್ಕೂ ಅವರ ಪ್ರಚಾರ ನಡೆದಿದೆ ಹುಜೂರ್. ಯುದ್ಧದ ಸಿದ್ಧತೆಗೆ ಯಾರೂ ಸಹಾಯ ಮಾಡಬಾರದು, ಸೈನ್ಯದಲ್ಲೂ ಯಾರೂ ಸೇರಬಾರದು ಎಂದು ಅವರು ಗುಪ್ತವಾಗಿ ಜನರಿಗೆ ಬೋಧಿಸುತ್ತಿದಾರೆ."

"ಆದರೂ ಸೈನ್ಯಕ್ಕೆ ಜನರು ಬರುತ್ತಲೇ ಇರುವರಲ್ಲ?"

"ಸಂಬಳದ ಆಸೆ ತೋರಿಸಿ ಆ ರಾಜಶೇಖರ ಅವರನ್ನು ಹಿಡಿದು ತಂದಿದಾನೆ ಹುಜೂರ್," ಎಂದ ರಾಘೋಬ.

"ಅಂದರೆ? ಅವರು ಕೇವಲ ಸಂಬಳಕ್ಕಾಗಿಯೆ ಬಂದವರು ಅನ್ನುವಿರಾ?" ಭಾಸ್ಕರರಾಯ ದಿಗಿಲುಗೊಂಡು ಕೇಳಿದ.

"ಹೌದು ಹುಜೂರ್. ಆ ರಾಜಶೇಖರ್....ಅವನು ಅವರಿಗೆಲ್ಲಾ ಏನು ಹೇಳಿರುವನೊ ಯಾರು ಬಲ್ಲರು! ಯುದ್ಧಕ್ಕಾರಂಭವಾದಾಗ ಅವರು ಏನು ಮಾಡುವರೊ! ನಮ್ಮ ಮೇಲೇ ತಿರುಗಿಬಿದ್ದರೂ ಬೀಳುವ ಸಂಭವ...."

"ಉಹೂಂ. ಅವರು ಹಾಗೆ ಮಾಡಬಹುದೆಂದು ನನಗೇನು ಅನಿಸುವುದಿಲ್ಲ," ಎಂದ ರಾಮರಾಯ.

ರಾಜಶೇಖರನ ವಿಚಾರದಲ್ಲಿ ರಾಘೋಬನಿಗಿದ್ದ ಮತ್ಸರವನ್ನು ಬಲ್ಲ ಭಾಸ್ಕರ ರಾಯನೂ ರಾಘೋಬನ ಆ ಮಾತಿಗೆ ಮಹತ್ವವೀಯಲಿಲ್ಲ. ಆತ ಆ ವಿಷಯವನ್ನೆ ಬಿಟ್ಟು ಬೇರೊಂದು ವಿಚಾರ ಪ್ರಸ್ತಾಪಿಸಿದ:

"ಬೊಕ್ಕಸದಲ್ಲಿ ಸಾಕಷ್ಟು ಹಣ ಶಿಲ್ಕು ಇದೆಯೊ ಇಲ್ಲವೊ ದಿವಾಣಜಿ?"

"ನನಗೂ ಸರಿಯಾಗಿ ಗೊತ್ತಿಲ್ಲ ಹುಜೂರ್. ಕೋಶಾಧಿಕಾರಿಯನ್ನು ವಿಚಾರಿಸಿ ಕೇಳಬೇಕು."

"ಮೊನ್ನೆ ನಾವು ನೋಡಿದಾಗ ಅಷ್ಟೇನು ಹಣವಿರಲಿಲ್ಲ– ಇನ್ನು ಯುದ್ಧ ಮುಗಿಯುವವರೆಗೂ ಅಪಾರ ಹಣ ಬೇಕು. ಅದಕ್ಕೂ ಈಗಲೇ ವ್ಯವಸ್ಥೆ ಮಾಡಿಟ್ಟುಕೊಳ್ಳುವುದೊಳ್ಳೆಯದಲ್ಲವೆ?"

"ಹೌದು ಹುಜೂರ್."

"ರಾಮದುರ್ಗಕರರಿಂದ ಈ ಸಮಯದಲ್ಲಿ ಸಹಾಯವಾಗಬಹುದೆಂದು ನಾವು ಭಾವಿಸಿದ್ದೆವು. ಆಗಲಿಲ್ಲ. ಇನ್ನೇನು ಮಾಡುವುದು? ಅಗತ್ಯವಿದ್ದ ಹಣವನ್ನೆಲ್ಲಾ ನಮ್ಮ ಪ್ರಜಾ ಜನರಿಂದಲೇ ಕೂಡಿಸಬೇಕು. ಪೇಟೆಯ ಸೆಟ್ಟರನ್ನು ಕರೆಸಿ ವಿಚಾರಿಸಿ."

"ಅವರೆಲ್ಲಾ ನಮ್ಮ ವಿರೋಧಿಗಳ ಗುಂಪಿಗೇ ಸೇರಿದವರು ಹುಜೂರ್. ಅವರೇನೂ ಹಣ ಕೊಡಲಿಕ್ಕಿಲ್ಲ," ಎಂದ ರಾಘೋಬ.

"ಒಡವೆಗಳನ್ನಿಟ್ಟುಕೊಂಡು ಸಾಲವನ್ನಾದರೂ ಕೊಡಬಹುದಲ್ಲ?"

"ಕೇಳಿ ನೋಡುತ್ತೇನೆ ಸರಕಾರ್. ಕೆಲವರಾದರೂ ಕೊಡಬಹುದು," ಎಂದ ರಾಮರಾಯ.

ಅಷ್ಟರಲ್ಲಿ ದ್ವಾರಪಾಲಕ ಬಂದು, ದೂತನೊಬ್ಬ ಅವಸರದಿಂದ ಬಂದು ಭೆಟ್ಟಿಗಾಗಿ ಅಪ್ಪಣೆ ಬೇಡುತ್ತಿರುವುದಾಗಿ ತಿಳಿಸಿದ.

"ಅವನನ್ನು ಕಳಿಸಿಕೊಡು" ಎಂದ ದೊರೆ.

ಕುದುರೆಯೇರಿಕೊಂಡು ಆತುರದಿಂದ ಬಂದಿದ್ದ ಆ ದೂತನ ಮೂಗಿನಿಂದ ಆಗಲೂ ಉಸಿರು ವೇಗವಾಗಿ ಹೊರಡುತ್ತಿತ್ತು. ದೊರೆಗೆ ಮುಜುರೆ ಸಲ್ಲಿಸುತ್ತಾ ಆತ ಹೇಳಿದ:

"ಇಂಗ್ರೇಜರ ದಂಡು ರಾಮದುರ್ಗದಿಂದ ಹೊರಟುಬಿಟ್ಟಿದೆ ಸರಕಾರ್."

"ದಂಡಿನಲ್ಲಿ ಎಷ್ಟು ಜನರಿರಬಹುದು?"

"ಸಾವಿರ ಜನರಾದರೂ ಇರಬಹುದು ಸರಕಾರ್. ಸರಿಯಾಗಿ ನೋಡಲು ಅವಕಾಶವಿರಲಿಲ್ಲ. ಕೂಡಲೆ ಸುದ್ದಿ ತಿಳಿಸುವುದು ಅಗತ್ಯವೆಂದು ಇತ್ತ ಧಾವಿಸಿ ಬಂದೆ."

"ಒಳ್ಳೆಯದು ಮಾಡಿದೆ. ನೀನೀಗ ಹೋಗಿ ಊಟ ಮಾಡಿ ವಿರಮಿಸು," ಎಂದು ದೂತನಿಗೆ ಅಪ್ಪಣೆಯಿತ್ತು ಭಾಸ್ಕರರಾಯ ರಾಘೋಬನ ಕಡೆಗೆ ಹೊರಳಿ ಹೇಳಿದ:

"ಈಗಿಂದೀಗ ಸಾವಿರ ಮಂದಿ ಸೈನಿಕರು ಊಟ ಮುಗಿಸಿಕೊಂಡು ಕೂಚು ಮಾಡಲು ತಯಾರಾಗಲಿ. ಆ ಮ್ಯಾನ್‌ಸನ್ನನಿಗೆ ನಮ್ಮ ಕೈಯನ್ನು ಅರ್ಧ ಹಾದಿಯಲ್ಲೇ ತೋರಿಸೋಣ."

ರಾಮರಾಯ ಏನನ್ನೋ ಹೇಳಲೆಂದು ಯೋಚಿಸಿಕೊಂಡವನು ಮತ್ತೇನನ್ನೋ ಯೋಚಿಸಿ ಬಾಯಿ ಬಿಗಿ ಹಿಡಿದು ಸುಮ್ಮನಾದ. ಆವೇಶಗೊಂಡ ದೊರೆಯನ್ನು ತಡೆಯಲೆತ್ನಿಸುವುದೆಂದರೆ ಕೆರಳಿದ ಹಾವನ್ನು ತಡೆಯಲೆತ್ನಿಸುವಂತೆ ಅಪಾಯಕಾರಿಯೆಂದೇ ಅವನಿಗನ್ನಿಸಿತು.

ಇತ್ತ ರಾಘೋಬನ ಕೈಕಾಲು ನಡುಗತೊಡಗಿದ್ದುವು. ಅಷ್ಟು ಬೇಗ ಯುದ್ಧದ ಪ್ರಸಂಗ ಬರಬಹುದೆಂದು ಆತ ಭಾವಿಸಿರಲಿಲ್ಲ. ಇಂಗ್ಲೀಷರ ವಿರುದ್ಧ

ಯುದ್ಧ! ಸೈನಿಕರೊಡನೆ ತಾನೂ ಕೂಚು ಮಾಡುವುದು! ಅದರ ಕಲ್ಪನಾ ಮಾತ್ರದಿಂದಲೇ ಅವನ ಎದೆ ಕಂಪಿಸಿತು. ಎತ್ತರದ, ಬಲಿಷ್ಠ ದೇಹಾಕೃತಿಯ, ಕೆಂಪು ಮೊಗದ, ಬೆಕ್ಕಿನ ಕಣ್ಣುಗಳ ಆಂಗ್ಲೇಯರೊಡನೆ ಮಾತನಾಡುವಾಗ ಕೂಡಾ ಅವನ ನರಮಂಡಲ ನಿಸ್ತೇಜವಾಗುತ್ತಿತ್ತು, ನಾಲಗೆ ತೊದಲುತ್ತಿತ್ತು, ಅಂಥವರನ್ನು ಎದುರಿಸಿ ಯುದ್ಧ ಮಾಡುವುದೆಂದರೆ ತನ್ನ ಕೈಲಾಗುವ ಮಾತೇ? ದೊಡ್ಡ ದೊಡ್ಡ ಪೇಶ್ವೆಗಳಿಗೂ ಮಣ್ಣು ಮುಕ್ಕಿಸಿದ ಆ ಜನರ ವಿರುದ್ಧ ಯುದ್ಧ!

"ಯಾಕೆ ರಾಘೋಪಂತರೆ? ನಾವು ಹೇಳಿದ್ದು ಕೇಳಿಸಲಿಲ್ಲವೆ? ಇಲ್ಲೇಕೆ ನಿಂತಿರಿ? ಸೈನಿಕರನ್ನು ಸಿದ್ಧಗೊಳಿಸಿ ನೀವೂ ಸಿದ್ಧವಾಗಿರಿ," ಎಂದು ಮತ್ತೆ ಹೇಳಿದ ಭಾಸ್ಕರರಾಯ. "ಅಂಜಿಕೊಂಡ ಹಾಗೆ ಕಾಣುತ್ತಲ್ಲ ನೀವು? ಯುದ್ಧಕ್ಕೆ ಬರುವ ಇಚ್ಛೆಯಾದರೂ ಇದೆಯೋ ಇಲ್ಲವೋ?"

ನಿಜವಾಗಿ, ರಾಘೋಪಂತನಿಗೆ ಯುದ್ಧಕ್ಕೆ ಹೊರಡುವ ಇಚ್ಛೆಯಿರಲಿಲ್ಲ. ಆದರೆ, ದೊರೆಯ ಎದುರು ಹಾಗೆ ಸ್ಪಷ್ಟವಾಗಿ ಹೇಳುವುದಾದರೂ ಹೇಗೆ? ಆಂಗ್ಲೇಯರ ದಂಡು ನುಗ್ಗಿ ಬರುತ್ತಿದೆಯಾದ್ದರಿಂದ ದೊರೆಗೂ ಈಗ ಕದನದ ಆವೇಶ ಬಂದಿದೆ. ತಾನೀಗ ಯುದ್ಧಕ್ಕೆ ಬರುವುದಿಲ್ಲವೆಂದರೆ ಆತ ತನ್ನನ್ನು ಜರಿದು ಅವಮಾನಗೊಳಿಸಿ ಸೇನಾಪತಿಯ ಪದದಿಂದ ತನ್ನನ್ನು ತೆಗೆದೊಗೆದು ಮನೆಗೆ ಕಳಿಸಿಬಿಡಬಹುದು. ವೆಂಕಟೇಶನ ಕೃಪೆಯಿಂದ ಇಂಥ ದೊಡ್ಡ ಸಂಬಳದ ಕೆಲಸ ಸಿಕ್ಕಿದೆ. ಈಗ ಇದನ್ನು ಕಳೆದುಕೊಂಡರೆ ಮತ್ತೆ ಇಂಥ ಕೆಲಸ ಸಿಕ್ಕುವುದು ಕಠಿಣವೇ ಸರಿ. ಯುದ್ಧಕಾಲದಲ್ಲಿ ದೊಡ್ಡ ಕುಟುಂಬವನ್ನು ಕಟ್ಟಿಕೊಂಡು ಬೇರೆ ಕಡೆಗೆ ಹೊರಡುವುದೂ ಕಷ್ಟವೇ. ಅಲ್ಲದೆ, ಕೆಲವೇ ದಿನಗಳಲ್ಲಿ ತನ್ನ ಹಿರಿಯ ಮಗಳ ವಿವಾಹ ಬೇರೆ ನಡೆಯಬೇಕಾಗಿದೆ. ಗಂಡು ಗೊತ್ತಾಗಿದೆ, ಲಗ್ನದ ಸಿದ್ಧತೆಯಾಗಿದೆ, ಮನೆಯಲ್ಲಿ ಸಿಹಿತಿಂಡಿಗಳು ತಯಾರಾಗುತ್ತಿವೆ. ಇನ್ನು ವಿವಾಹ ನೆರವೇರುವುದಷ್ಟೆ ಉಳಿದಿದೆ. ಇಂಥ ಸಂದರ್ಭದಲ್ಲಿ ಕೆಲಸ ಕಳೆದುಕೊಂಡರೂ ಕಷ್ಟ, ಯುದ್ಧಕ್ಕೆ ಹೊರಟರೂ ಕಷ್ಟ. ಯುದ್ಧವೆಂದರೆ ಯುದ್ಧ. ಅಲ್ಲಿ ಏನಾದೀತು, ಏನಾಗಲಿಕ್ಕಿಲ್ಲ ಎಂದು ಯಾರೂ ಹೇಳುವಂತಿಲ್ಲ. ಕೆಂಪು ಮೋರೆಯ ಧಡಿಯನೊಬ್ಬನ ಬಂದೂಕಿಗೆ ತಾನು ಬಲಿಯಾಗಿಬಿಟ್ಟರೇನು ಗತಿ? ಅನಂತರ ತನ್ನ ಮಗಳ ಮದುವೆ ಮಾಡುವವರಾರು? "ಅಯ್ಯೋ ದೇವರೇ! ಎಂಥಾ ಸಂಕಟ ಬಂತು!" ಎಂದು ಮನಸ್ಸಿನಲ್ಲಿಯೆ ನರಳತೊಡಗಿದ ರಾಘೋಪಂತ. ಮದುವೆಯ ಕಾಲಕ್ಕೇ ವೈರಿಗಳ ಫಿರಂಗಿಗಳು ಅಗ್ನಿವೃಷ್ಟಿಗಾರಂಭಿಸಿದರೇನು ಗತಿ? ಲಗ್ನ-

ಮಂಟಪದಲ್ಲಿ ಅಕ್ಷತೆಯ ಬದಲು ಅಗ್ನಿಗೋಲಗಳು ಬೀಳುವ ಪ್ರಸಂಗ ಬರುವುದೇ ? ಲಗ್ನವನ್ನೂ ಮುಂದುವರಿಸುವಂತಿಲ್ಲ. ಇದೊಂದು ಮುಹೂರ್ತ ಬಿಟ್ಟರೆ ಇನ್ನೊಂದು ವರ್ಷದವರೆಗೆ ಬೇರೆ ಮುಹೂರ್ತವಿಲ್ಲ. ಮಗಳು ಎದೆಯುದ್ದ ಬೆಳೆದು ನಿಂತಿದ್ದಾಳೆ. ಈ ವರ್ಷವೇ ವಿವಾಹ ಸಮಾರಂಭ ಮುಗಿಯಲೇಬೇಕು....

"ದೇವಾ ! ವೆಂಕಟೇಶಾ ! ಎಂಥ ಪರೀಕ್ಷಾಕಾಲವಿದು !" ಎಂದು ಮನಸ್ಸಿನಲ್ಲಿಯೆ ಹೇಳಿಕೊಳ್ಳುತ್ತಾ ರಾಘೋಪಂತ ಅಲ್ಲಿಂದ ಹೊರಟು ನಡೆದ.

ಅದುವರೆಗೆ ಬಾಗಿಲಿನಾಚೆ ನಿಂತು, ಒಳಗೆ ನಡೆದಿದ್ದ ಮಾತುಕತೆಗಳನ್ನಾಲಿಸುತ್ತಿದ್ದ ಬನ್ಯಾಬಾಪು, ರಾಘೋಪಂತ ಹೊರಟುಹೋಗುತ್ತಲೂ ಒಳಗೆ ಬಂದು ಕೇಳಿದ:

"ಅಂದರೇನು, ತಾವೂ ಹೋಗುವವರೇ ಹುಜೂರ್ ?"

"ಹೌದು ಬಾಪು. ನಾನೇ ಹೋಗಿ ಆ ಮ್ಯಾನ್‌ಸನ್ನನ ಸಮಾಚಾರ ತೆಗೆದುಕೊಂಡು ಬರ್ತೇನೆ. ಬೇಗ ಅಡುಗೆ ಸಿದ್ಧಗೊಳಿಸಲು ಹೇಳು ಭಟ್ಟರಿಗೆ. ನಾನೀಗ ಸ್ನಾನಮಾಡಿ ವೆಂಕಟೇಶನ ದರ್ಶನಕ್ಕೆ ಹೋಗಬೇಕು. ವಿಷ್ಣುವನ್ನಿತ್ತ ಕಳಿಸು. ಹಾಗೇ ರಾಜಶೇಖರನಿಗೂ ಬಂದು ಹೋಗಲು ಹೇಳಿಕಳಿಸು."

ಬನ್ಯಾಬಾಪುವಿಗೆ ಒಳಗೊಳಗೇ ತುಂಬಾ ಹೆದರಿಕೆಯಾಗಿದ್ದಿತಾದರೂ ಅದನ್ನಾತ ಹೊರಗೆ ವ್ಯಕ್ತಗೊಳಿಸದೆ ಅಲ್ಲಿಂದ ಹೊರಟು ಹೋದ. ಅವನ ಚುರುಕು ಬುದ್ಧಿ ತೀವ್ರವಾಗಿ ಕೆಲಸ ಮಾಡತೊಡಗಿತ್ತು. ಯುದ್ಧಕ್ಕಾರಂಭವಾಗುವ ಸಮಯವಂತೂ ಸನ್ನಿಹಿತವಾಯಿತು. ಮ್ಯಾನ್‌ಸನ್ ಸಾಹೇಬನೊಡನೆ ಸಾಕಷ್ಟು ಸೈನ್ಯವಿದೆಯೊ ಇಲ್ಲವೊ. ಭಾಸ್ಕರರಾಯನಂತೂ ಸಾವಿರ ಮಂದಿ ಸೈನಿಕರೊಡನೆ ಹೊರಡುವವನು. ಮೊದಲನೆಯ ಘರ್ಷಣೆಯಲ್ಲಿ ಯಾರು ಗೆಲ್ಲಬಹುದು, ಯಾರು ಸೋಲಬಹುದು ಎಂದು ಊಹಿಸುವುದು ಕಷ್ಟವೆ. ದುರ್ದೈವದಿಂದ ಒಂದು ವೇಳೆ ಮ್ಯಾನ್‌ಸನ್ ಸೋತುಹೋದರೆ, ಅಥವಾ ಸತ್ತುಹೋದರೆ ತನ್ನ ಮೇಲೂ ಕೃಷ್ಣಾಜಿಯ ಮೇಲೂ ಭೀಕರ ಆಪತ್ತು ಬಂದೆರಗಬಹುದು. ಇಲ್ಲಿಯ ರಹಸ್ಯಗಳನ್ನು ತಿಳಿಸಿ ತಾವು ಮ್ಯಾನ್‌ಸನ್ನನಿಗೆ ಬರೆದಿರುವ ಪತ್ರಗಳು ಅವನ ಹತ್ತಿರವೆ ಇರಬಹುದು. ಆ ಪತ್ರಗಳು ಭಾಸ್ಕರರಾಯನ ಕೈಗೆ ಸಿಕ್ಕರೆ ಮುಗಿದೇಹೋಯಿತು ! ತನ್ನನ್ನೂ ಕೃಷ್ಣಾಜಿಯನ್ನೂ ಆತ ತೋಪಿನ ಬಾಯಿಗೆ ಕಟ್ಟಿ ಕೊಲ್ಲದೆ ಬಿಡುವುದಿಲ್ಲ.

ಹಾಗೆ ಯೋಚಿಸಿದ ಬಾಪು, ನರಗುಂದದ ದಂಡು ನಗರದಿಂದ ಹೊರಡು

ತ್ತಲೂ ತಾನೂ ಕೃಷ್ಣಾಜಿಯೂ ಅವನ ಪರಿವಾರ ಸಮೇತರಾಗಿ ಊರು ತ್ಯಜಿಸಿ ಇಂಗ್ಲೀಷರ ಸೀಮೆಗೆ ಹೋಗಿ ಸುರಕ್ಷಿತವಾಗಿರುವುದೆಂದು ಮನಸ್ಸಿನಲ್ಲಿಯೆ ನಿರ್ಧರಿಸಿದ.

## ೧೦

ದಕ್ಷಿಣದಲ್ಲಿನ ದೇಶೀಯ ಸಂಸ್ಥಾನಿಕರು ಬಂಡು ಹೂಡದಂತೆ ನೋಡಿ ಕೊಳ್ಳಲೆಂದು ಕಂಪನಿ ಸರಕಾರದವರು ಗ್ರ್ಯಾಂಟ್ ಜೇಕಬ್ ಎಂಬಾತನನ್ನು ವಿಶೇಷ ಅಧಿಕಾರಿಯನ್ನಾಗಿ ನೇಮಿಸಿದ್ದರು. ನರಗುಂದದಲ್ಲಿ ಬಂಡಾಯದ ಸಿದ್ಧತೆ ನಡೆದುದು ಖಚಿತವೆಂದು ಅವನಿಗೆ ತಿಳಿಯುತ್ತಲೂ ಅದನ್ನು ಮೊಳಕೆಯಲ್ಲಿಯೆ ಮುರಿಯುವುದು ಜಾಣತನವೆಂದು ಬಗೆದು ಆತ ಅದಕ್ಕಾಗಿ ಕರ್ನಲ್ ಮ್ಯಾನ್‌ಸನ್ ಸಾಹೇಬನನ್ನು ನೇಮಿಸಿ, ಅವನೊಡನೆ ಕಳಿಸಬೇಕಿದ್ದ ಸೈನ್ಯದ ಏರ್ಪಾಡಿಗೆ ತೊಡಗಿದ.

ಜೇಕಬ್ ಸಾಹೇಬನ ಆಜ್ಞೆ ಮುಟ್ಟಿದಾಗ ಮ್ಯಾನ್‌ಸನ್ ಕುರುಂದವಾಡ ದಲ್ಲಿದ್ದ. ಆ ಸಮಯದಲ್ಲಿ ಅವನೊಡನೆ ಹೆಚ್ಚಿನ ಸೈನ್ಯವಿರಲಿಲ್ಲ. ಅವನ ಮೈಗಾವಲಿಗೆಂದು ಯಾವಾಗಲೂ ಇರುತ್ತಿದ್ದ ಹತ್ತು ಹನ್ನೆರಡು ಜನ ರಾವುತರ ಪಡೆಯಿದ್ದಿತಷ್ಟೆ. ಜೇಕಬ್ ಸಾಹೇಬ ಕಳಿಸಲಿದ್ದ ಸೈನ್ಯದ ಹಾದಿ ನೋಡುತ್ತಾ ಕುರುಂದವಾಡದಲ್ಲಿ ಕಾಲಹರಣ ಮಾಡಲು ಮ್ಯಾನ್‌ಸನ್ನನ ಮನಸ್ಸು ಸಿದ್ಧ ವಾಗಲಿಲ್ಲ. ಚಟುವಟಿಕೆಯಿಲ್ಲದ ಸೋಮಾರಿ ಜೀವನ ಕ್ರಮವೆಂದರೆ ಅವನಿಗಾಗು ತ್ತಿರಲಿಲ್ಲ. ಪಾದರಸದಂತೆ ಯಾವಾಗಲೂ ಅತ್ತಿತ್ತ ಸಂಚರಿಸುವುದೆಂದರೆ ಅವನಿಗೆ ಅತ್ಯಂತ ಪ್ರೀತಿ. ಸೈನ್ಯವನ್ನು ನೇರವಾಗಿ ನರಗುಂದಕ್ಕೇ ಕಳಿಸಿಕೊಡುವಂತೆ ಜೇಕಬ್ ಸಾಹೇಬನಿಗೆ ತಿಳಿಸಿ, ತನ್ನ ಅಂಗರಕ್ಷಕದಳದೊಡನೆ ಮ್ಯಾನ್‌ಸನ್ ರಾಮದುರ್ಗಕ್ಕೆ ಬಂದ. ನರಗುಂದದಲ್ಲಿ ನಡೆದ ಸಮರಸಿದ್ಧತೆಯ ಬಗೆಗೆ ಹೆಚ್ಚಿನ ವಿವರಗಳನ್ನು ಸಂಗ್ರಹಿಸುವುದೇ ಅವನು ಅಲ್ಲಿಗೆ ಬಂದುದರ ಉದ್ದೇಶವಾಗಿತ್ತು.

ರಾಮದುರ್ಗದ ರಾಜ ಹರಿಹರರಾಯ ಕರ್ನಲ್ ಮ್ಯಾನ್‌ಸನ್ನನನ್ನು ಸಂಭ್ರಮದಿಂದಲೇ ಬರಮಾಡಿಕೊಂಡು ರಾಜೋಚಿತವಾದ ರೀತಿಯಲ್ಲಿ ಸತ್ಕರಿಸಿದ. ಸುತ್ತಲೂ ಬಂಡಾಯದ ಬೇಗೆ ಹರಡಿರುವ ಈ ಸಮಯದಲ್ಲಿ ತಾನು ಮಾತ್ರ ಇಂಗ್ರಜರಿಗೆ ನಿಷ್ಠನಾಗಿಯೆ ಉಳಿದು ಅವರ ಪ್ರೀತಿಯನ್ನೂ ನಂಬುಗೆಯನ್ನೂ ಗಳಿಸಿ

ಕೊಂಡು ಯಥೇಚ್ಛವಾಗಿ ಲಾಭ ಮಾಡಿಕೊಳ್ಳಬೇಕೆಂದೇ ಹರಿಹರರಾಯ ನಿರ್ಧರಿಸಿದ್ದ. ಮ್ಯಾನ್‌ಸನ್ ಸಾಹೇಬನನ್ನು ಸಂತುಷ್ಟಗೊಳಿಸಿ ಅವನ ಶಿಫಾರಸಿನಿಂದ ನರಗುಂದವನ್ನೂ ತಾನು ಸಂಪಾದಿಸಬಹುದೆಂದು ಆತ ಆಸೆಯಿಟ್ಟುಕೊಂಡಿದ್ದ. ಎಂತಲೇ, ಮ್ಯಾನ್‌ಸನ್ನನ ಆತಿಥ್ಯದಲ್ಲಿ ಯಾವುದರ ಕೊರತೆಯೂ ಆಗದಂತೆ ಆತ ಎಚ್ಚರದಿಂದಿದ್ದ.

ಹರಿಹರರಾಯ ನರಗುಂದದ ಮೇಲೆ ಕಣ್ಣಿಟ್ಟಿದ್ದ ವಿಚಾರ ಮ್ಯಾನ್‌ಸನ್ನನಿಗೂ ಎಂದೋ ಗೊತ್ತಾಗಿಹೋಗಿತ್ತು. ರಾಮದುರ್ಗಕರನ ಆ ಆಸೆಯನ್ನು ಕಂಡು ಮ್ಯಾನ್‌ಸನ್ನನಿಗೆ ನಗೆಯೂ ಬಂದಿತ್ತು. ನರಗುಂದಕರನಿಗೆ ದತ್ತು ಸ್ವೀಕಾರಕ್ಕೆ ಅನುಮತಿಯೀಯದೆ ಅವನ ರಾಜ್ಯವನ್ನು ಸೆಳೆದುಕೊಳ್ಳಲು ತಾವು ಯತ್ನಿಸುತ್ತಿರುವುದೇತಕ್ಕಾಗಿ? ಭಾಸ್ಕರರಾಯನಿಂದ ಅದನ್ನು ಕಸಿದುಕೊಂಡು ಹರಿಹರರಾಯನಿಗೆ ಕೊಡುವುದಕ್ಕಾಗಿಯೆ ತಾವು ಇಷ್ಟು ಶ್ರಮ ವಹಿಸುತ್ತಿರುವೆವೆ? ಈ ಹಿಂದೀಯರೆಷ್ಟು ಮೂಢರು! ಇಂಥ ಸುಲಭ ವಿಚಾರಗಳೂ ಕೂಡ ಬೇಗ ತಿಳಿಯುವುದಿಲ್ಲವಲ್ಲ ಇವರ ದಪ್ಪ ಮೆದುಳುಗಳಿಗೆ!

ಹಾಗೆ ಯೋಚಿಸುತ್ತಾ ಮ್ಯಾನ್‌ಸನ್ ನಕ್ಕು ಬಿಟ್ಟಿದ್ದ. ರಾಮದುರ್ಗಕರನ ಮೂಗಿಗೆ ಬೆಣ್ಣೆ ಹಚ್ಚಿ ಕೂಡ್ರಿಸಿ ಅವನಿಂದ ಆದಷ್ಟು ಸಹಾಯ ಪಡೆಯುವುದಕ್ಕಾಗಿ ಅವನ ಈ ಆಸೆಯನ್ನುಪಯೋಗಿಸಿಕೊಳ್ಳುವುದೆಂದೂ ಆತ ನಿರ್ಧರಿಸಿದ್ದ.

ಭಾಸ್ಕರರಾಯನಿಗೂ ಮ್ಯಾನ್‌ಸನ್ನನಿಗೂ ನಡೆದ ವೈಯಕ್ತಿಕ ಘರ್ಷಣೆಯ ವಿಚಾರವೂ ಹರಿಹರರಾಯನಿಗೆ ತಿಳಿದಿತ್ತು. ಭಾಸ್ಕರರಾಯನಿಂದ ಮುಖಭಂಗಿತನಾದ ಮ್ಯಾನ್‌ಸನ್ ಆತನ ಬಗೆಗೆ ದ್ವೇಷ ಸಾಧಿಸುತ್ತಿರುವನೆಂದೇ ಹರಿಹರರಾಯ ಭಾವಿಸಿದ್ದ. ಎಂತಲೇ, ಮ್ಯಾನ್‌ಸನ್ನನೆದುರಿನಲ್ಲಿ ತನ್ನ ಅಣ್ಣನನ್ನು ಟೀಕಿಸಲೂ ಆತ ಹೇಸಲಿಲ್ಲ.

"ಅವನು ನನ್ನ ಅಣ್ಣನೆಂದು ಒಪ್ಪಿಕೊಳ್ಳಲೂ ನನಗೆ ನಾಚಿಕೆಯಾಗುತ್ತದೆ ಸಾಹೇಬರೆ. ಬಹಳ ಅವಿವೇಕಿ. ತಲೆತಿರುಕ."

ತನ್ನ ಒಲುಮೆ ಗಳಿಸುವ ಉದ್ದೇಶದಿಂದಲೇ ಹರಿಹರರಾಯ ಆ ರೀತಿ ಮಾತನಾಡುತ್ತಿದ್ದುದು ಚಾಣಾಕ್ಷನಾದ ಮ್ಯಾನ್‌ಸನ್ನನಿಗೆ ಕೂಡಲೇ ಗೊತ್ತಾಯಿತು. ಭಾಸ್ಕರರಾಯನ ಬಗೆಗೆ ಅವನಲ್ಲಿ ಸದಭಿಪ್ರಾಯವಿರಲಿಲ್ಲವಾದರೂ ದುರಭಿಪ್ರಾಯವೂ ಇರಲಿಲ್ಲ. ಹಲವು ಸಂದರ್ಭಗಳಲ್ಲಿ ಆತ ತನಗೆ ಕಟುವಾಗಿ ಮಾತನಾಡಿದ್ದುದೇನೊ ನಿಜವೆ. ಹಾಗೆ ಮಾತನಾಡುವುದು ಅವನ ಸ್ವಭಾವಕ್ಕೆ

ಸಹಜವಾದ ವಿಚಾರವೂ ಆಗಿರಬಹುದು. ಮನುಷ್ಯಪ್ರಾಣಿ ಕೋಪಿಸಿಕೊಂಡಾಗ ಅವನ ಮುಖದಿಂದ, ಅಸಭ್ಯ ಮಾತು ಹೊರಬರುವುದು ಅಚ್ಚರಿಯ ವಿಚಾರ ವೇನಲ್ಲ. ತನಗೂ ಸಿಟ್ಟು ಬಂದಾಗ ತಾನೂ ಕಟೂಕ್ತಿಗಳನ್ನಾಡುವುದಿಲ್ಲವೆ? ಹಾಗೇ, ಭಾಸ್ಕರರಾಯನೂ ಹಲವು ಮಾತು ಆಡಿದ್ದುದಿತ್ತು. ಅದಕ್ಕಾಗಿ ತಾನು ಅವನ ಮೇಲೆ ದ್ವೇಷ ಸಾಧಿಸುವುದು ಸರಿಯಲ್ಲವೆಂದೇ ಮ್ಯಾನ್‌ಸನ್ ಭಾವಿಸಿದ್ದ.

ತನ್ನ ಮನಸ್ಸಿನಲ್ಲಿ ಏನಿದೆಯೆಂಬುದು ಈ ಸ್ವಾರ್ಥಿ ಸಂಸ್ಥಾನಿಕನಿಗೆ ತಿಳಿಯುವುದಾದರೂ ಹೇಗೆ? ತನ್ನ ನೀಚಸ್ವಾರ್ಥ ಸಾಧಿಸಿಕೊಳ್ಳುವುದಕ್ಕಾಗಿ ಸ್ವಂತ ಅಣ್ಣನನ್ನೇ ಹಳಿಯುವಷ್ಟು ಕೀಳು ಮಟ್ಟಕ್ಕಿಳಿದ ಹರಿಹರರಾಯನ ಬಗೆಗೆ ಮ್ಯಾನ್‌ಸನ್ನನಿಗೆ ತಿರಸ್ಕಾರ ಬರದಿರಲಿಲ್ಲ. ಆದರೂ, ಆಗ ಆ ತಿರಸ್ಕಾರವನ್ನು ವ್ಯಕ್ತಗೊಳಿಸುವಂತಿರಲಿಲ್ಲ. ಹರಿಹರರಾಯನ ಕೀಳ್ತನವೆಲ್ಲವನ್ನೂ ಸಹಿಸಿಕೊಂಡು ಅವನಿಂದ ಉಪಯುಕ್ತವಾದ ಮಾಹಿತಿಯನ್ನು ಸಂಗ್ರಹಿಸುವುದು ಅವಶ್ಯವಾಗಿತ್ತು.

"ಕಂಪನಿ ಸರಕಾರದವರ ಕೃಪೆಯಿಂದಾಗಿಯೆ ನಮ್ಮ ಗಾಡಿಗಳು ಉಳಿದಿದ್ದು. ನಾವು ಕೃತಘ್ನರಾಗದೆ ಅವರಿಗೆ ವಿಧೇಯರಾಗಿಯೆ ಇರಬೇಕೆಂದು ನಾನೆಷ್ಟು ಬೋಧಿಸಿದರೂ ನಮ್ಮಣ್ಣನ ತಲೆಗೆ ಹಿಡಿಯಲಿಲ್ಲ. ಆ ಮುಂಡರಗಿ ಭೀಮರಾಯನಂಥ ಪುಂಡರು ಕೂಡಿ ಅವನ ತಲೆಯನ್ನಿನ್ನೂ ಕೆಡಿಸಿದರು. ಏನು ಮಾಡುವುದು ಸಾಹೇಬರೆ! ವಿನಾಶಕಾಲೇ ವಿಪರೀತ ಬುದ್ಧಿ ಅಂತ ನಮ್ಮ ಹಿರಿಯರು ಗಾದೆಯ ಮಾತನ್ನೇ ಮಾಡಿಟ್ಟು ಹೋಗಿದ್ದಾರೆ. ಬಾಬಾ ಸಾಹೇಬನಿಗೂ ವಿ ನಾ ಶ ಕಾ ಲ ವೇ ಬಂದಿದೆಯೆಂದು ಕಾಣುತ್ತದೆ. ಅದಕ್ಕಾಗಿಯೆ...."

"ನರಗುಂದಕರರ ಸಹಾಯಕ್ಕೆ ಬರುತ್ತೇವೆಂದು ಕೆಲವು ಸಂಸ್ಥಾನಿಕರು ಒಪ್ಪಿಕೊಂಡಿರುವರಂತಲ್ಲ? ಅವರು ಯಾರು? ನಿಮಗೇನಾದರೂ ಗೊತ್ತೇ?" ಎಂದು ಮ್ಯಾನ್‌ಸನ್ ವಿಚಾರಿಸಿದ.

"ಅವರು ಯಾರೆಂಬುದು ತಮಗೂ ತಿಳಿದೇ ಇರಬಹುದು. ಸಾಂಗ ಲೀಕರರೂ ಮಿರಜಕರರೂ ಸಹಾಯ ಮಾಡುವ ವಚನ ಕೊಟ್ಟದ್ದರೆಂದು ನಾನೇನೋ ಕೇಳಿದ್ದೆ. ಆ ಸುದ್ದಿಯಲ್ಲಿ ಎಷ್ಟು ಸತ್ಯವಿದೆಯೆಂಬುದು ನನಗೆ ಗೊತ್ತಿಲ್ಲ. ಅವರ ಜೊತೆಗೆ ನನ್ನ ಸಂಬಂಧವೂ ಬಂದಿಲ್ಲ."

"ನರಗುಂದಕರರು ನಿಮಗೆ ಬರೆದ ಪತ್ರಗಳನ್ನಾದರೂ ತೋರಿಸಿರಿ.

ನೋಡೋಣ. ಅವುಗಳಲ್ಲಿ ಏನಾದರೂ ವಿಶೇಷ ಮಾಹಿತಿ ಸಿಕ್ಕಿದರೂ ಸಿಕ್ಕಬಹುದು.”

ತನ್ನ ಹಿರಿಯಣ್ಣ ಬರೆದಿದ್ದ ಪತ್ರಗಳನ್ನೆಲ್ಲ ತಂದು ಹರಿಹರರಾಯ ಸಾಹೇಬನ ಕೈಗೆ ಒಪ್ಪಿಸಿದ. ಮ್ಯಾನ್‌ಸನ್ನನಿಗೆ ಅವುಗಳಿಂದಲೂ ಎಷ್ಟೋ ಸಂಗತಿಗಳು ತಿಳಿದು ಬಂದುವು. ಆ ಸಂಗತಿಗಳನ್ನು ತನ್ನ ಮೇಲಧಿಕಾರಿಯಾದ ಜೇಕಬ್ ಸಾಹೇಬನಿಗೂ ಒಡನೆಯೆ ತಿಳಿಸುವುದು ಅತ್ಯಗತ್ಯವೆಂದು ಅವನಿಗನ್ನಿಸಿತು. ಎಂತಲೇ ಆತ, ರಾಮದುರ್ಗದಿಂದಲೇ ಜೇಕಬ್ ಸಾಹೇಬನಿಗೆ ದೀರ್ಘವಾದ ಓಲೆಯೊಂದನ್ನು ಬರೆದು ಕಳಿಸಿದ.

“ನರಗುಂದದ ಭಾಸ್ಕರರಾಯ ನಮ್ಮ ವಿರುದ್ಧ ಬಂಡು ಹೂಡಲು ನಿರ್ಧರಿಸಿರುವುದೂ ನಿಜ, ಅದಕ್ಕಾಗಿ ಸಾಕಷ್ಟು ಸಿದ್ಧತೆಯನ್ನು ಮಾಡಿರುವುದೂ ನಿಜ. ಅವನು ಈಗ ಅತ್ಯಂತ ಉದ್ರಿಕ್ತ ಸ್ಥಿತಿಯಲ್ಲಿದ್ದು ನಮ್ಮ, ಎಂದರೆ ಇಂಗ್ಲೀಷರ ಮೇಲೆ ಯಾವ ಕ್ಷಣಕ್ಕಾದರೂ ಏರಿಬರಬಹುದಾಗಿದೆ. ಯುದ್ಧ ಹೂಡುವುದಕ್ಕೊಂದು ನೆವ ಬೇಕಾಗಿದೆ, ಅದನ್ನೀಗ ಆತ ಹುಡುಕುತ್ತಿದ್ದಾನೆ.

“ನರಗುಂದದ ಕೋಟೆಯ ವಿಚಾರವಾಗಿ ಹೇಳುವುದಾದರೆ ಅದು ಯುದ್ಧ ಮಾಡಲು ಅತ್ಯಂತ ಅನುಕೂಲವಾದ ಸ್ಥಳವಾಗಿದೆಯೆಂದೇ ಹೇಳಬೇಕಾಗುವುದು. ಅದು ಅತ್ಯಂತ ಗಟ್ಟಿಮುಟ್ಟಾಗಿದ್ದು ಅದರಲ್ಲಿದ್ದುಕೊಂಡು ಯುದ್ಧ ಮಾಡುವವರನ್ನು ಸೋಲಿಸುವುದು ಬಹಳ ಪ್ರಯಾಸದ ವಿಷಯವಾಗಿದೆ. ಈ ಕೋಟೆಯೇ ನರಗುಂದಕರನ ಮುಖ್ಯ ಶಕ್ತಿಯೆಂದು ಹೇಳಬಹುದು. ಇಂಥ ಕೋಟೆಯನ್ನು ಕೈವಶಪಡಿಸಿಕೊಳ್ಳಲು ಒಳ್ಳೆಯ ನುರಿತ ಸೈನ್ಯ ಅವಶ್ಯವಿದೆ. ಅಂಥ ಸೈನ್ಯವನ್ನೇ ನರಗುಂದಕ್ಕೆ ಕಳಿಸಿರಿ.”

“ಭಾಸ್ಕರರಾಯನು ರಾಮದುರ್ಗಕರನ ಅಣ್ಣನೆಂಬ ವಿಚಾರ ನಿಮಗೆ ಗೊತ್ತಿರಬಹುದು. ತನ್ನ ತಮ್ಮನೂ ಯುದ್ಧದಲ್ಲಿ ತನಗೆ ಸಹಾಯಮಾಡಬಹುದೆಂಬ ನಂಬುಗೆಯಿಂದ ಭಾಸ್ಕರರಾಯ ಅವನಿಗೆ ಅನೇಕ ಪತ್ರಗಳನ್ನು ಬರೆದಿದ್ದಾನೆ. ಆ ಪತ್ರಗಳ ಸಾರಾಂಶವನ್ನು ಇಲ್ಲಿ ಕೊಟ್ಟಿದ್ದೇನೆ. ಭಾಸ್ಕರರಾಯನು ಬರೆದಿರುವುದೇನೆಂದರೆ :

“ನಮ್ಮ ಮೇಲೆ ಈ ಪರದೇಶಿಯರು ನಡೆಸುವ ದಬ್ಬಾಳಿಕೆಗೆ ಮಿತಿಯಿಲ್ಲದಂತಾಯಿತು. ಇವರಿಂದಾಗಿ ನಮ್ಮ ವಂಶ, ನಮ್ಮ ಧರ್ಮ, ನಮ್ಮ ಕುಲ ಯಾವುದೂ ಉಳಿಯಲಾರದೆಂದೇ ಕಾಣುತ್ತದೆ. ನಮ್ಮ ಹಕ್ಕು ಬಾಧ್ಯತೆಗಳನ್ನು

ಗಮನಿಸದೆ ನಮ್ಮನ್ನು ಪೂರ್ಣವಾಗಿ ಪಾತಾಳಕ್ಕೊತ್ತಲು ಇವರು ಪ್ರಯತ್ನಿಸು ತ್ತಿದ್ದಾರೆ. ಇದನ್ನೆಲ್ಲ ನಾವು ನಾಚಿಕೆಗೇಡಿಗಳಂತೆ ಸಹಿಸಬೇಕೇ? ಅವರು ನಮ್ಮೊಡನೆ ಅತ್ಯಂತ ಉದ್ಧಟತನದಿಂದ ವರ್ತಿಸಿದರೂ, ಪದೇ ಪದೇ ನಮ್ಮನ್ನು ಅವಮಾನಗೊಳಿಸಿದರೂ ನಾವು ಹೇಡಿಗಳಂತೆ ಸುಮ್ಮನಿರಬೇಕೇ? ಹಾಗೆ ಸುಮ್ಮ ನಿರುವುದು ನಮ್ಮ ಸಂಸ್ಕೃತಿಗೆ ಭೂಷಣವೇ? ಶೂರರೂ ದೇಶಾಭಿಮಾನಿಗಳೂ ಧರ್ಮಾಭಿಮಾನಿಗಳೂ ಆದವರು ಇಂಥ ಅವಮಾನವನ್ನೆಂದಿಗೂ ಸಹಿಸಲಾರರು. ಈ ಪರದೇಶೀಯರಿಗೆ ಚೆನ್ನಾಗಿ ಬುದ್ಧಿ ಕಲಿಸುವ ಕಾಲವೀಗ ಬಂದಿದೆ. ನಾವಂತೂ ಈ ಬಗೆಗೆ ನಿರ್ಧಾರ ಮಾಡಿದ್ದೇವೆ. ನೀವೂ ವಿಚಾರ ಮಾಡಿರಿ. ನಿಮ್ಮಲ್ಲಿಯೂ ಶ್ರೇಷ್ಠ ಹಿಂದೂ ರಕ್ತ ಹರಿಯುತ್ತಿದ್ದರೆ ನೀವೂ ನಮ್ಮಂತೆಯೆ ನಿರ್ಧಾರಕ್ಕೆ ಬರುವಿರಿ. ಅನೇಕ ಸಂಸ್ಥಾನಿಕರು ನಮ್ಮ ನೆರವಿಗೆ ಬರಲು ನಿರ್ಧರಿಸಿ ದಂಡು ಕೂಡಿಸುತ್ತಿದ್ದಾರೆ. ಇನ್ನು ಕೆಲವೇ ದಿನಗಳಲ್ಲಿ ಅವರು ನಮ್ಮ ಸಹಾಯಕ್ಕೆ ಧಾವಿಸಿ ಬರುವರು. ನಾವು ಹಿಡಿದ ಕಾರ್ಯ ನೆರವೇರುವಲ್ಲಿ ಯಾವ ಸಂಶಯವೂ ಇಲ್ಲ. ನೀವು ನಿಮ್ಮ ಸೈನ್ಯದೊಡನೆ ಎಂದು ಬರುವಿರೆಂಬುದನ್ನು ಬೇಗನೆ ತಿಳಿಸಿರಿ."

"ಭಾಸ್ಕರರಾಯನು ಬರೆದ ಇಂಥ ಪತ್ರಗಳಿಗೆ ರಾಮದುರ್ಗಕರನು ಉತ್ತರವನ್ನೂ ಬರೆದಿಲ್ಲ. ಅವನು ಕಂಪನಿ ಸರಕಾರಕ್ಕೆ ವಿಧೇಯನಾಗಿದ್ದು ಬಂಡಾಯಗಾರರ ಬಗೆಗೆ ಅವನಿಗೆ ಸ್ವಲ್ಪವೂ ಸಹಾನುಭೂತಿಯಿಲ್ಲ. ಈ ಕಠಿಣ ಪ್ರಸಂಗದಲ್ಲಿ ನಮಗೆ ಸಹಾಯ ಸಲ್ಲಿಸಿ ನಮ್ಮಿಂದ ಬಹುಮಾನವಾಗಿ ಮತ್ತಷ್ಟು ಸೀಮೆಯನ್ನು ಪಡೆಯುವುದೇ ಅವನ ಆಶಯವಾಗಿದೆಯೆಂದು ತೋರುತ್ತದೆ."

"ನರಗುಂದದ ಕೆಲವು ಆಂತರಿಕ ರಹಸ್ಯಗಳನ್ನೂ ನಾನು ತಿಳಿದು ಕೊಂಡಿದ್ದೇನೆ. ಭಾಸ್ಕರರಾಯನು ನಡಸಿರುವುದು ಕೇವಲ ಬ್ರಾಹ್ಮಣರ ಬಂಡಾಯವೆಂದೂ, ಅದಕ್ಕೆ ಬ್ರಾಹ್ಮಣೇತರ ಪ್ರಜರ ಸಹಾನುಭೂತಿಯಾಗಲಿ ಬೆಂಬಲವಾಗಲಿ ಇಲ್ಲವೆಂದೂ ನನಗೆ ಖಚಿತವಾಗಿ ತಿಳಿದಿದೆ. ನಗರವನ್ನೇನೋ ನಾವು ಬಲು ಸುಲಭವಾಗಿ ವಶಪಡಿಸಿಕೊಳ್ಳಬಹುದು. ಕೋಟೆಯನ್ನು ವಶಪಡಿಸಿ ಕೊಳ್ಳುವುದೇ ಕಠಿಣವಾದ ಕೆಲಸ."

"ಈ ವಿಚಾರವನ್ನು ಮೊದಲೇ ಮನಗಂಡು, ಕೋಟೆಯಲ್ಲಿಯೆ ಪಿತೂರಿ ಯುಂಟುಮಾಡುವುದು ಜಾಣತನದ ಕ್ರಮವೆಂದು ಬಗೆದು, ನರಗುಂದಕರನ ಕಾರಭಾರಿಯಾದ ಕೃಷ್ಣಾಜಿಪಂತ ಜೋಶಿ, ಮತ್ತು ನರಗುಂದಕರನ ನಂಬುಗೆಯ

ಆಳು ಬನ್ಯಾಬಾಪು ಎಂಬ ಇಬ್ಬರನ್ನು ನಮ್ಮ ಕಡೆಗೆ ಒಡೆಮುಕೊಂಡಿದ್ದೆವು. ಅಲ್ಲಿನ ಗುಪ್ತ ಸುದ್ದಿ ತಿಳಿಸುವುದೂ, ಯುದ್ಧದ ಸಿದ್ಧತೆಗೆ ಕಲ್ಲು ಹಾಕುವುದೂ ಇವರ ಕಾರ್ಯ. ಯುದ್ಧ ಮುಗಿದ ತರುವಾಯ ಇವರಿಬ್ಬರಿಗೂ ದೊಡ್ಡ ದೊಡ್ಡ ಊರುಗಳನ್ನು ಜಹಗೀರು ಹಾಕಿಕೊಡುವುದಾಗಿ ಆಸೆ ತೋರಿಸಿದ್ದು, ಅವರೂ ಕೂಡಾ ತಮ್ಮ ಕಾಯಕವನ್ನು ದಕ್ಷವಾದ ರೀತಿಯಲ್ಲಿ ನೆರವೇರಿಸುತ್ತಿದಾರೆ. ಕೋಟೆಯಲ್ಲಿ ಸಂಗ್ರಹಿಸಲ್ಪಟ್ಟ ಮದ್ದಿನಲ್ಲಿ ಸಗಣಿಯನ್ನು ಬೆರಸಿ ಅದನ್ನು ನಿರುಪಯೋಗಿಯಾಗಿ ಮಾಡಿದ್ದೇವೆಂದೂ ಅವರು ನನಗೆ ತಿಳಿಸಿದ್ದಾರೆ....

"ಭಾಸ್ಕರರಾಯನಿಗೆ ಸಹಾಯಮಾಡಲಿರುವ ಸಂಸ್ಥಾನಿಕರೆಲ್ಲರೂ ಮುಂದಿನ ಗುರುವಾರದಂದು ಒಂದೇ ಕಡೆಗೆ ಕೂಡುವವರಿರುವರೆಂದು ಕೃಷ್ಣಾಜಿಪಂತನು ನನಗೆ ತಿಳಿಸಿದ್ದಾನೆ. ಅದಕ್ಕೆ ಮೊದಲೇ ನಾವು ಸೈನ್ಯದೊಂದಿಗೆ ಹೋಗಿ ನರಗುಂದಕ್ಕೆ ಮುತ್ತಿಗೆ ಹಾಕಿದರೆ ಒಳ್ಳೆಯದೆಂದು ಆತ ಸೂಚಿಸಿದ್ದಾನೆ. ಅದರಂತೆ ನಾವು ಗುರುವಾರದೊಳಗಾಗಿಯೆ ಹೋಗಿ ದಾಳಿ ಮಾಡುವುದು ಅವಶ್ಯವೆಂದು ನನಗೂ ಅನ್ನಿಸುತ್ತದೆ."

"ನರಗುಂದಕ್ಕೆ ಆಂಗ್ಲ ಸೈನಿಕರನ್ನೇ ಕಳಿಸಿರಿ. ದೇಶೀಯ ಸೈನಿಕರನ್ನು ಈ ಸಂದರ್ಭದಲ್ಲಿ ನಂಬುವುದು ಕಷ್ಟವೆಂದೇ ತೋರುತ್ತದೆ."

ಸಾವಿರಾರು ಜನ ಆಂಗ್ಲಸೈನಿಕರನ್ನು ಅಲ್ಪಾವಧಿಯಲ್ಲಿಯೇ ಒಟ್ಟುಗೂಡಿಸಿ ಕಳುಹಿಸುವುದೂ ಪ್ರಯಾಸದ ಕಾರ್ಯವಾಗಿತ್ತು. ಆಂಗ್ಲಸೈನಿಕರೆಲ್ಲರೂ ಒಂದೇ ಕೇಂದ್ರದಲ್ಲಿರದೆ ಅಲ್ಲಿ ಇಲ್ಲಿ ಹಂಚಿಹೋಗಿದ್ದರು. ಜೇಕಬ್ ಸಾಹೇಬನು ಅವರನ್ನು ಕರೆಸಿಕೊಂಡು ನರಗುಂದಕ್ಕೆ ಕಳಿಸುವ ವ್ಯವಸ್ಥೆ ಮಾಡಲು ಕಾಲಾವಕಾಶ ಅಗತ್ಯವಿತ್ತು. ಸೈನ್ಯ ಹೊರಡುವ ಸೂಚನೆ ಬರುವವರೆಗೂ ರಾಮದುರ್ಗದಲ್ಲಿಯೆ ಕುಳಿತುಕೊಳ್ಳುವುದೆಂದರೆ ಅನವಶ್ಯಕ ಕಾಲಹರಣವೆಂದೇ ಮ್ಯಾನ್‌ಸನ್ ಸಾಹೇಬನಿಗನ್ನಿಸಿತು. ಜೇಕಬ್ ಸಾಹೇಬನು ಈಗಾಗಲೇ ಸೈನ್ಯವನ್ನು ರವಾನಿಸಿರಬಹುದೆಂದೂ ತಾನು ಅದನ್ನು ನಡುದಾರಿಯಲ್ಲಿಯೆ ಕೂಡಿಕೊಳ್ಳ ಬೇಕೆಂದೂ ಯೋಚಿಸಿ ಮ್ಯಾನ್‌ಸನ್ ರಾಮದುರ್ಗದಿಂದ ಹೊರಡಲು ನಿರ್ಧರಿಸಿದ.

ಹರಿಹರರಾಯ ಮಾತ್ರ ಈ ಯೋಚನೆಯನ್ನು ಬಲವಾಗಿ ವಿರೋಧಿಸಿದ.

"ತಾವೀಗ ಇಲ್ಲಿಂದ ಹೊರಬೀಳುವುದು ಸರ್ವಥಾ ಕ್ಷೇಮಕರವಲ್ಲ. ತಮ್ಮೊಡನೆ ಹೆಚ್ಚು ಜನ ಸೈನಿಕರಿಲ್ಲ. ಭಾಸ್ಕರರಾಯ ಭಯಂಕರ ಮನುಷ್ಯ. ನಿಮ್ಮ ಜೀವಕ್ಕೇ ಅಪಾಯವೊದಗಬಹುದು."

"ಛೆ. ಆತ ಇಂಥ ಸಾಹಸಕ್ಕೆ ಕೈಹಾಕಲಿಕ್ಕಿಲ್ಲ. ನಮ್ಮ ಸೈನ್ಯವೂ ಬರುತ್ತಿದೆ ಯೆಂಬುದು ಅವನಿಗೂ ಗೊತ್ತಾಗಿರಲು ಸಾಕು. ಕೋಟೆಯನ್ನು ಬಿಟ್ಟು ಆತ ಹೊರಗೇ ಬರಲಿಕ್ಕಿಲ್ಲ," ಎಂದ ಮ್ಯಾನ್‌ಸನ್.

ತನ್ನ ಅಣ್ಣನ ಸ್ವಭಾವವನ್ನು ಚೆನ್ನಾಗಿ ಬಲ್ಲ ಹರಿಹರರಾಯ, ರಾಮದುರ್ಗ ದಿಂದ ಹೊರಡಬಾರದೆಂದು ಸಾಹೇಬನಿಗೆ ಪರಿಪರಿಯಾಗಿ ಹೇಳಿದರೂ ಪ್ರಯೋಜನ ವಾಗಲಿಲ್ಲ. ಆತ ಬೇಡವೆಂದು ಹೇಳಿದ ಹಾಗೆಲ್ಲ ಸಾಹೇಬನ ಹಟವೂ ಗಟ್ಟಿ ಯಾಯಿತು.

"ನಾವು ಇಂಗ್ಲೀಷರು ಪ್ರಾಣಕ್ಕೆಂದೂ ಹೆದರುವುದಿಲ್ಲ. ನಮ್ಮದೊಂದು ಕಿಸೆ ಯಲ್ಲಿ ಜೀವವಿದ್ದರೆ ಇನ್ನೊಂದು ಕಿಸೆಯಲ್ಲಿ ಮೃತ್ಯು ಇರುತ್ತದೆ. ಸಾವಿಗೆ ಹೆದರಿ ಸುಮ್ಮನೆ ಕೂಡ್ರುವುದು ನಮ್ಮ ಜನಾಂಗದ ಸ್ವಭಾವವಾಗಿದ್ದಲ್ಲಿ ನಿಮ್ಮ ಈ ವಿಶಾಲ ದೇಶವನ್ನು ಗೆಲ್ಲುವುದು ನಮ್ಮಿಂದಾಗುತ್ತಿತ್ತೇ? ನೀವೇನೂ ಚಿಂತಿಸ ಬೇಡಿರಿ," ಎಂದು ಹೇಳಿ ಹರಿಹರರಾಯನನ್ನು ಸಂತೈಸಿ ತನ್ನ ಆ ಹನ್ನೆರಡು ಜನ ರಾವುತರ ಪಡೆಯೊಡನೆ ನರಗುಂದದ ಹಾದಿ ಹಿಡಿದ ಮ್ಯಾನ್‌ಸನ್.

ರಾಮದುರ್ಗದಲ್ಲಿಯೂ ಇದ್ದ ನರಗುಂದಕರನ ಗೂಢಚಾರರು ಆ ವಾರ್ತೆ ಯನ್ನು ತಕ್ಷಣವೇ ನರಗುಂದಕ್ಕೆ ತಿಳಿಸುವ ವ್ಯವಸ್ಥೆ ಮಾಡಿದರು. ಅವನ ಸೈನಿಕರು ಊಟ ಮುಗಿಸಿ ಸಿದ್ಧವಾಗುವುದರೊಳಗಾಗಿ ಸಂಜೆಯಾಯಿತು. ಅಷ್ಟ ರಲ್ಲಿಯೆ ಇನ್ನೊಬ್ಬ ದೂತ ಬಂದು, ಮ್ಯಾನ್‌ಸನ್ ಸಾಹೇಬ ಸುರೇಬಾನದವರೆಗೆ ಬಂದ ವಾರ್ತೆಯನ್ನರುಹಿದ.

ವೆಂಕಟೇಶನ ದರ್ಶನಾಶೀರ್ವಾದ ಪಡೆದು, ವಿಜಯವಾಗಲೆಂದು ಬೇಡಿ ಕೊಂಡು, ತಾಯಿಯ ಪಾದಗಳಿಗೆರಗಿ ಆಕೆಯ ಹರಕೆಯನ್ನೂ ತಲೆಯಲ್ಲಿ ಹೊತ್ತು, ಪತ್ನಿಯಿಂದ ಆರತಿ ಬೆಳಗಿಸಿಕೊಂಡು ಭಾಸ್ಕರರಾಯ ಕುದುರೆಯೇರಿ ಸಿದ್ಧನಾದ. ವೀರಭದ್ರನ ಮೇಲೇರಿ ಕುಳಿತು ರಾಜಶೇಖರನೂ ದೊರೆಯ ಅಪ್ಪಣೆಯನ್ನಿದಿರು ನೋಡುತ್ತಿದ್ದ. ಉರಿಯುವ ದೀವಟಿಗೆ ಹಿಡಿದು ಮಾರ್ಗದರ್ಶಕರು ಮುಂದೆ ಸಾಗುತ್ತಲೂ ಅವರ ಹಿಂದಿನಿಂದ ಭಾಸ್ಕರರಾಯನ ಕುದುರೆ ಓಡತೊಡಗಿತು. ಅವನ ಎಡಕ್ಕೆ ವಿಷ್ಣುವೂ ಬಲಕ್ಕೆ ರಾಜಶೇಖರನೂ ಇದ್ದರು. ಜೀವಚ್ಛವದಂತೆ ಕುಳಿತಿದ್ದ ರಾಘೋಬನನ್ನು ಹೊತ್ತು ಅವನ ಕುದುರೆಯೂ ನಿರುತ್ಸಾಹದಿಂದ ಹಿಂದೆ ಹಿಂದೆ ನಡೆದು ಬರುತ್ತಿತ್ತು. ಅವನ ಹಿಂದೆ ಇತರ ಸೈನಿಕರಿದ್ದರು.

ಕೊಳ್ಳಿಯ ಒರಟು ಬೆಳಕಿನಲ್ಲಿ ಭಾಸ್ಕರರಾಯನ ಮುಖ ಮುದ್ರೆ ಅತ್ಯಂತ

ಕ್ರೂರವಾಗಿ ತೋರುತ್ತಿತ್ತು. ಅವನ ಪ್ರೀತಿಯ ಅಂಗರಕ್ಷಕ ವಿಷ್ಣುವೂ ಒಳ್ಳೆಯ ಆವೇಶದಲ್ಲಿದ್ದ. ರಾಜಶೇಖರನಿಗೂ ರಣೋತ್ಸಾಹವೇರಿತ್ತು. ರಾಘೋಬನ ಅವಸ್ಥೆ ಮಾತ್ರ ದಯನೀಯವಾಗಿತ್ತು.

ಅವರು ಸುರೇಬಾನವನ್ನು ಸಮೀಪಿಸಿದಾಗ ಎರಡು ತಾಸು ರಾತ್ರಿಯಾಗಿತ್ತು. ಹಳ್ಳಿಯ ಹೊರಭಾಗದಲ್ಲಿ ದಂಡಿನ ಪಾಳಯವಿದ್ದ ಚಿಹ್ನೆಗಳೇನೂ ಕಾಣುತ್ತಿರಲಿಲ್ಲ. ಎಲ್ಲೆಲ್ಲೂ ನೀರವತೆ ನೆಲಸಿತ್ತು. ಯಾವ ಬಗೆಯ ಸದ್ದೂ ಕೇಳಬರುತ್ತಿರಲಿಲ್ಲ.

ಕುದುರೆಯನ್ನು ನಿಲ್ಲಿಸಿ ಭಾಸ್ಕರರಾಯ ವಿಷ್ಣುವಿನ ಮುಖ ನೋಡಿದ. ವಿಷ್ಣು ರಾಜಶೇಖರನತ್ತ ದೃಷ್ಟಿ ತಿರುಗಿಸಿದ. ರಾಜಶೇಖರ ದೊರೆಯ ಕಡೆಗೆ ನೋಡಿದ.

“ಏನೂ ಸದ್ದಿಲ್ಲವಲ್ಲ? ನಾವು ಬರುವುದು ಗೊತ್ತಾಗಿ ಅವರು ಈ ಸ್ಥಳ ಬಿಟ್ಟು ಹೊರಟು ಹೋದರೋ ಏನೊ?” ಎಂದ ವಿಷ್ಣು.

“ಒಬ್ಬಿಬ್ಬರನ್ನು ಮುಂದೆ ಕಳಿಸಿ ಸುದ್ದಿ ತಿಳಿದುಕೊಂಡು ಬರಲು ಹೇಳು ವಿಷ್ಣು,” ಎಂದು ದೊರೆ ಆಜ್ಞಾಪಿಸಿದ.

ಅವರು ಹೋಗಿ ಸಮಾಚಾರ ತಿಳಿದುಕೊಂಡು ಬಂದರು. ಮ್ಯಾನ್‌ಸನ್ ಅಲ್ಲಿಯೆ ಇದ್ದ, ಅವನೊಡನೆ ದೊಡ್ಡ ದಂಡೂ ಇರಲಿಲ್ಲ, ಮೈಗಾವಲ ಪಡೆಯಿದ್ದಿತಷ್ಟೆ.

“ಅವರೆಷ್ಟು ಮಂದಿ ಇರಬಹುದು?” ಎಂದು ರಾಜಶೇಖರ ಪ್ರಶ್ನಿಸಿದ.

“ಹತ್ತಿಪ್ಪತ್ತು ಮಂದಿ ಇರಬಹುದು.”

“ಒಳ್ಳೆಯದೇ ಆಯ್ತು. ಕಡೆಗೂ ಆ ದುಷ್ಟ ನಮ್ಮ ಕೈಯಲ್ಲಿ ಸಿಕ್ಕ!” ಎಂದ ರಾಘೋಬ. ಅವನ ಕೈಕಾಲುಗಳಲ್ಲಿ ನಿಧಾನವಾಗಿ ಶಕ್ತಿ ಬಂದಿತ್ತು. ಮುಖದಲ್ಲಿಯೂ ರಕ್ತ ಸಂಚಾರವಾಗಿತ್ತು. ಅದುವರೆಗೂ ಅವನ ಸಮೀಪಕ್ಕೆ ಸುಳಿಯದಿದ್ದ ವೀರಶ್ರೀ ಈಗ ಅವನಲ್ಲಿಯೂ ಕಾಣಿಸಿಕೊಂಡಿತ್ತು!

ತನ್ನ ಕುದುರೆಯನ್ನು ಮುಂದೆ ತಂದು ರಾಘೋಬ ವೀರಾವೇಶ ನಟಿಸುತ್ತಾ ಹೇಳಿದ:

“ಆ ಕೆಂಪು ಮೋರೆಯ ಮಂಗನನ್ನು ಇವತ್ತು ಬಿಡುವುದೇ ಬೇಡ ಹುಜೂರ್. ಅವನನ್ನು ಕಡಿದು ಹದ್ದು ಕಾಗೆಗಳಿಗೆ ಊಟ ಹಾಕಿಸೋಣ.”

“ಹೌದು. ಹಾಗೇ ಮಾಡೋಣ,” ಎಂದ ವಿಷ್ಣು.

"ಅವನ ರುಂಡವನ್ನೊಯ್ದು ನರಗುಂದದ ಅಗಸೆಯ ಬಾಗಿಲಿಗೆ ಕಟ್ಟೋಣ," ಎಂದ ರಾಘೋಬ.

ಮ್ಯಾನ್‌ಸನ್ನನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಹಾತೊರೆಯುತ್ತಿದ್ದ ಭಾಸ್ಕರರಾಯನೂ ಅದೇ ರೀತಿ ನಿಶ್ಚಯಿಸಿದ.

ರಾಜಶೇಖರನಿಗೆ ಮಾತ್ರ ಇವರ ಮಾತುಗಳಾವುವೂ ಸರಿಬರಲಿಲ್ಲ. ಮ್ಯಾನ್‌ಸನ್ನನ ಜತೆಯಲ್ಲಿ ಸೈನ್ಯವಿಲ್ಲನೆಂದಾದರೆ ಆತ ಯುದ್ಧದ ಉದ್ದೇಶದಿಂದ ಇತ್ತ ಹೊರಟಿಲ್ಲವೆಂಬುದು ಸ್ಪಷ್ಟವಿತ್ತು. ಎಂಟು ನೂರು ಜನರು ಸೇರಿ ಹತ್ತು ಜನರ ಮೇಲೆ ಬೀಳುವುದು ಧರ್ಮಸಮ್ಮತ ಕೃತ್ಯವಾಗಲಾರದು. ಮ್ಯಾನ್‌ಸನ್ನನ ಬಗೆಗೆ ರೋಷದಿಂದಿರುವ ಭಾಸ್ಕರರಾಯ ಅವನನ್ನು ಕೊಂದುಬಿಡುವುದು ಖಚಿತವೆಂದೇ ರಾಜಶೇಖರನಿಗೆ ತೋರಿತು. ಆ ಘೋರ ಕೃತ್ಯವನ್ನು ತಡೆಯಲು ಏನನ್ನಾದರೂ ಮಾಡುವುದು ತನ್ನ ಕರ್ತವ್ಯವೆಂದೂ ಅವನಿಗನ್ನಿಸಿತು.

ಆದರೆ, ಆತ ಆ ಬಗೆಗೆ ಮಾತನಾಡುವುದರೊಳಗಾಗಿಯೆ ಭಾಸ್ಕರರಾಯ ತನ್ನ ಕುದುರೆಯನ್ನು ಮುಂದೆ ದೂಡಿದ್ದ. ನಾಲಗೆಯ ಮೇಲೆ ಬಂದಿದ್ದ ಮಾತನ್ನು ರಾಜಶೇಖರ ಅಲ್ಲಿಯೆ ತಡೆಹಿಡಿಯಬೇಕಾಯಿತು.

ರಾತ್ರಿಯನ್ನು ಸುರೇಬಾನದಲ್ಲಿಯೆ ಕಳೆದು ಬೆಳಗ್ಗೆ ಹೊರಡುವುದೆಂದು ನಿಶ್ಚಯಿಸಿ ಮ್ಯಾನ್‌ಸನ್ ತನ್ನ ಜನರೊಡನೆ ಒಂದು ಧರ್ಮಸಾಲೆಯಲ್ಲಿ ಬೀಡು ಬಿಟ್ಟಿದ್ದ. ಕುದುರೆಗಳನ್ನು ಧರ್ಮಸಾಲೆಯ ಅಂಗಳದಲ್ಲಿ ಕಟ್ಟಿ ಅವರು ನಿದ್ರಿಸಲು ಸಿದ್ಧರಾಗುತ್ತಿದ್ದಂತೆಯೆ ಭಾಸ್ಕರರಾಯ ತನ್ನ ಸೈನ್ಯದೊಡನೆ ಇತ್ತಕಡೆಗೇ ಬರುತ್ತಿದ್ದ ವಾರ್ತೆ ಬಂತು. ಅವನ ಜತೆಯಲ್ಲಿ ಏಳೆಂಟು ನೂರು ಜನ ಸೈನಿಕರಿದ್ದುದನ್ನು ತಿಳಿದಾಗ ಮ್ಯಾನ್‌ಸನ್ನನಿಗೆ ಗಾಬರಿಯಾಗದಿರಲಿಲ್ಲ, ರಾಮದುರ್ಗಕರನು ಬೇಡವೆಂದರೂ ಅವನ ಮಾತು ಕೇಳದೆ ಅಲ್ಪ ಪರಿವಾರದೊಡನೆ ತಾನು ಬಂದದ್ದು ಅವಿಚಾರದ ಕೃತ್ಯವಾಯಿತೆಂದೇ ಅವನಿಗೀಗ ಅನ್ನಿಸಿತು.

"ಹೀಗಾಗಬಹುದೆಂದು ನನಗೆ ಹೊಳೆಯಲಿಲ್ಲ. ಭಾಸ್ಕರರಾಯ ಇಂಥ ಸಾಹಸಕ್ಕೆ ಉದ್ಯುಕ್ತನಾಗಲಿಕ್ಕಿಲ್ಲವೆಂದೇ ನನಗನ್ನಿಸಿತ್ತು. ಅವನಂತೂ ಈಗ ನನ್ನನ್ನು ಬಿಡುವುದಿಲ್ಲವೆಂದೇ ಕಾಣುತ್ತದೆ. ಇನ್ನೇನು ಮಾಡುವುದು? ಈ ಕತ್ತಲಲ್ಲಿ ಇಲ್ಲಿಂದ ಓಡಿಹೋಗುವಂತೆಯೂ ಇಲ್ಲ. ಸರಿ. ಆದಷ್ಟು ಪ್ರಯತ್ನಪಟ್ಟು ಉಳಿದುಕೊಳ್ಳಲು ಉಪಾಯ ಮಾಡಬೇಕು," ಎಂದುಕೊಂಡು ಆತ ಅಡಗಿಕೊಳ್ಳಲು ಸುರಕ್ಷಿತವಾದ ಸ್ಥಳವನ್ನು ಶೋಧಿಸತೊಡಗಿದ. ಅವರು ಮಲಗಿ

ಕೊಂಡಿದ್ದುದು ಧರ್ಮಶಾಲೆಯಲ್ಲಿ. ಅದರ ಮುಂದಿನ ಭಾಗಕ್ಕೆ ಗೋಡೆಯೂ ಇರಲಿಲ್ಲ, ಬಾಗಿಲೂ ಇರಲಿಲ್ಲ.

ಧರ್ಮಸಾಲೆಯ ಪಕ್ಕದಲ್ಲಿಯೆ ಒಂದು ಹನುಮನ ಗುಡಿಯಿದ್ದುದು ತಿಳಿಯುತ್ತಲೂ ಮ್ಯಾನ್‌ಸನ್ನನಿಗೆ ಎಷ್ಟೋ ಸಮಾಧಾನವಾಯಿತು. ತನ್ನ ಬಳಿಯಿದ್ದ ಪಿಸ್ತೂಲಿನಲ್ಲಿ ಗುಂಡುಗಳನ್ನು ತುಂಬಿ ಆತ ಗುಡಿಯನ್ನು ಹೊಕ್ಕು ಒಳಗಿನಿಂದ ಬಾಗಿಲು ಇಕ್ಕಿಕೊಂಡು ಚಿಲಕ ಹಾಕಲೆಂದು ಕೈಯಾಡಿಸಿ ನೋಡಿದ.

ಎಷ್ಟು ಹುಡುಕಿದರೂ ಅವನ ಕೈಗೆ ಚಿಲಕ ನಿಲುಕಲಿಲ್ಲ. ವಾಸ್ತವವಾಗಿ ಅಲ್ಲಿ ಚಿಲಕವೇ ಇರಲಿಲ್ಲ. ಗುಡಿಯ ಒಳಬಾಗಿಲಿಗೆ ಚಿಲಕವಿರುವುದಿಲ್ಲವೆಂಬ ವಿಚಾರ ಆ ಸಾಹೇಬನಿಗೆ ಹೇಗೆ ಗೊತ್ತಾಗಬೇಕು ?

ಘಾತವಾಯಿತೆಂದು ಹೇಳಿಕೊಳ್ಳುತ್ತಾ ಆತ ಬಾಗಿಲಿಗೆ ಬೆನ್ನು ಕೊಟ್ಟು ಗಟ್ಟಿಯಾಗಿ ಆತು ಕುಳಿತುಕೊಂಡ.

## ೧೧

" ಸಾಹೇಬ ಎಲ್ಲಿದ್ದಾನೆ ?"

" ಸಾಹೇಬ ಕಹಾಂ ಹೈ ?"

ಮ್ಯಾನ್‌ಸನ್ನನ ಮೈಗಾವಲ ಪಡೆಯುವರನ್ನು ಹಿಡಿದು ಭಾಸ್ಕರರಾಯ ವಿಚಾರಿಸುತ್ತಿದ್ದ. ಯಾವ ಉತ್ತರವನ್ನೂ ಕೊಡದೆ ಅವರೆಲ್ಲರೂ ಮೂಕರಂತೆ ನಿಂತಿದ್ದರು.

" ಹೊಡೆಯಿರಿ ಇವರನ್ನು. ಒಬ್ಬೊಬ್ಬನನ್ನೇ ಕಡಿಯಿರಿ. ಆಗಲಾದರೂ ಹೇಳಬಹುದು."

ಭಾಸ್ಕರರಾಯನ ಸೈನಿಕರು ಮ್ಯಾನ್‌ಸನ್ನನ ಅಂಗರಕ್ಷಕರನ್ನು ತುಂಡರಿಸ ತೊಡಗಿದರು. ಎಂಟು ಹತ್ತು ಜನರ ಕೊಲೆಯಾದ ಮೇಲೂ ಅವರ ಜತೆಗಾರರು ಬಾಯಿ ಬಿಡಲಿಲ್ಲ. ಎಲ್ಲರನ್ನೂ ಕತ್ತಿಗಳಿಗೆ ಬಲಿಕೊಟ್ಟ ತರುವಾಯ ನರಗುಂದದ ಸೈನಿಕರು ಸಾಹೇಬನನ್ನು ಹುಡುಕಲು ಹೊರಟರು.

ಒಂದು ನಿಮಿಷದಲ್ಲಿಯೆ, ಹನುಮನ ಗುಡಿಯ ಬಾಗಿಲು ಒಳಗಿನಿಂದ ಮುಚ್ಚಿದೆಯೆಂಬ ಸುದ್ದಿ ಬಂತು. ಸಾಹೇಬನು ಅಲ್ಲಿಯೆ ಅಡಗಿ ಕುಳಿತಿರುವನೆಂದು ಹೊಳೆಯುತ್ತಲೂ ಎಲ್ಲರೂ ಅತ್ತ ಧಾವಿಸಿದರು.

“ಯಾರಿದ್ದೀರಿ ಒಳಗೆ ? ಬಾಗಿಲು ತೆಗೀರಿ,” ಎಂದ ರಾಘೋಬ.

ಅರ್ಥಾತ್ ಒಳಗಿನಿಂದ ಉತ್ತರ ಬರಲಿಲ್ಲ. ಭಾಸ್ಕರರಾಯನೂ ಅವನ ಪರಿವಾರದವರೂ ಗುಡಿಯ ಹೊರಗೆ ಬಂದುದು ಗೊತ್ತಾಗುತ್ತಲೂ ಮ್ಯಾನ್‌ಸನ್ ತನ್ನ ದೇಹದಲ್ಲಿನ ಶಕ್ತಿಯೆಲ್ಲವನ್ನೂ ಬೆನ್ನಿನಲ್ಲಿ ಒಟ್ಟುಗೂಡಿಸಿ ಧೈರ್ಯದಿಂದ ಕಾದು ಕುಳಿತ.

“ಏನು ಸಾಹೇಬರೆ, ಹೊರಗೆ ಬಂದು ಮುಖ ತೋರಿಸದೆ ಹೀಗೇಕೆ ಕುಳಿತಿದ್ದೀರಿ ಹೇಡಿಯಂತೆ ?” ಎಂದು ರಾಘೋಬ ಅಣಕವಾಡಿದ. ವಿಷ್ಣುವೂ ಇನ್ನಿತರರೂ ಬಾಗಿಲನ್ನು ನೂಕುತ್ತ ಅದನ್ನು ತೆರೆಯಲು ಯತ್ನಿಸುತ್ತಿದ್ದರು. ದೈತ್ಯನಂತೆ ಅಡ್ಡ ಕುಳಿತಿದ್ದ ಸಾಹೇಬನ ಶಕ್ತಿಯೆದುರು ಇವರ ಪ್ರಯತ್ನ ಸಫಲವಾಗಲಿಲ್ಲ.

“ಒಳ್ಳೆಯ ಮಾತಿಗೆ ಹೊರಗೆ ಬರುವಿಯೋ ಇಲ್ಲಾ ಬಾಗಿಲು ಮುರಿದು ನಿನ್ನ ಸಮಾಚಾರ ತೆಗೆದುಕೊಳ್ಳೋಣವೋ ?” ಎಂದು ವಿಷ್ಣು ಗದ್ದರಿಸಿದ.

ಆಗಲೂ ಸಾಹೇಬನಿಂದ ಉತ್ತರ ಬರಲಿಲ್ಲ.

“ಬಾಗಿಲು ಮುರಿಯಿರಿ,” ಎಂದು ದೊರೆಯ ಆಜ್ಞೆಯಾಯಿತು.

ವೀರಾವೇಶದಲ್ಲಿದ್ದ ವಿಷ್ಣು ನಾಲ್ಕೈದು ಬಾರಿ ಬಾಗಿಲನ್ನು ಬಲವಾಗಿ ಒದೆಯುತ್ತಲೂ ಅದು ಮುರಿದುಬಿತ್ತು. ಹಲಗೆಗಳು ಕಳಚಿ ಬೀಳುತ್ತಿದ್ದಂತೆಯೇ ಮ್ಯಾನ್‌ಸನ್ ಗೋಡೆಗೆ ಮರೆಯಾಗಿ ಕುಳಿತು ಪಿಸ್ತೂಲಿನ ಗುಂಡು ಹಾರಿಸ ತೊಡಗಿದ. ಬಾಗಿಲಿನ ಎದುರಿನಲ್ಲಿಯೆ ಇದ್ದ ಒಬ್ಬಿಬ್ಬರು ಸೈನಿಕರು ಉರುಳಿ ಬಿದ್ದರು. ಇನ್ನಿತರರು ದೂರ ಸರಿದು ಮರೆಗೆ ನಿಂತರು.

ಪಿಸ್ತೂಲಿನಲ್ಲಿನ ಗುಂಡುಗಳು ತೀರುತ್ತಲೂ ಸಾಹೇಬ ಮತ್ತೆ ಗುಂಡು ತುಂಬುತ್ತಿದ್ದ ಸಮಯ ಸಾಧಿಸಿ ವಿಷ್ಣು ಅವನ ಮೈಮೇಲೆ ಬಿದ್ದ. ಪಿಸ್ತೂಲು ಕಸಿದುಕೊಂಡು ದೂರ ಬಿಸುಟು ಸಾಹೇಬನನ್ನು ಹಿಡಿದು ಅಂಗಳಕ್ಕೆಳೆದು ತಂದ. ಇಬ್ಬರಿಗೂ ಮಲ್ಲಯುದ್ಧಕ್ಕಾರಂಭವಾಯಿತು. ಮ್ಯಾನ್‌ಸನ್ನನೂ ಯಾರಿಗೂ ಕಡಮೆಯವನಾಗಿರಲಿಲ್ಲ. ವಿಷ್ಣುವೂ ಮಲ್ಲಯುದ್ಧವನ್ನು ಚೆನ್ನಾಗಿ ಅರಿತವನು. ಅವರಿಬ್ಬರಿಗೂ ನಡೆದ ಯುದ್ಧ ಅತ್ಯಂತ ರೋಮಾಂಚಕಾರಿಯಾಗಿತ್ತು, ಪ್ರೇಕ್ಷಣೀಯವಾಗಿತ್ತು. ಭಾಸ್ಕರರಾಯನೂ ಅವನ ಅನುಯಾಯಿಗಳೂ ವಿಷ್ಣುವನ್ನು ಉತ್ತೇಜಿತಗೊಳಿಸುವ ಮಾತು ಆಡುತ್ತ ಸುತ್ತಲೂ ನಿಂತಿದ್ದರು.

ಮ್ಯಾನ್‌ಸನ್ನನಿಗೆ ಹುರುಪು ಕೊಡುವವರು ಮಾತ್ರ ಯಾರೂ ಇರಲಿಲ್ಲ. ಆದರೂ ಆತ ಅಳುಕದೆ ತನ್ನ ಶಕ್ತಿಮೀರಿ ಹೋರಾಡಿದ. ಆದರೆ, ಹೊಸ ಹರೆಯದ ವಿಷ್ಣುವಿನ ಎದುರು ಮಧ್ಯವಯಸ್ಸಿನ ಮ್ಯಾನ್‌ಸನ್ನನ ಆಟ ಹೆಚ್ಚು ಹೊತ್ತು ನಡೆಯುವಂತಿರಲಿಲ್ಲ. ಸಾಹೇಬನನ್ನು ಎರಡೂ ಕೈಗಳಲ್ಲೆತ್ತಿ ಹಿಡಿದು ದೊಪ್ಪನೆ ನೆಲಕ್ಕಪ್ಪಳಿಸಿ ವಿಷ್ಣು ಅವನ ಎದೆಯ ಮೇಲೆ ಕುಳಿತುಕೊಂಡ.

ಶಾಬ್ಬಾಸ್! ವಿಷ್ಣು! ಶಾಬ್ಬಾಸ್! ನರಗುಂದದವರ ಮಾನ ಕಾಯ್ದಿ!" ಎಂದು ಕೂಗಿದ ರಾಘೋಬ.

"ಶಾಬ್ಬಾಸ್! ಶಾಬ್ಬಾಸ್!" ಎಂದು ಭಾಸ್ಕರರಾಯನೂ ದನಿಗೂಡಿದ.

ಸಾಹೇಬನ ಎದೆಯ ಮೇಲೇರಿ ಕುಳಿತಿದ್ದ ವಿಷ್ಣು ಮತ್ತೆ ಮತ್ತೆ ಅವನನ್ನು ನೆಲಕ್ಕಪ್ಪಳಿಸುತ್ತ ನಿಂದಾವ್ಯಂಜಕ ಸ್ವರದಲ್ಲಿ ಮಾತನಾಡಿದ:

"ನಮ್ಮ ರಾಜಾಸಾಹೇಬರೆಂದರೆ ನಿನಗೆ ಕಿಮ್ಮತ್ತೇ ಇರಲಿಲ್ಲ, ಅಲ್ಲವೆ? ಅವರ ಮೇಲೆ ದ್ವೇಷ ಇಟ್ಟುಕೊಂಡು ದತ್ತಕಕ್ಕೆ ಕಲ್ಲು ಹಾಕಿದಿ. ಅದರ ಫಲವನ್ನೀಗ ಭೋಗಿಸು. ನಿನ್ನ ಮೃತ್ಯುವಂತೂ ಸಮೀಪಿಸಿತು. ಇಷ್ಟ ದೇವತೆಯನ್ನು ಪ್ರಾರ್ಥಿಸು."

ನೆಲದ ಮೇಲೆ ಬಿದ್ದುಕೊಂಡಿದ್ದ ಹಾಗೆಯೇ ಮ್ಯಾನ್‌ಸನ್ ಯೋಚಿಸಿದ. ಈ ಸಮಯದಲ್ಲಿ ಯಾವ ಉಪಾಯದಿಂದಾದರೂ ಜೀವ ಉಳಿಸಿಕೊಂಡು ಇಲ್ಲಿಂದ ಪಾರಾಗಿ ಹೋಗುವುದೇ ಶ್ರೇಯಸ್ಕರವೆಂದು ಅವನಿಗನ್ನಿಸಿತು. ಇಂಥ ಅಲ್ಪರ ಕೈಯಲ್ಲಿ ಸಿಕ್ಕು ಸಾಯುವುದರಲ್ಲಿ ಪುರುಷಾರ್ಥವಿಲ್ಲ. ಸಮರಭೂಮಿಯಲ್ಲಿ ಹೋರಾಡುವಾಗ ಸಾವು ಬಂದರೆ ಅದೊಂದು ರೀತಿಯಿಂದ ಒಳ್ಳೆಯದೇ. ಆದರೆ, ಇದು ಸಮರಭೂಮಿಯೂ ಅಲ್ಲ, ಇಲ್ಲಿ ನಡೆದಿರುವುದು ಯುದ್ಧವೂ ಅಲ್ಲ. ಹನ್ನೆರಡು ಜನರೊಡನೆ ಬಂದ ನನ್ನನ್ನು ಎಂಟು ನೂರು ಜನರೊಡನೆ ಬಂದ ಈ ಹೇಡಿಗಳು ಹಿಡಿದಿದ್ದಾರೆ. ತನ್ನನ್ನು ಕೊಲ್ಲುವುದೆಂದೇ ಇವರು ನಿಶ್ಚಯಿಸಿದಂತಿದೆ. ಆ ನಿಶ್ಚಯವನ್ನು ನಡೆಯಗೊಡಬಾರದು. ಹಾಗೆ ಯೋಚಿಸುತ್ತ ಮ್ಯಾನ್‌ಸನ್ ಕೇಳಿದ:

"ನನ್ನ ಮಾತು ಸ್ವಲ್ಪ ಕೇಳುತ್ತೀರಾ ಬಾಬಾಸಾಹೇಬ್?"

"ಬೊಗಳು," ಎಂದ ವಿಷ್ಣು.

"ಈಗ ನಡೆದಿರುವುದು ಧರ್ಮಯುದ್ಧ ಅಂತ ನಿಮಗಾದರೂ ಅನಿಸುವುದೇ ಬಾಬಾಸಾಹೇಬ್? ನಾನು ಒಬ್ಬ. ನೀವು ಇಷ್ಟು ಮಂದಿ...."

ಆ ಪ್ರಶ್ನೆಗೆ ಭಾಸ್ಕರರಾಯ ಉತ್ತರವೀಯುವಷ್ಟರಲ್ಲಿ ವಿಷ್ಣುವೇ ಹೇಳಿದ :

"ನಿನ್ನ ಮೇಲೆ ಇವರೆಲ್ಲಾ ಬಿದ್ದಿಲ್ಲವಲ್ಲ? ನೀನೂ ಒಬ್ಬ, ನಾನೂ ಒಬ್ಬ. ನಮ್ಮಿಬ್ಬರಲ್ಲೇ ಕುಸ್ತಿ ನಡೆದದ್ದು."

"ಬರೋಬರಿ. ಇದರಲ್ಲಿ ಅಧರ್ಮವೇನೂ ಇಲ್ಲ. ನಿಮ್ಮಿಬ್ಬರಿಗೂ ಕುಸ್ತಿ ನಡೆದು ವಿಷ್ಣು ಗೆದ್ದಿದ್ದಾನೆ, ನೀನು ಸೋತಿದ್ದೀ," ಎಂದ ಭಾಸ್ಕರರಾಯ.

"ನಿಮ್ಮ, ಹಿಂದೀಯರ ಮಲ್ಲಯುದ್ಧ ನಮಗೆ ತಿಳಿಯದು ಬಾಬಾ ಸಾಹೇಬ್. ಅದರಿಂದಾಗಿ ನಾನು ಸೋಲಬೇಕಾಯಿತು. ನಮಗೂ ಗೊತ್ತಿರುವ ಯುದ್ಧ ನಡೆದರೆ...."

ಅವನ ಮಾತನ್ನು ನಡುವೆಯೆ ತಡೆದು ವಿಷ್ಣುವೆಂದ :

"ನಿಮಗೆ ಗೊತ್ತಿರುವದೆಂದರೆ ಕೊಟ್ಟ ವಚನ ಮುರಿಯುವುದು, ಮೋಸ ಮಾಡುವುದು, ಏನಕೇನ ಪ್ರಕಾರೇಣ ರಾಜ್ಯಗಳನ್ನಪಹರಿಸುವುದು....ಅಲ್ಲವೆ?"

ವಿಷ್ಣುವಿನ ಧ್ವನಿಯಲ್ಲಿನ ವ್ಯಂಗ್ಯವನ್ನು ನಿರ್ಲಕ್ಷಿಸಿ ಮ್ಯಾನ್ಸನ್ನನೆಂದ :

"ನಾವು ಅಂಥದೇನನ್ನೂ ಮಾಡಿಲ್ಲ. ಕಾನೂನಿನ ಪ್ರಕಾರವೇ ನಾವು ವರ್ತಿಸಿದ್ದೇವೆ.

"ದತ್ತಕಕ್ಕೆ ಅಪ್ಪಣೆ ಕೊಡದೆ ನಮ್ಮ ರಾಜ್ಯಗಳನ್ನು ನುಂಗಿಬಿಡಬೇಕೆಂದು ನಿಮ್ಮ ಕಾನೂನು ಹೇಳುವುದೇನು?" ಎಂದ ಭಾಸ್ಕರರಾಯ.

"ದತ್ತಕಕ್ಕೆ ಅಪ್ಪಣೆ ಕೊಡಬಾರದೆಂದು ಗವರ್ನರ್ ಜನರಲ್ಲರು ನಿಯಮ ವಿಧಿಸಿದ್ದಾರೆ ಬಾಬಾಸಾಹೇಬ್. ನಾವು ಅಧಿಕಾರಿಗಳು. ಮೇಲಿನವರು ಹಾಕಿ ಕೊಟ್ಟ ನಿಯಮಗಳಂತೆ ನಡೆದುಕೊಳ್ಳುವುದು ನಮ್ಮ ಕರ್ತವ್ಯ. ನಾನೂ ಕೂಡಾ ನನ್ನ ಕರ್ತವ್ಯ ಮಾಡಿದ್ದೇನೆ, ಅಷ್ಟೆ. ಅದಕ್ಕಾಗಿ ನೀವು ನನ್ನ ಮೇಲೇಕೆ ಸಿಟ್ಟಾಗ ಬೇಕು?"

"ಈಗ ನೀನು ನಮ್ಮ ಕೈಯಲ್ಲಿ ಸಿಕ್ಕಿರುವಿಯಾದ್ದರಿಂದ ಹೀಗೆ ಬಣ್ಣದ ಮಾತು ಆಡುತ್ತಿರುವಿ. ನಿಜವಾಗಿ, ನಮಗೆ ದತ್ತಕಕ್ಕೆ ಅನುಮತಿ ಸಿಗದಿರಲು ನೀನೇ ಕಾರಣ. ಲಂಡನ್ನಿನಲ್ಲಿರುವ ನಿಮ್ಮ ಕೋರ್ಟಿನವರೂ ಅನುಮತಿ ಕೊಡ ಬಹುದೆಂದು ಹೇಳಿದ್ದರೂ ನೀನು-ರಾಕ್ಷಸ-ಒಪ್ಪಲಿಲ್ಲ. ಅಂದು, ನಾವು ನಿನಗೆ ನಿಷ್ಠುರವಾಗಿ ಮಾತಾಡಿದ್ದುದರ ಸೇಡು ತೀರಿಸಿಕೊಳ್ಳಲು ಇಂಥ ಕಾರಸ್ಥಾನ ಮಾಡಿದಿ," ಎಂದ ಭಾಸ್ಕರರಾಯ.

"ಮರಣಕ್ಕೆ ಸಿದ್ಧನಾಗು, ನಿಮ್ಮ ದೇವರನ್ನು ಪ್ರಾರ್ಥಿಸು!" ಎಂದ ವಿಷ್ಣು.

ಆಗ ಮಾತ್ರ ಪ್ಯಾನ್‌ಸನ್ ಗಾಬರಿಗೊಂಡ. ಇನ್ನು ಶರಣು ಹೋಗುವುದೇ ಅಂತಿಮ ಉಪಾಯವೆಂದು ಅವನಿಗನ್ನಿಸಿತು. ಹಿಂದೂ ಧರ್ಮೀಯರು ಶರಣಾಗತ ರಕ್ಷಕರೆಂಬ ವಿಚಾರ ಅವನಿಗೂ ತಿಳಿದಿತ್ತು. ಶರಣು ಬಂದವನು ಎಂಥ ಪರಮ ವೈರಿಯಾದರೂ ಹಿಂದೂಗಳು ಅವನನ್ನು ಕ್ಷಮಿಸಿ ಬಿಡುವರೆಂಬುದು ಅವನಿಗೆ ಗೊತ್ತಿತ್ತು.

"ಆ ವಿಷಯದ ಬಗ್ಗೆ ವಾದಮಾಡಲು ಇದು ಸರಿಯಾದ ಸಮಯವಲ್ಲ. ಆದ್ದರಿಂದ ನಾನು ನಿಮ್ಮನ್ನು ಬೇಡಿಕೊಳ್ಳುವುದೇನೆಂದರೆ—ಈಗ ಸದ್ಯ ನಿಮ್ಮ ಹೊರತು ನನಗೆ ಬೇರೆ ಯಾರೂ ಗತಿಯಿಲ್ಲ. ಕಾಯುವವರೂ ನೀವೇ. ಕೊಲ್ಲು ವವರೂ ನೀವೇ. ನನಗೂ ನಿಮಗೂ ಏನೇ ವೈರವಿದ್ದರೂ ಈಗ ಅದನ್ನು ಬದಿಗಿರಿಸಿ ನನ್ನ ಜೀವ ಉಳಿಸಬೇಕೆಂದು ಪ್ರಾರ್ಥಿಸುತ್ತೇನೆ. ಶರಣು ಬಂದಿದ್ದೇನೆ ಬಾಬಾ ಸಾಹೇಬ್. ನನ್ನನ್ನು ಕೊಲ್ಲಬೇಡಿರಿ."

ಕ್ರೋಧದಿಂದ ಮೈಮರೆತಿದ್ದ ಭಾಸ್ಕರರಾಯನಿಗೆ ಆಗ ಧರ್ಮಾಧರ್ಮಗಳ ಅರಿವಿರಲಿಲ್ಲ. ಅದುವರೆಗೂ ದೂರದಲ್ಲಿಯೆ ನಿಂತಿದ್ದ ಆತ ಈಗ ಪ್ಯಾನ್‌ಸನ್ನನ ಸಮೀಪಕ್ಕೆ ಬಂದು ತೀವ್ರ ಸ್ವರದಲ್ಲಿ ಹೇಳಿದ:

"ಸಾವು ಖಂಡಿತವೆಂಬುದು ತಿಳಿದಾಗ ಹಾವೂ ಕೂಡಾ ಶರಣು ಬಂದಂತೆ ನಟಿಸುತ್ತದೆ. ಅದರ ನಟನೆಗೆ ಮರುಳಾಗಿ ಅದನ್ನು ಹಾಗೆಯೆ ಬಿಡುತ್ತಾರೆಯೇ ಯಾರಾದರೂ? ನೀನು ನಮಗೆ ಮಾಡಿದ್ದನ್ನು ಯೋಚಿಸಿದರೆ ನಿನಗೆ ಇಂಥ ಸುಲಭವಾದ ಮರಣದಂಡನೆ ಯೋಗ್ಯವಲ್ಲವೆಂದೇ ಅನಿಸುತ್ತದೆ. ನಿನ್ನ ಒಂದೊಂದೇ ಅವಯವವನ್ನು ಕಡಿದು, ನೀನು ನರಳಿ ನರಳಿ ನವೆದು ನವೆದು ಸಾಯುವಂತೆ ಮಾಡಬೇಕೆನಿಸುತ್ತದೆ. ಆದರೂ, ನೀನು ಶರಣು ಬಂದಿರುವಿ ಯಾದುದರಿಂದ ನಿನಗೆ ಅಷ್ಟು ಯಾತನೆಯನ್ನುಂಟು ಮಾಡದೆ ಈಗಿಂದೀಗ ನಿನ್ನನ್ನು ಮುಕ್ತಗೊಳಿಸುವ ದೇಹಾಂತ ಶಿಕ್ಷೆಯನ್ನೆ ಕೊಡಿಸುತ್ತೇನೆ. ಯಮ ಲೋಕದ ಮಾರ್ಗ ಕ್ರಮಿಸಲು ಸಿದ್ಧನಾಗು."

ಹಿಂದೂಗಳಲ್ಲಿನ ಶ್ರೇಷ್ಠ ಜಾತಿಯವನಾದ ಭಾಸ್ಕರರಾಯ, ಶರಣು ಹೋದವನನ್ನು ಕೊಲ್ಲಲಿಕ್ಕಿಲ್ಲವೆಂದೇ ಭಾವಿಸಿದ್ದ ಸಾಹೇಬನಿಗೆ ನಿರಾಸೆಯಾಯಿತು, ಅವನ ಎದೆಗುಂಡಿಗೆ ತೀವ್ರವಾಗಿ ಬಡಿದುಕೊಳ್ಳತೊಡಗಿತು, ಗಂಟಲು ಒಣಗಿತು, ನಾಲಗೆ ಸತ್ತಂತಾಯಿತು ಆದರೂ, ಕಡೆಯ ಪ್ರಯತ್ನ ಮಾಡುವುದೆಂದು

ಕೊಂಡು, ಕೈಗಳೆರಡನ್ನೂ ಜೋಡಿಸಿ ಹಿಂದೂ ಪದ್ಧತಿಯಂತೆ ನಮಸ್ಕರಿಸುತ್ತ ಆತ ಬೇಡಿಕೊಂಡ :

"ಶರಣು ಬಂದವನನ್ನು ಬಿಟ್ಟರೆ ಪುಣ್ಯ ಬರುವುದು ಬಾಬಾ ಸಾಹೇಬ್. ನೀವು ಬ್ರಾಹ್ಮಣರು. ಶ್ರೇಷ್ಠ ಜಾತಿಯವರು....ದಯಮಾಡಿ ನನ್ನ ಜೀವವುಳಿಸಿರಿ."

ಆ ಸಮಯದ ತನಕವೂ ದೊರೆಯ ಹಿಂಬದಿಯಲ್ಲಿ, ಹಿನ್ನೆಲೆಯ ಅಂಧಕಾರ ದಲ್ಲಿಯೆ ನಿಂತು, ನಡೆಯುತ್ತಿದ್ದುದನ್ನೆಲ್ಲಾ ಮೌನವಾಗಿ ನಿರೀಕ್ಷಿಸುತ್ತಿದ್ದ ರಾಜ ಶೇಖರ ಆಗ ಹಠಾತ್ತನೆ ಮುಂದೆ ಬಂದು ದೊರೆಯನ್ನು ಕುರಿತು ಹೇಳಿದ:

"ಕ್ಷಮಿಸಬೇಕು ಸರಕಾರ್. ತಮ್ಮ ಮನಸಿನ ವಿರುದ್ಧ ಮಾತಾಡಲು ಇಚ್ಛೆಯಿರಲಿಲ್ಲ. ಆದರೂ ಈ ಸಮಯದಲ್ಲಿ ಸುಮ್ಮನಿರಲು ನನ್ನ ಅಂತರಾತ್ಮ ಒಪ್ಪಲಿಲ್ಲ. ಶರಣು ಬಂದವರನ್ನು ಕ್ಷಮಿಸಿ ಬಿಡುವುದು ವೀರೋಚಿತ ಧರ್ಮ, ರಾಜೋಚಿತ ಧರ್ಮ. ನಮ್ಮ ದೇಶ ಈ ಒಂದು ಉದಾತ್ತ ಗುಣಕ್ಕಾಗಿ ಪ್ರಪಂಚದಲ್ಲೆಲ್ಲಾ ಖ್ಯಾತಿ ಪಡೆದಿದೆ. ಆ ಖ್ಯಾತಿಗೆ ನಾವು ಕಲಂಕ ಹಚ್ಚ ಬಾರದು...."

ರಾಜಶೇಖರ ಹೀಗೆ ಆಕಸ್ಮಿಕವಾಗಿ ಮುಂದೆ ಬಂದು ತನಗೆ ಬುದ್ಧಿವಾದ ಮಾಡಬಹುದೆಂದು ಭಾಸ್ಕರರಾಯ ನಿರೀಕ್ಷಿಸಿರಲಿಲ್ಲ. ಅವನಿಗೆ ಆಶ್ಚರ್ಯ ವಾಯಿತು. ತನ್ನ ಪರಮಶತ್ರುವಿನ ಸಮಕ್ಷಮದಲ್ಲಿಯೆ ತನ್ನ ಸೇವಕನೊಬ್ಬ ತನಗೆ ಬುದ್ಧಿ ಹೇಳಲು ಬರುವುದು ಉದ್ಧಟತನವೆಂದೂ ಅವನಿಗನ್ನಿಸಿತು. ಕ್ರೋಧಿತನಾಗಿದ್ದ ಭಾಸ್ಕರರಾಯ ಧರ್ಮಸೂಕ್ಷ್ಮಗಳನ್ನು ಗಮನಿಸುವ ಸ್ಥಿತಿಯಲ್ಲಿರಲಿಲ್ಲ. ರಾಜಶೇಖರನನ್ನು ಕ್ರೂರವಾಗಿ ದಿಟ್ಟಿಸುತ್ತ ಭಾಸ್ಕರರಾಯ ನೆಂದ :

"ಅಪ್ಪಣೆಯಿಲ್ಲದೆ ಮಾತಾಡಲು ನಿನಗೆ ಯಾರು ಹೇಳಿದರು ? ಧರ್ಮಾ ಧರ್ಮ, ನ್ಯಾಯಾನ್ಯಾಯಗಳ ವಿಚಾರ ನನಗಿಂತ ಹೆಚ್ಚು ನಿನಗೆ ಗೊತ್ತಿದೆಯೆ ? ನಾಗರಹಾವು ಕೈಗೆ ಸಿಕ್ಕಾಗ ಅದನ್ನು ಕೊಲ್ಲದೆ ಬಿಟ್ಟರೆ ಅದು ಮತ್ತೆ ತಿರುಗಿ ನಮ್ಮನ್ನೇ ಕೊಲ್ಲದಿರುವುದೇ ? ಇದೂ ಒಂದು ಹಾವೇ ?"

ಹಾಗೆ ಹೇಳುತ್ತಲೇ ಭಾಸ್ಕರರಾಯ ಕತ್ತಿ ಹಿರಿದು ಮ್ಯಾನ್ಸನ್ನನ ಕುತ್ತಿಗೆಗೆ ಬೀಸಿದ. ಮುಂಡದಿಂದ ಪ್ರತ್ಯೇಕವಾದ ರುಂಡ ಥಟ್ಟನೆ ಸಿಡಿದು ಸುತ್ತಲೂ ನಿಂತವರ ಮೇಲೆ ಬಿಸಿನೆತ್ತರನ್ನು ಚಿಮ್ಮಿಸುತ್ತ ಹತ್ತು ಮೊಳ ದೂರ ಹಾರಿ ಬಿತ್ತು.

ಆಗ ಮಧ್ಯರಾತ್ರಿಯ ಸಮಯವಾಗಿತ್ತು. ಗಾಢಾಂಧಕಾರ ಕವಿದ ಇರುಳಲ್ಲಿ ಸೈನಿಕರು ಹಿಡಿದ ಪಂಜುಗಳು ಸುಡುಗಾಡಿನ ನೆನಪು ತಂದುಕೊಡುತ್ತಿದ್ದುವು. ಸಾಹೇಬನ ರುಂಡ ಹಾರುತ್ತಲೂ ಸೈನಿಕರು ಕೇಕೆ ಹಾಕುತ್ತಾ ಪಂಜುಗಳನ್ನು ಅತ್ತಿತ್ತ ಬೀಸುತ್ತಾ ಭಾಸ್ಕರರಾಯನ ಹೆಸರಿನಲ್ಲಿ ಜಯಜಯಕಾರ ಮಾಡಿದರು. ರಾಜಶೇಖರ ಮಾತ್ರ ಅಸಹನೀಯ ದುಃಖದಿಂದಲೂ ಲಜ್ಜೆಯಿಂದಲೂ ಕುಗ್ಗಿದವನಾಗಿ ತಲೆ ತಗ್ಗಿಸಿ ನಿಂತುಕೊಂಡಿದ್ದ. ಅಂಥ ಅಧರ್ಮ ಕೃತ್ಯ ನಡೆದಾಗ ಸುಮ್ಮನೆ ನೋಡುತ್ತ ನಿಲ್ಲುವ ದೌರ್ಭಾಗ್ಯ ತನ್ನದಾಯಿತಲ್ಲಾ ಎಂದು ಅವನಿಗೆ ತೀವ್ರವಾದ ವೇದನೆಯಾಗುತ್ತಿತ್ತು.

ಆತ ಹಾಗೆ ವ್ಯಸನಾಕ್ರಾಂತನಾಗಿ ನಿಂತಿದ್ದಂತೆಯೆ ರಾಘೋಬನ ಧ್ವನಿ ಕೇಳ ಬಂದಿತು.

“ನಾನು ತಮಗೆ ಹೇಳಿದ ಹಾಗೇ ಆಯಿತಲ್ಲ ಹುಜೂರ್? ಕಡೆಗೂ ಇವನ ನಿಜ ಸ್ವರೂಪ ಗೊತ್ತಾಯಿತು. ಮ್ಯಾನ್‌ಸನ್ನನಿಂದ ಇವನಿಗೆಷ್ಟು ಹಣ ಸಿಕ್ಕಿತ್ತೋ ಏನೊ.”

ತಾನು ಆಂಗ್ಲರ ಗೂಢಚಾರನೆಂಬರ್ಥದಲ್ಲಿ ರಾಘೋಬ ಮಾತನಾಡುತ್ತಿದ್ದುದರ ಅರಿವಾಗುತ್ತಲೂ ರಾಜಶೇಖರ ಧ್ವನಿಯೆತ್ತಿ ಹೇಳಿದ:

“ಮ್ಯಾನ್‌ಸನ್ ಸಾಹೇಬನ ಜೀವ ಉಳಿಸಲು ಯತ್ನಿಸಿದ ಮಾತ್ರಕ್ಕೇ ನಾನು ಅವನಿಂದ ಹಣ ತಿಂದೆನೆಂದು ಹೇಳುವುದು ಎಂಥ ಅನ್ಯಾಯವೆಂಬುದು ತಮಗೂ ತಿಳಿಯಬಹುದು ಹುಜೂರ್. ಶರಣು ಬಂದವರನ್ನು ಕೊಲ್ಲಬಾರದೆಂದಷ್ಟೆ ನಾನು ಹೇಳಿದ್ದು. ಇಂಗ್ರಜರ ವಿರುದ್ಧ ಯುದ್ಧವೇ ಬೇಡವೆಂದು ನಾನೇನು ಹೇಳಿಲ್ಲ. ನಮ್ಮ ತಾಯಿನಾಡಿಗೆ ದ್ರೋಹ ಬಗೆದು ಹಣದಾಸೆಗಾಗಿ ವೈರಿಗಳನ್ನು ಕೂಡಿಕೊಳ್ಳುವಂಥ ಹೇಸಿತನ ಈ ಜನ್ಮದಲ್ಲೇ ನನ್ನಿಂದಾಗದು.”

“ನೀನು ದ್ರೋಹಿಯಾಗಿರದಿದ್ದರೆ ನಿನ್ನಿಂದ ಅಂಥಾ ಮಾತೇ ಹೊರಡುತ್ತಿರಲಿಲ್ಲ,” ಎಂದು ರಾಘೋಬ ಪ್ರತಿಯಾಗಿ ಆಡಿದ.

“ರಾಜಧಾನಿಗೆ ಹೋದ ಮೇಲೆ ಆ ವಿಚಾರ ಚರ್ಚಿಸೋಣ. ಈಗ, ಸಾಹೇಬನ ಸಾಮಾನುಗಳನ್ನೆಲ್ಲಾ ಹುಡುಕಿ ತೆಗೆದುಕೊಂಡು ನಡೆಯಿರಿ,” ಎಂದು ಭಾಸ್ಕರರಾಯ ಅಪ್ಪಣೆ ಮಾಡಿದ.

ಧರ್ಮಸಾಲೆಯಲ್ಲಿ ಸಿಕ್ಕಿದ ಎಲ್ಲ ಸಾಮಾನುಗಳನ್ನೂ ಕುದುರೆಗಳ ಮೇಲೆ ಹೇರಿ, ಮ್ಯಾನ್‌ಸನ್ನನ ರುಂಡವನ್ನೂ ತೆಗೆದುಕೊಂಡು ಅವರು ಅದೇ ರಾತ್ರಿಯೆ

ನರಗುಂದಕ್ಕೆ ಹೊರಟನು. ಬೆಳಗಾಗುವುದರೊಳಗಾಗಿ ನಗರದ ಮುಖ್ಯ ಮಹಾ ದ್ವಾರದಮೇಲೆ ಮ್ಯಾನ್‌ಸನ್ನನ ರಕ್ತ ರಂಜಿತ ರುಂಡ **ನೇತಾಡತೊಡಗಿತು.**

ನರಗುಂದಕ್ಕೆ ಬಂದ ಬಳಿಕ, ಮ್ಯಾನ್‌ಸನ್ನನ ಸಾಮಾನುಗಳನ್ನು, ವಿಶೇಷ ವಾಗಿ ಪತ್ರಗಳನ್ನು ಪರೀಕ್ಷಿಸಿನೋಡುವ ಕಾರ್ಯ ತ್ವರೆಯಿಂದ ನಡೆಯಿತು. ಬನ್ನಾಬಾಪು ಮತ್ತು ಕೃಷ್ಣಾಜಿಪಂತರು ಪಿತೂರಿಯಾಗಿದ್ದುದೂ ಕೋಟೆಯಲ್ಲಿನ ಮದ್ದಿನ ಸಂಗ್ರಹದಲ್ಲಿ ಸಗಣಿಯನ್ನು ಬೆರಸಿ ಅವರು ಅದನ್ನು ಕೆಡಿಸಿದ್ದುದೂ ಗೊತ್ತಾಗಲು ಬಹಳ ಹೊತ್ತು ಬೇಕಾಗಲಿಲ್ಲ.

ತಾನು ಅತಿಯಾಗಿ ಪ್ರೀತಿಸುತ್ತಿದ್ದ ಬನ್ನಾಬಾಪುವೂ ತನ್ನ ಪೂರ್ಣ ನಂಬುಗೆಗೆ ಪಾತ್ರನಾಗಿದ್ದ ಕಾರಭಾರಿ ಕೃಷ್ಣಾಜಿಯೂ ಬಗೆದ ದ್ರೋಹದ ವಿಚಾರ ತಿಳಿಯುತ್ತಲೂ ಒಂದೆರಡು ಕ್ಷಣ ಭಾಸ್ಕರರಾಯ ದಿಙ್ಮೂಢನಂತೆ ಕುಳಿತಿದ್ದ. ಅಷ್ಟು ಆತ್ಮೀಯರಾಗಿದ್ದವರೇ ವಿಶ್ವಾಸಘಾತ ಮಾಡಿದರೆಂದ ಬಳಿಕ ಇನ್ನಿತರರನ್ನು ನಂಬುವುದಾದರೂ ಹೇಗೆ? ಎಂದು ಆತ ಚಿಂತಿಸತೊಡಗಿದ. ರಾಜಶೇಖರನ ನಿಷ್ಠೆಯ ಬಗೆಗೂ ಅವನ ಮನಸ್ಸಿನಲ್ಲಿ ಅನುಮಾನ ತಲೆಯೆತ್ತಿತು. ಅವನನ್ನು ಬಂಧನದಲ್ಲಿಟ್ಟು ವಿಚಾರ ನಡಸುವುದೇ ಸರಿಯಾದ ಉಪಾಯವೆಂದೂ ಭಾಸ್ಕರ ರಾಯನಿಗನ್ನಿಸಿತು.

ಬನ್ನಾಬಾಪು-ಕೃಷ್ಣಾಜಿಯರನ್ನು ಬಂಧಿಸಲು ಕೂಡಲೇ ಆಜ್ಞೆಯಾಯಿ ತಾದರೂ ಮುನ್ನಾದಿನವೇ ನಗರದಿಂದ ಹೊರಟುಹೋಗಿ ಸುರಕ್ಷಿತವಾದ ಸ್ಥಳ ಹಿಡಿದು ಕುಳಿತಿದ್ದ ಆ ದ್ರೋಹಿಗಳು ನರಗುಂದದಲ್ಲಿ ಸಿಕ್ಕುವಂತಿರಲಿಲ್ಲ.

"ಆ ಕೃತಘ್ನರನ್ನು ಜೀವಂತ ಹಿಡಿದು ತಂದವರಿಗೆ ಹತ್ತು ಸಾವಿರ ರೂಪಾಯಿಗಳ ಉತ್ಪನ್ನದ ಊರನ್ನು ಜಹಗೀರು ಹಾಕಿಕೊಡುತ್ತೇನೆ," ಎಂದು ಭಾಸ್ಕರರಾಯ ಡಂಗುರ ಹೊಯಿಸಿದ. ಅವರ ವಂಶಜರಲ್ಲಿ ಯಾರು ಸಿಕ್ಕಿದರೂ ಅವರನ್ನು ತುಂಡರಿಸಿಬಿಡಬೇಕೆಂಬ ಆಜ್ಞೆಯನ್ನೂ ಹೊರಡಿಸಿದ.

ಕೆಟ್ಟುಹೋದ ಮದ್ದಿನ ಬಗೆಗೆ ಶೋಕಿಸುತ್ತಾ ಕೈಕಟ್ಟಿಕೊಂಡು ಕುಳಿತು ಕೊಳ್ಳುವಂತಿರಲಿಲ್ಲ. ಮ್ಯಾನ್‌ಸನ್ನನ ವಧೆಯ ಸಮಾಚಾರ ತಿಳಿಯುತ್ತಲೂ ಆಂಗ್ಲರು ಸಿಟ್ಟಿನಿಂದ ಉರಿಯುತ್ತ ನರಗುಂದದತ್ತ ಧಾವಿಸಿ ಬರುವುದರಲ್ಲಿ ಸಂಶಯ ವಿರಲಿಲ್ಲ. ಅವರನ್ನೆದುರಿಸಲು ತಕ್ಷಣವೇ ಮದ್ದುಗುಂಡುಗಳ ಸಿದ್ಧತೆ ಮಾಡುವುದು ಅಗತ್ಯವಿತ್ತು.

"ಮದ್ದು ತಯಾರಾಗಲು ಎಷ್ಟು ದಿವಸವಾದೀತು ರಾಘೋಬ ?" ಎಂದು ತನ್ನ ಸೇನಾಪತಿಯನ್ನು ಕೇಳಿದ ಭಾಸ್ಕರರಾಯ.

"ಹತ್ತು ಹದಿನೈದು ದಿನವಾದರೂ ಬೇಕು ಹುಜೂರ್."

"ಅಷ್ಟು ತಡವಾದರೆ ಪ್ರಯೋಜನವಿಲ್ಲ. ಒಂದೆರಡು ದಿನಗಳಲ್ಲೇ ತಯಾರಾಗುವುದು ಅವಶ್ಯವಿದೆ. ಹೇಗಾದರೂ ಮಾಡಿ, ಹಗಲು ರಾತ್ರಿ ಕೆಲಸ ಸಾಗಿಸಿ ಮದ್ದು ತಯಾರಿಸುವ ವ್ಯವಸ್ಥೆ ಮಾಡಿರಿ."

"ಆಗಲಿ ಸರಕಾರ್," ಎಂದು ನುಡಿದು ರಾಘೋಬ ಮನೆಯ ಕಡೆ ಹೊರಟ. ಎರಡು ದಿನಗಳೊಳಗಾಗಿ ಮದ್ದು ತಯಾರಿಸುವುದಾದರೂ ಹೇಗೆ ಎಂಬುದೇ ಅವನಿಗೆ ತಿಳಿಯದಂತಾಯಿತು. ಮದ್ದು ಅಂದರೇನು ಲಾಡುವೆ ? ಶ್ರೀಖಂಡ ಪುರಿಯೆ ? ಹೋಳಿಗೆಯೆ ? ಇಷ್ಟು ಬೇಗ ಅದನ್ನು ತಯಾರು ಮಾಡುವುದಾದರೂ ಹೇಗೆ ಸಾಧ್ಯ ? ಸಾಧ್ಯವಾಗದೆಂದು ದೊರೆಗೆ ಹೇಳುವುದೂ ಕಷ್ಟ, ಹೇಳದಿದ್ದರೂ ಕಷ್ಟ. ಹಗಲು ರಾತ್ರಿ ಕೆಲಸ ಮಾಡಿಸಬೇಕೆಂದು ದೊರೆಯ ಅಪ್ಪಣೆಯೇನೊ ಆಯಿತು. ಆದರೆ, ಹಗಲೂ ರಾತ್ರಿ ತಾನು ಮದ್ದಿನ ಕಾರಖಾನೆಯಲ್ಲಿಯೆ ಕುಳಿತುಕೊಂಡರೆ ಇತ್ತ ತನ್ನ ಮಗಳ ವಿವಾಹದ ಸಿದ್ಧತೆ ಮಾಡುವವರಾರು ?

ತನ್ನ ಮನೆಯಲ್ಲಿ ನಡೆಯಬೇಕಿದ್ದ ಆ ವಿವಾಹದ ವಿಚಾರವನ್ನು ಭಾಸ್ಕರರಾಯನ ಕಿವಿಯ ಮೇಲೆ ಹಾಕದೆ ಸುಮ್ಮನಿದ್ದುದು ದೊಡ್ಡ ತಪ್ಪಾಯಿತೆಂದೇ ರಾಘೋಬನಿಗನ್ನಿಸಿತು. ಕಾರ್ಯದ ಮಹತ್ವವನ್ನು ಮನಗಂಡ ದೊರೆ, ಕೆಲ ದಿನಗಳವುಟ್ಟಿಗೆ ತನಗೆ ರಜವನ್ನೂ ಕೊಡಬಹುದಾಗಿದ್ದಿತೊ ಏನೊ.

ಆದರೆ, ಮರುಕ್ಷಣವೇ ತನ್ನ ಮಂದಬುದ್ಧಿಯನ್ನು ಹಳಿಯುತ್ತ ರಾಘೋಬನೆಂದುಕೊಂಡ : ನರಗುಂದದ ಮನೆ ಬಾಗಿಲಿಗೇ ಯುದ್ಧ ಬರುತ್ತಿರುವ ಸಮಯದಲ್ಲಿ, ಸೇನಾನಾಯಕನಾದ ತನಗೆ ರಜ ಸಿಕ್ಕುವುದು ಸಾಧ್ಯವಾದೀತೇ ? ಈ ವೇಳೆಯಲ್ಲಿ ಮದುವೆಯ ಮಾತೆತ್ತುವುದೂ ಹಾಸ್ಯಾಸ್ಪದವಾದೀತು. ಭಾಸ್ಕರರಾಯ ರೇಗಿ, ತನ್ನನ್ನು ಕಟೂಕ್ತಿಗಳಿಂದ ಖಂಡಿಸುವ ಸಂಭವವೂ ಉಂಟು. ಮದುವೆಯನ್ನು ಮುಂದುವರಿಸಿ ಯುದ್ಧದ ಸಿದ್ಧತೆಯಲ್ಲಿಯೆ ಸಮಯವನ್ನೆಲ್ಲ ವಿನಿಯೋಗಿಸುವಂತೆ ಆತ ಆಜ್ಞಾಪಿಸುವುದೂ ಖಂಡಿತ....

"ಅಂತೂ ಇಂತೂ ನನಗೆ ಮಾತ್ರ ಒಳ್ಳೆಯ ಸಂಕಟಕಾಲವೇ ಬಂತು,"

ಎಂದು ಮನಸ್ಸಿನಲ್ಲಿಯೆ ನರಳಿದ ರಾಘೋಬ. ಮದುವೆಯನ್ನು ಮುಂದೆ ಹಾಕುವ ಹಾಗೂ ಇಲ್ಲ, ಯುದ್ಧದಿಂದ ತಲೆ ತಪ್ಪಿಸಿಕೊಳ್ಳುವ ಹಾಗೂ ಇಲ್ಲ.

ಆತ ಮನೆಯ ಮಹಾದ್ವಾರದಲ್ಲಿ ಅಡಿಯಿರಿಸುತ್ತಿದ್ದಂತೆ ಒಳಗಿನಿಂದ, ತುಪ್ಪದಲ್ಲಿ ತಯಾರಾಗುತ್ತಿದ್ದ ತಿಂಡಿಯ ಘಮಘಮ ವಾಸನೆ ಬೀಸಿ ಬಂದಿತು. ಕ್ಷಣಕಾಲ ರಾಘೋಬನಿಗೆ ನರಗುಂದ, ಬಂಡಾಯ, ಮದ್ದು, ಯುದ್ಧ ಎಲ್ಲವೂ ಮರೆತುಹೋಯಿತು. ಬೇಗ ಬೇಗ ಸ್ನಾನ ಮುಗಿಸಿ, ಅದೇ ತಾನೆ ತಯಾರಾದ ಆ ಸವಿರಾಚೀನ ಪದಾರ್ಥದ ರುಚಿ ನೋಡಬೇಕೆಂದು ಅವನ ಮನಸ್ಸು ಹಾತೊರೆಯಿತು.

ತನ್ನ ಕೋಣೆಗೆ ಬಂದು ಆತ ಬಟ್ಟೆ ತೆಗೆಯುತ್ತಿದ್ದಂತೆಯೆ ಅವನ ಪತ್ನಿ ರಾಧಾಬಾಯಿ ಹೇಳಿದಳು :

“ನಿನ್ನೆ ತರಿಸಿದ ಬೆಣ್ಣೆ ಆಗಲೇ ಆಗಿಹೋಯಿತು. ಇನ್ನೂ ಎಷ್ಟೋ ಪದಾರ್ಥಗಳು ಆಗಬೇಕು. ಆಳು ಕಳಿಸಿ ಇನ್ನೂ ನಾಲ್ಕು ಹಂಡೆಗಳಷ್ಟು ಬೆಣ್ಣೆ ತರಿಸಿರಿ.”

“ಬರಽ! ಬರಽ!” (ಆಗಲಿ. ಆಗಲಿ.) ಎಂದ ರಾಘೋಬ. ಬೆಣ್ಣೆ ಸಂಗ್ರಹಿಸಿದಷ್ಟು ಸುಲಭವಾಗಿ ಮದ್ದನ್ನು ಸಂಗ್ರಹಿಸಲು ಶಕ್ಯವಿದ್ದಿದ್ದರೆಷ್ಟು ಚೆನ್ನಾಗುತ್ತಿತ್ತು!

ಅವನ ಸೌಭಾಗ್ಯವತಿಗೆ ಮಾತ್ರ ಮನೆಯ ಹೊರಗಿನ ಸಂಗತಿಗಳ ಅರಿವೇ ಇರಲಿಲ್ಲ. ಅವಳು ಮತ್ತೆ ಹೇಳಿದಳು :

“ನಿನ್ನೆ ಸಾಯಂಕಾಲ ಹೋದವರು ಈಗ ಬಂದಿರಿ ಮನೆಗೆ. ಮಗಳ ಮದುವೆ ಮಾಡುವುದಿದೆಯೆಂಬುದು ನಿಮ್ಮ ಧ್ಯಾನದಲ್ಲಿದ್ದ ಹಾಗೇ ಕಾಣುವುದಿಲ್ಲ!”

“ಪುರೇಗಽ! ಪುರೇ!” (ಸಾಕು–ಸಾಕು.) ಎನ್ನುತ್ತಾ ರಾಘೋಬ ಜನಿವಾರವನ್ನು ನೀವಿಕೊಳ್ಳುತ್ತ ಸ್ನಾನಕ್ಕೆ ನಡೆದ.

## ೧೨

ಕರ್ನಲ್ ಮ್ಯಾನ್‌ಸನ್ನನ ಕೊಲೆಯ ವಾರ್ತೆ ಕ್ಷಣಮಾತ್ರದಲ್ಲಿಯೆ ನರಗುಂದದಲ್ಲೆಲ್ಲ ಪ್ರಸರಿಸಿತು. ಅವನ ತಲೆಯನ್ನು ನೋಡಲೆಂದು ಸ್ತ್ರೀಪುರುಷ ಬಾಲಕರಾದಿಯಾಗಿ ಎಲ್ಲರೂ ಅಗಸೆಯ ಬಾಗಿಲಿನತ್ತ ಧಾವಿಸತೊಡಗಿದರು.

ಸಾಮಾನ್ಯವಾಗಿ ಅವರೆಲ್ಲರ ಮನಸ್ಸಿನಲ್ಲಿ ಭಯಮಿಶ್ರಿತ ಕುತೂಹಲ ತುಂಬಿ ಕೊಂಡಿತ್ತು. ಸಾಹೇಬನ ರಕ್ತರಂಜಿತ ರುಂಡದ ದರ್ಶನದಿಂದ ಸಂತೋಷಗೊಂಡ ವರು ಮಾತ್ರ ವಿರಳವೆ. ಇದೊಂದು ಅಶುಭಕಾರಕ ಘಟನೆಯೆಂದೇ ಬಹು ಜನರು ಭಾವಿಸಿದರು. ಕಂಪನಿ ಸರಕಾರದಲ್ಲಿ ಕರ್ನಲ್ ಮ್ಯಾನ್‌ಸನ್ ದೊಡ್ಡ ಅಧಿಕಾರಿ ಯಾಗಿದ್ದುದು ಅವರಲ್ಲನೇಕರಿಗೆ ಗೊತ್ತಿತ್ತು. ಅಂಥ ಅಧಿಕಾರಿಗಳ ಕೊಲೆ ನಡೆ ದಾಗ ಅವರ ಸೇಡು ತೀರಿಸಿಕೊಳ್ಳಲು ಆಂಗ್ಲರು ಊರೂರುಗಳನ್ನೆ ಹಾಳುಗೆಡಹಿದ ಉದಾಹರಣೆಗಳೂ ಅವರಿಗೆ ತಿಳಿದಿದ್ದುವು. ತಮ್ಮ ನರಗುಂದಕ್ಕೂ ಅಂಥ ವಿಪತ್ತು ಬರುವುದೆಂದು ಅವರಿಗೆ ಸ್ವಾಭಾವಿಕವಾಗಿಯೆ ವಿವಂಚನೆಯೆನಿಸಿತು.

ಸಾಹೇಬನ ತಲೆಯನ್ನು ನೋಡಿ ಬಂದ ಜನರು ಸುಮ್ಮನೆ ಕುಳಿತು ಕೊಳ್ಳದೆ ಬಗೆಬಗೆಯ ಸುದ್ದಿಗಳನ್ನು ಪಸರಿಸತೊಡಗಿದರು. ಸುರೇಬಾನಕ್ಕೆ ಹೋಗಿ ಬಂದ ಸೈನಿಕರೂ ಇಂಥ ವದಂತಿ ಹರಡಿಸುವುದರಲ್ಲಿ ಹಿಂದುಳಿಯಲಿಲ್ಲ. ಇಂಗ್ಲೀಷರ ದಂಡು ನರಗುಂದದ ಕಡೆಗೇ ಸಾಗಿ ಬರುತ್ತಿದೆಯೆಂದು ಸುದ್ದಿ ಹರಡಿತು. ಉಳ್ಳವ ರೆಲ್ಲರೂ ತಮ್ಮ ಸಂಪತ್ತನ್ನು ಅಡಗಿಸಿಡುವುದರಲ್ಲಿ ನಿರತರಾದರು. ಅನೇಕರು ಇದ್ದು ದೆಲ್ಲವನ್ನೂ ಕಟ್ಟಿಕೊಂಡು, ಇಂಗ್ಲೀಷರ ಸೈನ್ಯ ಬರುವ ಮೊದಲೇ ನಗರವನ್ನು ತ್ಯಜಿಸಿ ಹೊರಡುವ ಸಿದ್ಧತೆಗೆ ತೊಡಗಿದರು. ಅಲ್ಲಿಯೆ ನಿಂತುಕೊಂಡು ಇಂಗ್ಲೀಷರ ಸೈನ್ಯವನ್ನೆದುರಿಸಿ ಹೋರಾಡಬೇಕೆಂಬ ಉತ್ಸಾಹ ಯಾರಿಗೂ ಇರಲಿಲ್ಲ. ಅಂಥ ಉತ್ಸಾಹವನ್ನು ಆ ಜನರಲ್ಲಿ ತುಂಬುವ ಪ್ರಯತ್ನಗಳು ನಡೆದಿರಲಿಲ್ಲ. ರಾಜನಿಗೂ ಪ್ರಜರಿಗೂ ಮಧುರಬಾಂಧವ್ಯವೇ ಇಲ್ಲದಿದ್ದಾಗ ಆ ರಾಜನಿಗಾಗಿ ತಮ್ಮ ವಿತ್ತ ಜೀವಿತಗಳನ್ನು ಸಂಕಟದಲ್ಲಿ ಸಿಲುಕಿಸುವ ವಿಚಾರ ಪ್ರಜೆಗಳಿಗೆ ಬರುವುದಾದರೂ ಹೇಗೆ? ಎಂತಲೇ, ನರಗುಂದದ ಮೇಲೆ ದಾಳಿಯಾಗುವುದು ಗೊತ್ತಾಗುತ್ತಲೂ ಅಲ್ಲಿನ ಬಹುಸಂಖ್ಯ ಜನರು ತಮ್ಮ ಸುರಕ್ಷಿತತೆಯ ಬಗೆಗೇ ಯೋಚಿಸತೊಡಗಿದರು.

ಕೃಷ್ಣಾಜಿಪಂತನೂ ಬನ್ಯಾಬಾಪುವೂ ಇಂಗ್ಲೀಷರ ಕಡೆಗೆ ಒಡೆದು ಕೋಟೆ ಯಲ್ಲಿನ ಮದ್ದಿನ ಸಂಗ್ರಹವನ್ನು ನಷ್ಟಗೊಳಿಸಿದ ವಾರ್ತೆ ಹರಡಿದಾಗ ಪ್ರಜೆಗಳಿಗೆ ಇನ್ನಷ್ಟೂ ಗಾಬರಿಯಾಯಿತು. ಕೆಂಚಣ್ಣನಂಥ ಹಲವರಿಗೆ ಮಾತ್ರ, ಆ ಸಮಾಚಾರ ದಿಂದಲೂ ಕೊಂಚ ಸಂತೋಷವುಂಟಾಗದಿರಲಿಲ್ಲ.

ಗುರುಶಾಂತಪ್ಪನೊಡನೆ ಆ ವಿಚಾರವಾಗಿ ಚರ್ಚಿಸುತ್ತ ಕೆಂಚಣ್ಣನೆಂದ:

“ಈ ಮುಂದಿಗೆ ಹೀಗೇ ಆಗಬೇಕು. ತಮ್ಮ ಜಾತಿಯವರನ್ನಲ್ಲದೆ ಬೇರೆ ಯಾರನ್ನೂ ನಂಬದಿದ್ದ ಅವರಿಗೆ ಈಗಲಾದರೂ ಬುದ್ಧಿ ಬಂದೀತು. ಮರಾಠಿಗರಿಗೆ

ಮರಾಠಿಗಳೇ ಕೈಕೊಟ್ಟು ಚಲೋ ಮಾಡಿದರು. ಏನು ಹಿರಿಯಾ, ನೀನೇನು ಅನ್ನುತ್ತೀ?"

"ರಾಜಾಸಾಹೇಬರಿಗೆ ಬುದ್ಧಿಯೇನೋ ಬಂದಿರಬಹುದು. ಆದರೂ, ಈ ಮನೆಮುರುಕತನದಿಂದ ನೀನೇಕೆ ಸಂತೋಷಪಡಬೇಕು ಕೆಂಚಣ್ಣಾ?"

"ಅವರು ದ್ರೋಹ ಮಾಡಿದ್ದನ್ನು ನಾನೇನು ಮೆಚ್ಚುವುದಿಲ್ಲ. ಆದರೂ, ಕೇಡುಕಿನಿಂದಲೂ ಒಂದೊಂದು ಸಮಯದಲ್ಲಿ ಒಳ್ಳೆಯ ಪರಿಣಾಮವಾಗುವುದುಂಟು. ಕೃಷ್ಣಾಜಿಯೂ ಬನ್ಯಾಬಾಪುವೂ ಈ ದೃಷ್ಟಿಯಿಂದ ಒಳ್ಳೆಯದೇ ಮಾಡಿದರೆನ್ನಬೇಕು."

ಅವರ ಚರ್ಚೆ ನಡೆದಿದ್ದಂತೆಯೆ ಹೊರಗಡೆ ಖುರಪುಟಗಳ ಸದ್ದಾಯಿತು. ಅವರು ಬಾಗಿಲಿನ ಕಡೆಗೆ ಹೊರಳುತ್ತಿದ್ದ ಹಾಗೇ ರಾಜಶೇಖರ ಅವಸರದಿಂದ ಪ್ರವೇಶಿಸಿದ.

"ಇಷ್ಟೊತ್ತು ಯಾಕಪ್ಪಾ ರಾಜಣ್ಣಾ?"

"ಬಂದು ಬಹಳ ಹೊತ್ತಾಯಿತಪ್ಪಾ. ದೊರೆಗಳ ಅಪ್ಪಣೆ ಪಡೆದು ಬರಬೇಕಾದರೆ ತಡವಾಯಿತು."

ಕೈಕಾಲುಮುಖ ತೊಳೆದುಕೊಂಡು ಬಂದು ಕೆಂಚಣ್ಣನ ಹತ್ತಿರ ಕುಳಿತುಕೊಳ್ಳುತ್ತ ರಾಜಶೇಖರನೆಂದ:

"ಸಾಹೇಬನ ಕೊಲೆಯ ಸುದ್ದಿ ಕೇಳಿದಿಯಾ ಕೆಂಚಣ್ಣಾ?"

"ಕೇಳಿದೆ. ನೀನೇ ಮಾಡಿದಿಯೋ ಏನು ಆ ಶೂರ ಕೆಲಸ?" ಕೆಂಚಣ್ಣ ಅಣಕದ ಧ್ವನಿಯಲ್ಲಿ ಕೇಳಿದ.

"ಅದರಲ್ಲೇನು ಅಂಥ ಶೂರತನವಿದ್ದದ್ದು? ನಾನು ಬೇಡ ಬೇಡ ಅಂದರೂ ಕೇಳದೆ ರಾಜಾಸಾಹೇಬರು...."

"....ಮತ್ತು ಅವರ ಪ್ರೀತಿಯ ವಿಷ್ಣು ಇಬ್ಬರೂ ಸೇರಿ ಕೊಲೆ ಮಾಡಿದರು. ಅದೂ ನನಗೆ ಗೊತ್ತಾಗಿದೆ ರಾಜಣ್ಣಾ. ಅಲ್ಲದೆ ಇನ್ನೊಂದು ಸುದ್ದಿಯೂ...."

"ನನ್ನ ಬಗ್ಗೆಯೇ?"

"ಹೌದು. ನಿನ್ನ ಬಗ್ಗೆಯೇ. ನೀನು ಇಂಗ್ಲೀಷರ ಕಡೆಗೆ ಸಿತೂರಿಯಾಗಿರಬಹುದು ಅಂತ ರಾಘೋಬ ಅಂದನಲ್ಲ?"

"ಹೌದು. ಅವನಿಗೂ ನನಗೂ ಇರುವ ಸಂಬಂಧ ಎಂಥಾದ್ದು ಅನ್ನುವದು ನಿನಗೂ ಗೊತ್ತಿದೆಯಲ್ಲ?"

"ಶಾಘೋಬನ ಮಾತನ್ನು ಈ ಬಾರಿ ರಾಜಾಸಾಹೇಬರೂ ನಂಬಿರ ಬಹುದಲ್ಲ ?"

"ಅವರೂ ನಂಬುವ ಹಾಗೇ ಅಲ್ಲಿ ನಾನು ಮಾತಾಡಿದೆ. ಶರಣು ಬಂದ ಸಾಹೇಬನನ್ನು ನಾನು ಉಳಿಸಿಕೊಳ್ಳಲು ಯತ್ನಿಸಿದ್ದನ್ನು ಅವರು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ," ಎಂದು ಹೇಳಿ ರಾಜಶೇಖರ, ರಾತ್ರೆ ಸುರೇಬಾನದಲ್ಲಿ ನಡೆದಿದ್ದುದೆಲ್ಲವನ್ನೂ ವಿಶದವಾಗಿ ತಿಳಿಸಿದ.

"ಹೀಗೇನಾದರೂ ಆದೀತೆಂದು ನನಗೆ ಮೊದಲೇ ಅನಿಸಿತ್ತು. ಅದಕ್ಕೇ ಈ ಜನರ ಸಹವಾಸವೇ ಬೇಡ ಅಂತ ನಿನಗೆ ಹೇಳಿಯೆ ಹೇಳಿದೆ. ನನ್ನ ಮಾತು ಕೇಳಿ ಸುಮ್ಮನಿದ್ದರೆ ಇಂಥ ಪ್ರಸಂಗವೆಲ್ಲಿ ಬರುತ್ತಿತ್ತು ?"

"ಇಂಥ ಪ್ರಸಂಗ ಬಂತಲ್ಲಾ ಅಂತ ನನಗೇನು ವ್ಯಸನವಿಲ್ಲ ಕೆಂಚಣ್ಣಾ," ಎಂದು ಗಂಭೀರವಾಗಿಯೆ ನುಡಿದ ರಾಜಶೇಖರ.

"ಇಲ್ಲವೆಂದಿಯಾ ? ಇನ್ನೂ ಬುದ್ಧಿ ಬರಲಿಲ್ಲವೆಂದಿಯಾ ನಿನಗೆ ?"

"ತಪ್ಪು ಮಾಡಿದ್ದರೆ ತಾನೆ ಬುದ್ಧಿ ಬರುವುದು ?"

"ಅಂದರೆ ! ನೀನು ಮಾಡಿದ್ದು, ಮಾಡುತ್ತಿರುವುದು ಸರಿಯಾದದ್ದು ಅಂತ ಈಗಲೂ ಅನ್ನುತ್ತೀಯಾ ?"

"ಹೌದು. ಈಗಲೂ ಅನ್ನುತ್ತೇನೆ. ಅಷ್ಟು ಮಾತ್ರವಲ್ಲ, ನಾನು ನರಗುಂದದ ಸೈನ್ಯದಲ್ಲಿ ಸೇರಿದ ಉದ್ದೇಶ ಸಾಧಿಸುವವರೆಗೂ ಹೋರಾಡುತ್ತೇನೆ."

"ಸರಿಯಪ್ಪ! ನಿನ್ನಂಥ ಹಟವಾದಿಗಳಿಗೆ ಬುದ್ಧಿ ಹೇಳುವವರೇ ಮೂರ್ಖರು!"

"ನಿನ್ನ ಮೇಲೆ ಅವರಿಗೆ ನಂಬಿಕೆಯಿಲ್ಲದಿದ್ದಾಗಲೂ ಅವರಿಗಾಗಿ ನೀನ್ಯಾಕೆ ಜೀವ ತೇಯಬೇಕು ರಾಜಣ್ಣಾ ?" ಎಂದು ಗುರುಶಾಂತಪ್ಪನೂ ವಾದಿಸಿದ.

"ನಿಜವಾಗಿ ನಾನು ಹೋರಾಡುತ್ತಿರುವುದು ರಾಜಾಸಾಹೇಬರಿಗಾಗಿಯಲ್ಲ ಅಪ್ಪಾ. ಒಂದು ಉದ್ದೇಶಕ್ಕಾಗಿ ಮಾತ್ರ ನನ್ನ ಹೋರಾಟವಿದೆ."

"ಇಂಥ ಸೂಕ್ಷ್ಮಗಳು ನಮಗೆ ಅರ್ಥವಾಗುವುದಿಲ್ಲ ರಾಜಣ್ಣಾ. ನಾವು ಹುಂಬ ಮಂದಿ. ನಿನ್ನಂಥ ಪಂಡಿತನಿಗೆ ನಾನೇನು ಬುದ್ಧಿ ಹೇಳುವುದು !" ಎಂದು ವ್ಯಂಗ್ಯವಾಗಿ ನುಡಿದು ಕೆಂಚಣ್ಣ ಸುಮ್ಮನಾದ.

ಕೆಲಹೊತ್ತು ಯಾರೂ ಮಾತನಾಡಲಿಲ್ಲ. ಹಸಿದು ಬಂದಿದ್ದ ಮಗನಿಗಾಗಿ ಅಡುಗೆಯನ್ನು ತಯಾರಿಸಲೆಂದು ಗುರುಶಾಂತಪ್ಪ ಎದ್ದು ಹೋದ. ಕೆಂಚಣ್ಣನೂ

ಎದ್ದು ತನ್ನ ಮನೆಗೆ ಹೊರಟು ನಿಂತಿದ್ದಂತೆಯೆ ಬಾಗಿಲಲ್ಲಿ ಸೈನಿಕನೊಬ್ಬನ ಮುಖ ಕಾಣಿಸಿಕೊಂಡಿತು. ಒಡನೆಯೆ ರಾಜಶೇಖರ ಅತ್ತ ತಿರುಗಿ,

"ಏನಪ್ಪಾ, ಏನು ಬಂದೆ?" ಎಂದು ವಿಚಾರಿಸಿದ.

ಆ ಸೈನಿಕ ಕೂಡಲೇ ಮಾತನಾಡಲಿಲ್ಲ. ಯಾವುದೋ ಸಂಕೋಚ ಅವನ ನಾಲಗೆಯನ್ನು ಬಿಗಿಹಿಡಿದಿದ್ದಂತೆ ತೋರುತ್ತಿತ್ತು. ಅವನ ಮುಖದಲ್ಲಿ ಬೇಸರ ವಿತ್ತು, ಲಜ್ಜೆಯಿತ್ತು. ಕೊಂಚ ಕ್ರೋಧವೂ ಇತ್ತು.

"ಏನಪ್ಪಾ, ಏನಾಯಿತು? ರಾಜಾಸಾಹೇಬರೇನಾದರೂ ಹೇಳಿಕಳಿಸಿರು ವರೇ?" ಎಂದು ರಾಜಶೇಖರನೇ ಮತ್ತೆ ಕೇಳಿದ.

ಬಲಗೈಯಲ್ಲಿ ಹಿಡಿದಿದ್ದ ಹಿರಿದ ಕತ್ತಿಯನ್ನು ಉದ್ವೇಗದಿಂದ ನೆಲಕ್ಕೆಸೆದು ಆ ಸೈನಿಕ ಬಾಗಿಲಲ್ಲಿಯೆ ಕುಸಿದು ಕುಳಿತ, ಎರಡೂ ಕೈಗಳಲ್ಲಿ ತಲೆ ಹಿಡಿದು ಕೊಂಡು ತಡೆತಡೆಯುತ್ತ ಹೇಳಿದ:

"ಸಾಕಾಯಿತು ದಳವಾಯಣ್ಣಾ ಈ ಆರೇ ಮಂದಿಯ ಚಾಕರಿ. ನಾನಿನ್ನು ಮ್ಯಾಲ ಇವರ ಮಾತೂ ಕೇಳುವದಿಲ್ಲ, ಇವರಿಗಾಗಿ ಲಢಾಯಿ ಮಾಡುವದಕ್ಕೂ ಹೋಗುವದಿಲ್ಲ."

"ಏನಾಯಿತು ಹೇಳಪ್ಪಾ."

"ಏನು ಹೇಳಲಿ ದಳವಾಯಣ್ಣಾ, ಹ್ಯಾಗೆ ಹೇಳಲಿ. ನಿನ್ನಂಥಾ ಶೂರನ ಮನೆಯ ಮುಂದೆ ಪಹರೆ ಮಾಡು ಅಂತ ಹುಕುಂ ಕೊಟ್ಟರೆ ಅದರಂತೆ ನಾನು ಮಾಡುವದಾದರೂ ಹ್ಯಾಗೆ ಹೇಳು."

ಆಗ ಮಾತ್ರ ರಾಜಶೇಖರನಿಗೆ ಎಲ್ಲವೂ ಅರ್ಥವಾಯಿತು. ರಾಜಾಸಾಹೇಬ ವಿಧಿಸಿದ್ದ ಆಜ್ಞೆಯೇನೆಂಬುದು ಕೆಂಚಣ್ಣನಿಗೂ ತಿಳಿಯಿತು. ಆತ ಕಟುವಾಗಿ ನಗುತ್ತಾ ರಾಜಶೇಖರನ ಕಡೆ ನೋಡಿದ.

ಕೆಂಚಣ್ಣನನ್ನು ಗುರುತಿಸದೆ ರಾಜಶೇಖರ, ಆ ಸೈನಿಕನ ಹತ್ತಿರ ಹೋಗಿ ಅವನ ಬೆನ್ನ ಮೇಲೆ ಕೈಯಾಡಿಸುತ್ತ ಹೇಳಿದ:

"ಸಮಾಧಾನ ಮಾಡಿಕೊಳ್ಳಪ್ಪಾ. ಸೈನ್ಯಕ್ಕೆ ಸೇರಿದ ಮೇಲೆ ದೊರೆಯ ಅಪ್ಪಣೆ ಪಾಲಿಸಬೇಕಾದದ್ದು ನಿನ್ನ ಕರ್ತವ್ಯ. ಅವರು ಏನು ಹೇಳಿರುವರೋ ಅದರಂತೆ ಮಾಡು."

"ಊಹೂಂ. ನಮ್ಮ ದಳವಾಯಿಯಾದ ನಿನ್ನ ಮೇಲೇ ಕಾವಲು ಮಾಡು

ನಂಥಾ ಭಯಂಕರ ಕೆಲಸ ನನ್ನಿಂದಾಗದು - ನನ್ನ ಸಂಗಡಿಗರಿಂದಲೂ ಆಗದು.”
ಎಂದು ಆ ಸೈನಿಕ ಸ್ಪಷ್ಟವಾಗಿ ಹೇಳಿದ.

“ನೀವೆಷ್ಟು ಮಂದಿ ಬಂದಿರುವಿರಪ್ಪಾ?” ಎಂದ ಕೆಂಚಣ್ಣ.

“ಇಪ್ಪತ್ತು ಮಂದಿ. ಉಳಿದವರು ಹೊರಗಿದ್ದಾರೆ.”

“ದೊರೆಯ ಅಪ್ಪಣೆಯಾದರೂ ಏನು? ಇವನನ್ನು ಹಿಡಿದು ತರಲು ಹೇಳಿರುವರೋ ಏನು?”

“ಇಲ್ಲ. ಇವರೆಲ್ಲೂ ಹೋಗದಂತೆ ಇಲ್ಲೇ ಕಾವಲು ಕಾಯಲು ಹೇಳಿದಾರೆ.”

“ಅಂದರೆ....ನಿನ್ನನ್ನು ಬಂದಿಯಾಗಿಸಿದ ಸುದ್ದಿ ಓಣೆಗೆಲ್ಲಾ ಗೊತ್ತಾಗುವದು....ಊರಿಗೆಲ್ಲಾ ಗೊತ್ತಾಗುವದು. ಚಲೋ ಕೈ ಕೊಟ್ಟರು ನಿನಗೆ ಈ ಮಂದಿ!” ಎಂದ ಕೆಂಚಣ್ಣ.

“ನಾನೇನು ಅವರ ಮಾತು ಕೇಳುವದಿಲ್ಲ” ಎಂದ ಆ ಸೈನಿಕ.

“ಮತ್ತೆ? ಕೇಳದಿದ್ದರೆ ಬಿಡುವರೇನು? ನಿಮ್ಮನ್ನೂ ಸೆರೆಹಿಡಿಯುತ್ತಾರೆ.”

“ಯಾವ ಗಂಡಸು ಅವ ನಮ್ಮನ್ನ ಸೆರೆ ಹಿಡಿಯಲು ಬರುವವ?” ಎನ್ನುತ್ತಾ ಆ ಸೈನಿಕ ಥಟ್ಟನೆ ಎದ್ದು, ಹತ್ತಿರದಲ್ಲಿಯೆ ಬಿದ್ದಿದ್ದ ಕತ್ತಿಯನ್ನು ಮತ್ತೆ ಕೈಯಲ್ಲಿ ಹಿಡಿದು ಹೇಳಿದ; “ನಮ್ಮನ್ನು ಹಿಡಿಯಲು ಬರುವವರ ತಲೆಯೇ ಉಳಿಯುವದಿಲ್ಲ ಅಂತ ತಿಳುಕೊಂಡುಬಿಡಿರಿ.”

ಕೆಂಚಣ್ಣ ನಗುನಗುತ್ತಾ ರಾಜಶೇಖರನತ್ತ ತಿರುಗಿ ಹೇಳಿದ.

“ಮುಂದೇನು ವಿಚಾರವಪ್ಪಾ? ಇವರನ್ನು ಹಿಡಿಯಲಿಕ್ಕೆ ಬೇರೆಯವರು ಬರುವವರೆಗೂ ನೀನು ಇಲ್ಲೇ ಇರುವವನೋ ಅಥವಾ ಈಗಲೇ ಏನಾದರೂ....”

“ನನ್ನನ್ನವರು ಸಂಶಯದಿಂದ ಗಲ್ಲಿಗೇರಿಸಬಹುದೆಂದು ನೀನು ಅಂಜಿದ್ದೀಯೋ ಏನು?”

“ಇಂಥ ಕಾಲದಲ್ಲಿ ಹಾಗೆ ಆಗುವದೂ ಅಶಕ್ಯವಲ್ಲ ರಾಜಣ್ಣಾ. ಕೃಷ್ಣಾಜಿ, ಬನ್ಯಾಬಾಪುಗಳಂಥ ಸ್ವಜಾತಿಯ ನಂಬುಗೆಯವರೇ ದ್ರೋಹ ಬಗೆದಿರುವಾಗ ಬೇರೆ ಜಾತಿಯವನಾದ ನೀನು ಪಿತೂರಿಯಾಗುವದೇನು ದೊಡ್ಡ ಮಾತಲ್ಲ ಅಂತ ರಾಜನಿಗೆ ಅನ್ನಿಸುವ ಸಂಭವವೂ ಇದೆ. ಸಾರಾಸಾರ ವಿಚಾರ ಮಾಡುವ ಮನಸ್ಥಿತಿಯಲ್ಲೂ ಅವನಿಲ್ಲ. ಮದ್ದು ಕೆಟ್ಟುಹೋಯಿತಲ್ಲಾ ಅಂತ ಅವನಿಗೆ ತಲೆಯೇ ಕೆಟ್ಟುಹೋಗಿರಲು ಸಾಕು. ಇಂಥ ಸಮಯದಲ್ಲಿ ರಾಘೋಬನಂಥವರು ಏನು ಹೇಳಿದರೂ ಅದನ್ನು ದೊರೆ ನಂಬಬಹುದು. ಕೃಷ್ಣಾಜಿ ಬನ್ಯಾಬಾಪು ಅಂತೂ ಇವರ

ಕೈಗೆ ಸಿಗದೆ ತಪ್ಪಿಸಿಕೊಂಡು ಹೋದರು, ಇನ್ನು ಮುಂದೆಯೂ ಅವರು ಸಿಗಲಿಕ್ಕಿಲ್ಲ ಅಂತಲೇ ಅನಿಸುತ್ತದೆ. ದೊರೆಯ ರೋಷಕ್ಕೆ ಬಲಿಯಾಗಲು ಯಾವುದೊಂದು ಪ್ರಾಣಿ ಬೇಕೇಬೇಕು. ಯಾರಾದರೊಬ್ಬರ ಬಲಿಯಾದಾಗಲೇ ಅವನ ರೊಚ್ಚು ಇಳಿಯುವುದು. ನೀನೇ ಆ ಬಲಿಯಾಗುವ ಸಂಭವವೂ ಇಲ್ಲದಿಲ್ಲ."

ಕೆಂಚಣ್ಣನ ಮಾತನ್ನು ರಾಜಶೇಖರ ಅಲ್ಲಗಳೆಯುವಂತಿರಲಿಲ್ಲ. ಕೆಂಚಣ್ಣ ನಾಡಿದಂತೆ ನಡೆಯುವುದೂ ಸಾಧ್ಯವಿತ್ತು. ಕ್ರೋಧದಿಂದ ವೈಮರೆತ ದೊರೆ ತನ್ನ ವಧೆಗೆ ಆಜ್ಞೆ ವಿಧಿಸಲೂ ಹಿಂದುಮುಂದು ನೋಡಲಿಕ್ಕಿಲ್ಲ. ಆ ಪ್ರಸಂಗ ಯಾವಾಗ ಬರಬಹುದೆಂಬುದನ್ನೂ ಯಾರೂ ಊಹಿಸುವಂತಿರಲಿಲ್ಲ. ದೊರೆಯ ಲಹರಿಯೆಂದರೆ ಬಯಲಿನ ಗಾಳಿಯಂತೆ, ಅದರ ಚಲನವಲನಗಳನ್ನು ಮೊದಲೇ ಯಾರೂ ಕಂಡು ಹಿಡಿಯುವಂತಿಲ್ಲ.

ರಾಜಶೇಖರನ ಮಿದುಳು ರಭಸದಿಂದ ಕೆಲಸ ಮಾಡತೊಡಗಿತು. ಈ ಸಂದರ್ಭದಲ್ಲಿ ತಾನೇನನ್ನು ಮಾಡಬೇಕು? ದೊರೆಯ ಅಪ್ಪಣೆಯಂತೆ ಮನೆ ಯಲ್ಲಿಯೆ ಸೆರೆಯಾಳಿನಂತೆ ಕುಳಿತಿರಬೇಕೇ? ಮತ್ತೆ ಅವನ ಅಪ್ಪಣೆಯಾದಾಗ, ಆಜ್ಞಾಧಾರಕ ಪ್ರಜೆಯಂತೆ ನೇಣಿಗೆ ಕೊರಳು ಕೊಡಬೇಕೇ? ಅಥವಾ, ಈಗಿಂದೀ ಗಲೇ ಈ ಅನ್ಯಾಯದ ಆಜ್ಞೆಯನ್ನು ಪ್ರತಿಭಟಿಸಿ ಇಲ್ಲಿಂದ ಹೊರಟುಹೋಗ ಬೇಕೇ? ಈ ಸೈನಿಕರೆಲ್ಲರೂ ತನ್ನನ್ನು ಪ್ರೀತಿಸುವವರು. ತಾನು ಹೊರಟುಬಿಟ್ಟರೆ ಇವರಾರೂ ತನ್ನನ್ನು ತಡೆಯಲಾರರು. ತಾನು ಕರೆದರೆ ಇವರಲ್ಲನೇಕರು ತನ ಜತೆಗೆ ಬರಲೂ ಸಿದ್ಧರಾಗಬಹುದು....

ಅದೇನೋ ನಿಜವೆ. ಆದರೆ, ದೊರೆ ತನ್ನ ಮೇಲೆ ಸಂಶಯವಿಟ್ಟುಕೊಂಡಿ ರುವ ಈ ಸಂದರ್ಭದಲ್ಲಿ ತಾನು ಇಲ್ಲಿಂದ ಹೊರಟುಬಿಟ್ಟರೆ ಪರಿಣಾಮವೇನಾಗ ಬಹುದು? ಬನ್ಯಾಬಾಪು–ಕೃಷ್ಣಾಜಿಯರಂತೆ ತಾನೂ ದ್ರೋಹಿಯೆಂದೇ ದೊರೆಯ ಮನಸ್ಸಿಗೆ ಖಚಿತವಾಗಬಹುದಲ್ಲವೆ?

ದ್ರೋಹಿಯೆನಿಸಿಕೊಂಡು ಬದುಕುವುದೂ ಒಂದು ಬದುಕೇ?

ರಾಜಶೇಖರನ ಮನಸ್ಸು ಒಂದು ನಿರ್ಧಾರಕ್ಕೆ ಬಂದು ತಲಪಿತು. ಸೈನಿಕನತ್ತ ತಿರುಗಿ ಆತ ಹೇಳಿದ:

"ನೀನೂ ನಿನ್ನ ಸಂಗಡಿಗರೂ ಇಲ್ಲೇ ಇದ್ದುಬಿಡಿರಿ. ನೀವು ನಿಮ್ಮ ಕರ್ತವ್ಯ ನೋಡಿಕೊಳ್ಳಿರಿ. ನಾನು ನನ್ನದನ್ನು ನೋಡಿಕೊಳ್ಳುತ್ತೇನೆ."

"ಅಂದರೆ? ನೀನು ಬಲಿಪಶುವಾಗಬೇಕೆಂದೇ ನಿಶ್ಚಯ ಮಾಡಿದಿಯಾ?" ಎಂದ ಕೆಂಚಣ್ಣ.

"ನಿರ್ದೋಷಿಯಾದ ನನಗೆ ಯಾತರದೂ ಭಯವಿಲ್ಲ ಕೆಂಚಣ್ಣ. ನನಗಾಗಿ ನೀನೂ ಸುಮ್ಮನೆ ಚಿಂತಿಸಬೇಡ."

"ಇವರಿಗೇನೂ ಆಗುವದಿಲ್ಲ ಸುಮ್ಮನಿರ್ರಿ," ಎಂದು ಆ ಸೈನಿಕನೂ ಆತ್ಮ ವಿಶ್ವಾಸದಿಂದ ಹೇಳಿದ.

ಅಷ್ಟರಲ್ಲಿ ಹೊರಗೆ ಬಂದ ಗುರುಶಾಂತಪ್ಪ, ರಾಜನ ಅಪ್ಪಣೆಯ ವಿಚಾರ ಗೊತ್ತಾಗುತ್ತಲೂ ಕೆಲಹೊತ್ತು ಗರ ಹೊಡೆದವರಂತೆ ಕುಳಿತಿದ್ದ, ನಾಲ್ಕೈದು ನಿಮಿಷಗಳ ತರುವಾಯ ಧೈರ್ಯ ತಂದುಕೊಂಡು ಮಗನನ್ನು ಕುರಿತು ಹೇಳಿದ:

"ನಿನ್ನ ಪ್ರಾಣ ತೆಗೆಯಬೇಕೆಂದೇ ಅವರು ಮಸಲತ್ತು ಮಾಡಿರಬೇಕು. ನೀನಿಲ್ಲಿ ಒಂದು ಗಳಿಗೆಯೂ ನಿಲ್ಲದೆ ಈಗಿಂದೀಗ ಹೊರಟುಬಿಡಬೇಕು."

"ಹಿರಿಯ ಹೇಳಿದಂತೆ ಮಾಡುವದೇ ಒಳ್ಳೆಯದು ರಾಜಣ್ಣಾ. ವಿಷ ಮತ್ತು ರಾಜಾಜ್ಞೆಗಳೊಡನೆ ಸರಸವಾಡುತ್ತ ಕೂಡಬಾರದು."

ಗುರುಶಾಂತಪ್ಪನೂ ಕೆಂಚಣ್ಣನೂ ಎಷ್ಟು ಒತ್ತಾಯಪಡಿಸಿದರೂ ರಾಜ ಶೇಖರ ಊರು ತ್ಯಜಿಸಲು ಒಡಂಬಡಲಿಲ್ಲ. ಬಂದುದೆಲ್ಲವನ್ನೂ ಧೈರ್ಯದಿಂದ ಎದುರಿಸುವುದೆಂದೇ ಅವನು ಸಂಕಲ್ಪಿಸಿಕೊಂಡಿದ್ದ.

ರಾಜಶೇಖರನ ಮೇಲೆ ಬಂದ ಸಂಕಟದ ಸಮಾಚಾರ ತಿಳಿಯುತ್ತಲೂ ಮಲಿಕಾ ಕೂಡ ಗಾಬರಿಗೊಂಡು, ದಾಸಿಯನ್ನು ಜತೆಯಲ್ಲಿ ಕರೆದುಕೊಂಡು ಅವನ ಮನೆಗೇ ಧಾವಿಸಿ ಬಂದಳು.

ತಮ್ಮ ಮನೆಗೆ ಆ ಮೊದಲೆಂದೂ ಬಂದಿರದಿದ್ದ ಮಲಿಕಾ ಅಂದು ಬಂದು ದನ್ನು ಕಂಡು, ಪರಿಸ್ಥಿತಿಯ ಗಂಭೀರತೆಯು ಅರಿವಾಗಿ ಗುರುಶಾಂತಪ್ಪ ಮತ್ತಷ್ಟು ಚಿಂತಾಕ್ರಾಂತನಾಗಿ ಅಂಗಳದಲ್ಲಿ ಕೈಕಟ್ಟಿ ಕುಳಿತುಕೊಂಡ. ಒಳಗಡೆ ಕೊಟಡಿ ಯಲ್ಲಿ ತನ್ನ ಪ್ರಿಯನನ್ನು ಅಪ್ಪಿಕೊಂಡು ಮಲಿಕಾ ಕಣ್ಣೀರು ಸುರಿಸತೊಡಗಿದ್ದಳು. ರಾಜಶೇಖರ ಎಷ್ಟು ಸಂತೈಸಿದರೂ ಅವಳ ಅಳು ನಿಲ್ಲಲಿಲ್ಲ.

"ಯಾಕೆ ಅಳುತ್ತೀ ಹುಚ್ಚೀ? ನನಗೇನೂ ಆಗುವುದಿಲ್ಲ. ಸುಮ್ಮನಾಗು," ಎಂದು ಆತ ಪದೇ ಪದೇ ಹೇಳಿದರೂ ಅವಳು ಸುಮ್ಮನಾಗಲಿಲ್ಲ.

"ಆ ದುಷ್ಟ ರಾಘೋಬ ನಿಮ್ಮನ್ನು ಬಿಡುವದಿಲ್ಲ. ನಾವಿಬ್ಬರೂ ಕೂಡಿ ಎಲ್ಲಿಗಾದರೂ ಹೋಗಿಬಿಡೋಣ. ಈಗಿಂದೀಗ ಹೋಗಿಬಿಡೋಣ," ಎಂದು ಅವಳು

ಹಟ ಹಿಡಿದು ಕುಳಿತಳು. ಹಾಗೆ ಹೋಗುವುದು ಪ್ರಸ್ತುತ ಸಮಯದಲ್ಲಿ ಉಚಿತ ವಲ್ಲವೆಂದು ಆತ ಎಷ್ಟು ಬಗೆಯಿಂದ ಹೇಳಿದರೂ ಅವಳು ತನ್ನ ಹಟ ಬಿಡಲಿಲ್ಲ. ಕೊನೆಗೆ ಆತ,

"ಆಗಲಿ ಮಲಿಕಾ. ನಾನು ಸ್ವಲ್ಪ ವಿಚಾರ ಮಾಡುತ್ತೇನೆ. ನೀನೀಗ ಮನೆಗೆ ನಡೆ," ಎಂದು ಹೇಳಿ ಅವಳನ್ನು ಕಳಿಸಲು ಯತ್ನಿಸಿದ. ಅಲ್ಲಿಂದ ಹೊರಡು ವುದಕ್ಕೂ ಅವಳು ಸಿದ್ಧಳಾಗಲಿಲ್ಲ.

"ಊಹೂಂ. ನಿಮ್ಮನ್ನು ಬಿಟ್ಟು ನಾನು ಹೋಗುವದಿಲ್ಲ. ನೀವಿದ್ದಲ್ಲೇ ನಾನೂ ಇರುವವಳು. ರಾಜರು ನಿಮ್ಮನ್ನು ದಂಡಿಸುವದಾದರೆ ನನ್ನನ್ನೂ ದಂಡಿಸಲಿ."

"ಹೀಗೆ ಹುಚ್ಚಿಯಂತೆ ಹಟ ಮಾಡಬಾರದು ಮಲಿಕಾ. ನನ್ನ ಮಾತು ಕೇಳು. ಮನೆಗೆ ನಡೆ."

"ನೀವೂ ಬರ್ರಿ ಹಾಗಾದರೆ ನನ್ನ ಸಂಗಡ."

"ಬರುತ್ತೇನೆ – ಈ ಗದ್ದಲ ಮುಗಿದ ಬಳಿಕ."

"ಆದುವರೆಗೂ ನಾನು ಇಲ್ಲೇ ಇರುತ್ತೇನೆ. ನಿಮ್ಮ ತಂದೆಯವರೇನು ನನಗೆ ಇಲ್ಲಿರಲು ಬೇಡ ಅನ್ನುವದಿಲ್ಲವಲ್ಲ?"

"ಅವರೇನು ಅನ್ನುವದಿಲ್ಲ. ಆದರೂ....ಈ ವೇಳೆಯಲ್ಲಿ....ನೀನು...."

"ನೀವೇನು ಹೇಳಿದರೂ ನಾನು ಕೇಳುವವಳಲ್ಲ. ನಿಮ್ಮನ್ನು ಬಿಟ್ಟು ನಾನೀಗ ಒಬ್ಬಳೇ ಮನೆಗೆ ಹೋಗುವದೇ ಶಕ್ಯವಿಲ್ಲ,"

ಅವಳು ಹಾಗೆ ಹೇಳಿದಳಾದರೂ ಅಂದು ರಾತ್ರಿಯೇ ಅವನನ್ನು ಬಿಟ್ಟು ತನ್ನ ಮನೆಗೆ ಹೊರಡಲೇಬೇಕಾದ ಪ್ರಸಂಗ ಬಂದಿತು. ಸಾಯಂಕಾಲ ರಾಜಾ ಸಾಹೇಬನಿಂದ ಕರೆ ಬಂದುದರಿಂದ ಅರಮನೆಗೆ ಹೊರಟುಹೋದ ರಾಜಶೇಖರ ಹಿಂದಿರುಗಿ ಬರಲಿಲ್ಲ. ಅವನನ್ನು ಕೋಟೆಯಲ್ಲಿ ಬಂಧನದಲ್ಲಿರಿಸಲಾಗಿದೆಯೆಂಬ ಸಮಾಚಾರ ತಿಳಿಯಿತಷ್ಟೆ. ಮಲಿಕಾ ಎಷ್ಟು ಅತ್ತರೂ, ಶಪಿಸಿದರೂ, ಕೂಗಿದರೂ ಏನೂ ಉಪಯೋಗವಾಗುವಂತಿರಲಿಲ್ಲ. ಮಾರನೆಯ ದಿನ ತಾನೇ ಹೋಗಿ ದೊರೆ ಯನ್ನು ಕಂಡು ರಾಜಶೇಖರನನ್ನು ಬಿಡಿಸಿ ತರುವುದೆಂದು ನಿರ್ಧರಿಸಿ ಅವಳು ತನ್ನ ಮನೆಗೆ ಹೊರಟಳು.

## ೧೩

ಮರುದಿನ ಬೆಳಕು ಹರಿಯುವುದರೊಳಗಾಗಿ ಮಿಂಚಿನಂತೆ ಘಟನೆಗಳು ಸಂಭವಿಸಿದುವು. ರಾಜಶೇಖರನನ್ನು ಬಿಡಿಸಿಕೊಂಡು ಬರುವ ಉದ್ದೇಶದಿಂದ ಮಲಿಕಾ ಅರಮನೆಗೆ ಹೋಗಬೇಕಾದ ಪ್ರಮೇಯವೂ ಒದಗಲಿಲ್ಲ. ಬೆಳಗಾಗುವುದರೊಳಗಾಗಿ ರಾಜಶೇಖರನೇ ಅವಳ ಮನೆಗೆ ಬಂದ.

ಪ್ರಿಯನನ್ನು ಬಿಗಿದಪ್ಪಿಕೊಂಡು ಅವಳು ಸಂತಸದಿಂದ ಉದ್ಗಾರ ತೆಗೆದಳು:

“ದೇವರು ದೊಡ್ಡವನು. ನಿಮಗೇನೂ ಆಗಲಿಲ್ಲ. ಇನ್ನಾದರೂ ನನ್ನ ಮಾತು ಕೇಳಿರಿ. ಈಗಿಂದೀಗ ಈ ಊರು ಬಿಟ್ಟುಬಿಡಿರಿ.”

“ಊರು ಬಿಟ್ಟು ಹೊರಡುವ ವಿಚಾರ ಕೂಡಾ ನನ್ನಿಂದಾಗದು ಮಲಿಕಾ. ಅಲ್ಲದೆ ಈಗ ಹೊರಡಬೇಕೆಂದರೂ ಸಾಧ್ಯವಾಗದು.”

“ಯಾಕೆ ಸಾಧ್ಯವಾಗದು?”

“ಹೊರಡುವುದೇ ಆದರೆ ಕೈಲಿ ಕತ್ತಿ ಹಿಡಿದು ಯುದ್ಧ ಮಾಡಲೆಂದೇ ಹೊರಡಬೇಕು. ನರಗುಂದವನ್ನು ನಾಲ್ಕು ಕಡೆಯಿಂದಲೂ ವೈರಿಗಳು ಮುತ್ತಿದ್ದಾರೆ.”

“ವೈರಿಗಳೇ? ಯಾವಾಗ ಬಂದರವರು?”

“ರಾತ್ರೆಯೇ. ಅರಮನೆಯಲ್ಲಿ ಕೋಟೆಯಲ್ಲಿ ಬರೀ ಗದ್ದಲ ನಡೆದಿದೆ. ಆ ಗದ್ದಲದಲ್ಲಿಯೆ ಯಾರೋ ಬಂದು ನನ್ನನ್ನು ಬಿಡುಗಡೆ ಮಾಡಿದರು. ಇಲ್ಲವಾದರೆ...”

“ಏನಾಗುತ್ತಿತ್ತು?”

“ಏನಾಗುತ್ತಿತ್ತೋ ಹೇಳಲು ಬರುವಂತಿಲ್ಲ. ಬುರುಜಿನ ಮೇಲಿಂದ ನನ್ನನು ಕೆಳಗೆ ತಳ್ಳಿ ಮರಣದಂಡನೆ ವಿಧಿಸುವ ಸಂಭವವೂ ಇತ್ತು.”

“ಅಂತೂ ಅದೊಂದು ಗಂಡಾಂತರ ತಪ್ಪಿತಲ್ಲ. ಮುಂದೇನು ಮಾಡಬೇಕೆಂದಿದ್ದೀರಿ?”

“ಹೊರಗಡೆ ವೈರಿಗಳು ಬಂದು ನಿಂತಿರುವಾಗ ಸೇನಾಪತಿಯಾದವನು ಏನು ಮಾಡಬೇಕೋ ಅದನ್ನೇ.”

“ಆದರೆ, ನೀವೀಗ ಸೇನಾಪತಿಯಾಗಿಯೂ ಉಳಿದಿಲ್ಲವಲ್ಲ? ನೀವೀಗ ಬಂದದ್ದು ಸೆರೆಮನೆಯಿಂದ. ಇಷ್ಟು ಬೇಗ ಮರೆತಿರಾ?”

"ಇಲ್ಲ, ಮಲಿಕಾ, ಮರೆತಿಲ್ಲ. ಮರೆಯುವುದಾದರೂ ಹ್ಯಾಗೆ? ರಾಜಾ ಸಾಹೇಬರಿಗೆ ನನ್ನ ಮೇಲೆ ಅನುಮಾನ ಬಂದು ಹಾಗಾಯಿತು. ಅವರ ಅನು ಮಾನವನ್ನು ಕೃತಿಯಿಂದ ದೂರಗೊಳಿಸುವ ಸಮಯವೀಗ ಬಂದಿದೆ."

"ಅಂದರೆ....ನೀವೂ ಯುದ್ಧಕ್ಕೆ...."

"ಹೌದು. ಅದರಲ್ಲೇನು ಸಂಶಯ? ನನಗೇನಾಯಿತೋ ಎಂದು ನೀನು ಚಿಂತಿಸುತ್ತಾ ಕುಳಿತಿರಬಾರದೆಂದುಕೊಂಡು ನಿನಗೆ ಭೆಟ್ಟಿಯಾಗಿ ಹೋಗೋಣ ವೆಂದು ಬಂದಿದ್ದೆ. ಇನ್ನು ಯುದ್ಧ ಮುಗಿಯುವವರೆಗೂ ಮತ್ತೆ ಕಾಣುವಂತಿಲ್ಲ. ನಾನಿನ್ನು ಬರಲೇ?" ಎಂದವನೇ, ತನ್ನ ಪ್ರೇಯಸಿಯನ್ನೊಂದು ಬಾರಿ ಪ್ರೀತಿ ಯಿಂದ ದಿಟ್ಟಿಸಿ ನೋಡಿ ಆತ ಹೊರಟುಹೋದ.

ಬೆಳಗಾಗುತ್ತಿದ್ದ ಹಾಗೇ ನಗರದಲ್ಲಿ ಒಂದೇ ಗೊಂದಲಕ್ಕಾರಂಭವಾಯಿತು. ನಗನಾಣ್ಯಗಳನ್ನು ಕಟ್ಟಿಕೊಂಡು ಸಮೀಪದ ಬಳಗದವರನ್ನು ಕೂಡಿಕೊಂಡು ಊರು ಬಿಟ್ಟು ಹೊರಡುವ ಸಿದ್ಧತೆಗಾರಂಭಿಸಿತು ಜನ. ಕೆಂಚಣ್ಣ – ಗುರುಶಾಂತಪ್ಪ ಮೊದಲಾದವರೂ ಅದೇ ಸಿದ್ಧತೆಯಲ್ಲಿದ್ದಾಗಲೆ ರಾಜಶೇಖರ ಕಾಣಿಸಿಕೊಂಡ.

"ಉಳಿದು ಬಂದೆಯಲ್ಲ ಮಾರಾಯಾ. ದೇವರೇ ಕಾಪಾಡಿದ. ಇನ್ನು ಪಿಟ್ಟೆಂದು ಮಾತಾಡದೆ ನಮ್ಮ ಸಂಗಡ ಹೊರಡು," ಎಂದ ಕೆಂಚಣ್ಣ.

"ಉಹೂಂ, ನಾನು ಬರುವುದಿಲ್ಲ," ದೃಢನಿಶ್ಚಯದ ಧ್ವನಿಯಲ್ಲಿ ರಾಜ ಶೇಖರ ಹೇಳಿದ.

ಗಂಟು ಕಟ್ಟುತ್ತಿದ್ದ ಕೆಂಚಣ್ಣ ಆ ಕೆಲಸ ನಿಲ್ಲಿಸಿ ರಾಜಶೇಖರನನ್ನು ತಿರಸ್ಕಾರ ದಿಂದ ನೋಡುತ್ತ ಮಾತನಾಡಿದ:

"ಬರದಿದ್ದರೆ ಇಲ್ಲೇ ಸಾಯಬೇಕೆಂದು ಮಾಡಿದ್ದೀಯಾ? ಯಾವ ಉದ್ದೇಶ ಕ್ಕಾಗಿ ಸಾಯುವುದು?"

"ನನ್ನ ವಿಚಾರ ನಿನಗೆ ಅರ್ಥವಾಗುವಂತಿಲ್ಲ ಕೆಂಚಣ್ಣ. ಸುಮ್ಮನೆ ವಾದ ವೇಕೆ? ನಿನಗೆ ತಿಳಿದಂತೆ ನೀನು ಮಾಡು. ನನಗೆ ತಿಳಿದಂತೆ ನಾನು ಮಾಡು ತ್ತೇನೆ. ನಾನು ನಿನ್ನನ್ನು ತಡೆಯುವುದಿಲ್ಲ. ನೀನು ನನ್ನನ್ನು ತಡೆಯಬೇಡ."

"ವ್ಯರ್ಥವಾಗಿ ಪ್ರಾಣ ಕಳೆದುಕೊಳ್ಳಲು ಹೊರಟಾಗಲೂ ತಡೆಯಬಾರ ದೆಂದರೇನು? ನಿನಗೆ ಬುದ್ಧಿಯಿಲ್ಲವೆಂದಾಗ ನನಗಾದರೂ ಇರಬೇಡವೇನು? ನೀನೇನು ಹೇಳಿದರೂ ನಾವು ಕೇಳುವುದಿಲ್ಲ. ನಮ್ಮ ಸಂಗಡ ನಿನ್ನನ್ನು ಎಳೆದೊಯ್ಯು ವವರೇ."

"ಹಟ ಮಾಡಬೇಡ ರಾಜಾ. ನಿನ್ನನ್ನು ಪಿತೂರಿಯೆಂದು ತಿಳಿದು ಅವಮಾನಗೊಳಿಸಿದವರಿಗಾಗಿ ನೀನ್ಯಾಕೆ ಪ್ರಾಣ ಕೊಡಬೇಕು? ನಮ್ಮ ಸಂಗಡ ನಡೆ," ಎಂದು ಗುರುಶಾಂತಪ್ಪನೂ ಹೇಳಿದ.

ಅವರ ವಾದವಿವಾದ ನಡೆದಿದ್ದ ಹಾಗೆಯೆ ಬೀದಿಯಲ್ಲಿ ಜನರ ಕೂಗಾಟ ಅತಿಶಯವಾಯಿತು. ಹೆಂಗಸರೂ ಹುಡುಗರೂ ದೊಡ್ಡ ಧ್ವನಿ ತೆಗೆದು ಅಳುತ್ತಾ ಅತ್ತಿಂದಿತ್ತ ಇತ್ತಿಂದತ್ತ ಓಡತೊಡಗಿದರು.

"ದಂಡು ಊರೊಳಗೇ ನುಗ್ಗಿತೋ ಏನೊ," ಎಂದು ಕೆಂಚಣ್ಣ ಹೇಳುತ್ತಿದ್ದಂತೆಯೆ ಸೈನಿಕ ವೇಷದಲ್ಲಿದ್ದ ನಾಲ್ಕು ಜನರು ಅವರು ನಿಂತ ಸ್ಥಳಕ್ಕೇ ಓಡಿ ಬಂದರು. ಅವರಲ್ಲೊಬ್ಬ ರಾಜಶೇಖರನಿಗೆ ಮುಜುರೆ ಮಾಡಿ ಹೇಳಿದ:

"ಮೊದಲನೆಯ ಸಲಾಮಿಯಲ್ಲೇ ನಮ್ಮ ದಂಡು ಸೋತು ಓಡಿಹೋಯ್ತು ದಳವಾಯಣ್ಣಾ. ನಾವಿನ್ನು ಏನು ಮಾಡೋಣ, ಹೇಳು."

"ಇವನು ನಿಮ್ಮ ದಳವಾಯಿಯೆಂದು ನಿಮಗಾರು ಹೇಳಿದರು? ನಡೀರಿ. ಆ ರಾಘೋಬನನ್ನು ಕೇಳಿಕೊಳ್ಳಿರಿ," ಎಂದ ಕೆಂಚಣ್ಣ.

"ರಾಘೋಬ ಎಲ್ಲಿದಾನೋ ಯಾರಿಗೂ ಗೊತ್ತಿಲ್ಲ."

"ಹಾಗಾದರೆ ರಾಜಾಸಾಹೇಬನನ್ನೇ ಕೇಳಿರಿ."

"ಅವರೂ ಎಲ್ಲಿದಾರೆಂಬುದು ತಿಳಿಯಲೊಲ್ಲದು. ಏನು ಹೇಳುತ್ತೀ ದಳವಾಯಣ್ಣಾ, ನಾವೇನು ಲಢಾಯಿ ಮಾಡೂಣೋ ಬ್ಯಾಡವೋ?"

"ಬೇಡ ಬೇಡ," ಎಂದು ಕೆಂಚಣ್ಣ ಹೇಳುತ್ತಿದ್ದಂತೆಯೇ ರಾಜಶೇಖರ ಆ ಸೈನಿಕರ ಕಡೆ ತಿರುಗಿ ಕೇಳಿದ:

"ದಂಡಾಳುಗಳೆಲ್ಲಾ ಎಲ್ಲಿದಾರೆ?"

"ಹೀಗೇ ಊರಲ್ಲಿ ತಿರುಗುತ್ತಿದಾರೆ. ಎಷ್ಟೋ ಮಂದಿಯಂತೂ ಓಡಿ ಹೋದರು. ನೂರಾರು ಮಂದಿ ಮಡಿದರು."

"ರಾಜಾಸಾಹೇಬರೆಲ್ಲಿದಾರೆ ಅನ್ನುವುದು ಯಾರಿಗೂ ಗೊತ್ತಿಲ್ಲ ಅಂದಿರಾ?"

"ನಮಗಂತೂ ಯಾರೂ ಹೇಳಲಿಲ್ಲ."

"ಅರಮನೆಯಲ್ಲಿ ವಿಚಾರಿಸಿದಿರಾ?"

"ವಿಚಾರಿಸಿದೆವು. ಎಲ್ಲರೂ ಓಡುವ ಗಡಿಬಿಡಿಯಲ್ಲೇ ಇರುವಾಗ ನಮಗೆ ಉತ್ತರ ಯಾರು ಕೊಡಬೇಕು?"

ಕೆಂಚಣ್ಣ ತಡೆಯುತ್ತಿದ್ದರೂ ಅವನನ್ನು ದೂರ ಸರಿಸಿ, ಅವಸರದಲ್ಲಿಯೆ ತಂದೆಯ ಪಾದ ಮುಟ್ಟಿ ವಂದಿಸಿ, ಅಂಗಳದಲ್ಲಿನ ವೀರಭದ್ರನ ಮೇಲೇರಿ ಕುಳಿತು ರಾಜಶೇಖರ ಬೀದಿಗೆ ಬಂದ. ಅವನ ಬಲಗೈಯಲ್ಲಿ ಹಿರಿದ ಕತ್ತಿ ಝಳಪಿಸುತ್ತಿತ್ತು, ಮೊಗದ ಮೇಲೆ ವೀರಕಳೆ ಕುಣಿಯುತ್ತಿತ್ತು.

ಗಾಬರಿಯಿಂದ ಅತ್ತಿತ್ತ ಓಡಿಯಾಡುತ್ತಿದ್ದ ಜನರಲ್ಲಿ ಧೈರ್ಯ ತುಂಬಲು ಆತ ಪ್ರಯತ್ನಿಸಿದ. ಆದರೆ, ಅವನ ಮಾತುಗಳತ್ತ ಯಾರೂ ಗಮನವೀಯಲಿಲ್ಲ. ಸೈನಿಕವೇಷದಲ್ಲಿದ್ದ ಜನರು ಮಾತ್ರ ಅವನನ್ನು ಹಿಂಬಾಲಿಸಿಕೊಂಡು ಹೊರಟರು.

ಅವರು ಅರಮನೆಯ ಹತ್ತಿರ ಬರುತ್ತಿದ್ದಂತೆಯೆ, ನಗರದ ಮುಖ್ಯ ಅಗಸೆಯ ಬಾಗಿಲಿನಿಂದ ಗಾಯಗೊಂಡ ಸೈನಿಕರ ಗುಂಪೊಂದು ಓಡಿಬಂತು. ಅವರಲ್ಲಿ ಅನೇಕರಿಗೆ ಗುಂಡಿನಿಂದ ಗಾಯಗಳಾಗಿ ರಕ್ತ ಸುರಿಯುತ್ತಿತ್ತು. ಅವರ ಚಿಕಿತ್ಸೆಗಾಗಿ ಯಾವ ವ್ಯವಸ್ಥೆಯೂ ನಡೆದಿರಲಿಲ್ಲ. ಅಂತೆಯೆ, ಆ ದಂಡಾಳುಗಳು ಹಾದಿ ಸಿಕ್ಕತ್ತ ಓಡತೊಡಗಿದ್ದರು. ಅವರನ್ನು ನಿಲ್ಲಿಸಲು ರಾಜಶೇಖರ ಎಷ್ಟು ಯತ್ನಿಸಿದರೂ ಅವರು ನಿಲ್ಲಲಿಲ್ಲ.

ಅತ್ಯಂತ ಪ್ರಯಾಸದಿಂದ ಒಬ್ಬ ಸೈನಿಕನನ್ನು ನಿಲ್ಲಿಸಿ ರಾಜಶೇಖರ ವಿಚಾರಿಸಿದ :

"ಏನಾಯಿತು ಹೊರಗೆ? ಇಂಗ್ರೇಜರ ದಂಡು ಎಷ್ಟಿದೆ? ಅವರೆಲ್ಲಾ ಎಲ್ಲಿದಾರೆ ?"

ಮೇಲುಸಿರು ಬಿಡುತ್ತಾ ಆ ಸೈನಿಕ ಹೇಳಿದ: "ಇಲ್ಲೇ ಇದಾರೆ ಇಲ್ಲೇ. ಇನ್ನೇನು ಇಷ್ಟರಲ್ಲೇ ಊರಲ್ಲಿ ನುಗ್ಗಬಹುದು."

"ರಾಜಾಸಾಹೇಬರೆಲ್ಲಿದಾರೆ ಗೊತ್ತಿದೆಯೇನು ನಿನಗೆ ?"

"ಇರಬಹುದಲ್ಲ ಕೋಟೆಯಲ್ಲಿ."

"ಅವರು ಕೆಳಗೆ ಬಂದೇ ಇಲ್ಲ ಅಂತೀಯಾ ?"

"ಅವರ್‍ಯಾಕೆ ಬಂದಾರು ಸಾಯಲಿಕ್ಕೆ ?" ಎಂಬವನೇ ಆ ಸೈನಿಕ ಅಲ್ಲಿ ನಿಲ್ಲದೆ ಓಡಿಹೋದ.

ಆಂಗ್ಲರು ತೋಪು ತುಬಾಕಿಗಳ ಗರ್ಜನೆ ಒಂದೇಸಮನೆ ನಡೆದಿತ್ತು. ನರಗುಂದದ ತೋಪುಗಳೂ ಹಲವು ಬಾರಿ ಮದ್ದು ಸಿಡಿಸಿ ಅನಂತರ ಮೌನ ತಳೆದಿದ್ದುವು. ಪ್ರತಿಭಟನೆಯಿಲ್ಲದಂತಾಗಲೂ ಇಂಗ್ಲೀಷರ ತೋಪುಗಳು ಎಡಬಿಡದೆ ಅಗ್ನಿವರ್ಷವನ್ನು ಮಾಡತೊಡಗಿದ್ದುವು. ಆ ರಭಸಕ್ಕೆ ನರಗುಂದದ ಭದ್ರ ಕೋಟೆಯು

ಗೋಡೆಗಳೂ ಮೆಲ್ಲಮೆಲ್ಲನೆ ಕಳಚಿ ಬೀಳತೊಡಗಿದ್ದುವು. ರಾಜಶೇಖರನ ಕಣ್ಣೆದುರಿನಲ್ಲಿಯೆ ದೊಡ್ಡ ಬುರುಜೊಂದು ಧಡಧಡನೆ ಕಡಿದುಬಿತ್ತು. ಕೋಟೆಯನ್ನುಳಿಸಲು ಕೊನೆಯ ಪ್ರಯತ್ನ ಮಾಡುವುದವಶ್ಯಕವೆಂದು ಹೊಳೆಯುತ್ತಲೂ ಆತ ಕುದುರೆಯ ಬೆನ್ನು ತಟ್ಟಿ ಅದನ್ನು ಕೋಟೆಯತ್ತ ಓಡಿಸಿದ. ಅವನ ಜತೆಗಿದ್ದ ಹತ್ತಿಪ್ಪತ್ತು ಮಂದಿ ಸೈನಿಕರೂ ಅವನ ಹಿಂದೆ ಧಾವಿಸಿದರು.

ಕೋಟೆಯ ದಿಕ್ಕಿನೆಯತ್ತ ಇಂಗ್ಲೀಷರ ಗುಂಡು ಹಾರಿಬರುತ್ತಿದ್ದರೂ ಅವುಗಳನ್ನು ಗಮನಿಸದೆ ರಾಜಶೇಖರ ಕುದುರೆಯನ್ನೋಡಿಸುತ್ತಿದ್ದ. ಮೇಲೆ, ಕೋಟೆಯ ಸಂರಕ್ಷಣೆಗೂ ಸಮರ್ಪಕ ವ್ಯವಸ್ಥೆಯಿಲ್ಲದಿದ್ದುದು ಕೆಳಗಿನಿಂದಲೂ ಗೊತ್ತಾಗುವಂತಿತ್ತು. ತುಬಾಕಿಯ ಕಿಂಡಿಗಳೂ ಅರ್ಧಕ್ಕರ್ಧ ಬರಿಯವಾಗಿದ್ದುವು. ಬುರುಜುಗಳು ಮೇಲೂ ಸೈನಿಕರು ವಿಶೇಷವಾಗಿರಲಿಲ್ಲ. ಕೋಟೆಯಿಂದಲೂ ಜನರು ಓಡಿಬರುತ್ತಲೇ ಇದ್ದರು.

ಮಹಾದ್ವಾರದ ಬಳಿ ಬಂದು ಕುದುರೆಯಿಂದಿಳಿದು ಆತ ದ್ವಾರರಕ್ಷಕರನ್ನು ಕೇಳಿದ:

" ರಾಜಾಸಾಹೇಬರೆಲ್ಲಿದ್ದಾರೆ ಗೊತ್ತಿದೆಯೆ ?"

" ಇಲ್ಲ ದಳವಾಯಣ್ಣ,"

ರಾಜಶೇಖರ ಮತ್ತೆ ಕುದುರೆಯೆರಿ ಕೋಟೆಯಲ್ಲಿ ಪ್ರವೇಶಿಸಿ ಕಿಲ್ಲೇದಾರನನ್ನು ಕಾಣಲು ಯತ್ನಿಸಿದ. ಅವನೆಲ್ಲಿರುವನೆಂಬುದೂ ಯಾರಿಗೂ ಗೊತ್ತಿರಲಿಲ್ಲ.

ಯುದ್ಧದ ಸಮಯದಲ್ಲಿ ರಾಜಮನೆತನದವರು ಕೋಟೆಯಲ್ಲಿನ ಅರಮನೆಯಲ್ಲಿರುವುದು ವಾಡಿಕೆಯಾಗಿತ್ತು. ಮುನ್ನಾದಿನದ ರಾತ್ರೆಯಲ್ಲಿಯೆ ರಾಜಾಸಾಹೇಬನೂ ಅವನ ಪರಿವಾರದವರೂ ಕೋಟೆಯಲ್ಲಿನ ಅರಮನೆಗೆ ಬಂದು ಬೀಡುಬಿಟ್ಟ ವಿಚಾರ ರಾಜಶೇಖರನಿಗೂ ಗೊತ್ತಿದ್ದಿತು.

ಆದರೆ, ಈಗ ಅಲ್ಲಿ ರಾಜನೂ ಇರಲಿಲ್ಲ, ಅವನ ಪರಿವಾರದವರೂ ಇರಲಿಲ್ಲ. ಅವರೆಲ್ಲರೂ ಎಲ್ಲಿಗೆ ಹೋದರೆಂಬುದೂ ಯಾರಿಗೂ ಗೊತ್ತಿರಲಿಲ್ಲ.

" ಅವರೂ ಓಡಿಹೋದರೊ ಏನೊ," ಎಂದನೊಬ್ಬ ಸೈನಿಕ.

" ಛೆ. ನಮ್ಮ ರಾಜಾಸಾಹೇಬರು ಓಡಿಹೋಗುವುದುಂಟೇ ?"

" ಓಡಿಹೋಗದಿದ್ದರೆ ಎಲ್ಲಾದರೂ ಕಾಣಿಸಬೇಕಲ್ಲ ? ತೋಪುಖಾನೆಯಲ್ಲಾದರೂ ಇರಬಹುದೇನೋ ನೋಡಬೇಕು."

ತೋಪುಖಾನೆಯಲ್ಲೂ ಹುಡುಕಿದುದಾಯಿತು. ಅಲ್ಲಿಯೂ ಕೂಡಾ ಒಬ್ಬ ಮನುಷ್ಯನೂ ಇರಲಿಲ್ಲ.

ತಾಯಿಯನ್ನೂ ಪತ್ನಿಯನ್ನೂ ಕರೆದುಕೊಂಡು ರಾಜಾಸಾಹೇಬರು ಓಡಿ ಹೋಗಿರಬಹುದೇನೋ ಎಂದು ರಾಜಶೇಖರ ಆಗ ಯೋಚಿಸತೊಡಗಿದ.

## ೧೪

ನರಗುಂದದ ರಾಜ ಓಡಿಹೋಗಿದ್ದುದೇನೋ ನಿಜ. ಆದರೆ, ತನ್ನ ತಾಯಿಯನ್ನೂ ಪತ್ನಿಯನ್ನೂ ಆತ ಜತೆಗೆ ಕರೆದುಕೊಂಡು ಹೋಗಿರಲಿಲ್ಲ.

ತಾನು ಹಾಗೆ ಪಲಾಯನ ಮಾಡುವ ಪ್ರಸಂಗ ಬರಬಹುದೆಂಬ ಕಲ್ಪನೆಯೂ ಭಾಸ್ಕರರಾಯನಿಗೆ ಅಂದಿನ ಪ್ರಾತಃಕಾಲದವರೆಗೂ ಇರಲಿಲ್ಲ. ಇಂಗ್ಲೀಷರ ಸೈನ್ಯ ಇಷ್ಟು ತ್ವರೆಯಿಂದ ಬಂದು ಮುತ್ತಿಗೆ ಹಾಕಬಹುದೆಂದೂ ಆತ ತಿಳಿದಿರಲಿಲ್ಲ. ಆ ಸೈನ್ಯ ಬರುವುದರೊಳಗಾಗಿ ತನ್ನ ಒಬ್ಬಿಬ್ಬರು ಮಿತ್ರರಾದರೂ ದಂಡಿನೊಡನೆ ಬಂದಾರು, ತನಗೆ ಅಷ್ಟೇ ಬೆಂಬಲ ದೊರಕೀತು ಎಂದಾತ ಆಶಿಸಿದ್ದ. ಅದಲ್ಲದೆ, ವೆಂಕಟೇಶ್ವರನ ಮಹಿಮೆಯಲ್ಲೂ ಅವನಿಗೆ ಅಪಾರ ವಿಶ್ವಾಸವಿತ್ತು. ತನ್ನ ಅಕೃತ್ರಿಮ ಸೇವೆಯಿಂದಲೂ ಬ್ರಾಹ್ಮಣ ಭೋಜನಾದಿಗಳಿಂದಲೂ ಸಂತುಷ್ಟನಾದ ವೆಂಕಟೇಶ್ವರ ತನ್ನನ್ನು ಎಲ್ಲಾ ಸಂಕಟಗಳಿಂದಲೂ ರಕ್ಷಿಸುವನೆಂಬ ಭರವಸೆಯಿತ್ತು. ಓಡಿಹೋಗುವ ವಿಚಾರ? ಛೆ! ಭಾಸ್ಕರರಾಯನ ಕನಸುಮನಸಿನಲ್ಲೂ ಆ ವಿಚಾರ ಒಂದು ಬಾರಿಯೂ ಸುಳಿದಿರಲಿಲ್ಲ.

ಮುನ್ನಾದಿನದ ಸಂಜೆ ರಾಜಶೇಖರನನ್ನು ಬಂಧನದಲ್ಲಿಡಲು ಆಜ್ಞೆ ವಿಧಿಸಿ ಆತ ಸ್ನಾನಕ್ಕೆ ಹೊರಡುತ್ತಿದ್ದಂತೆಯೆ ದೂತರು ಧಾವಿಸಿ ಬಂದು ಇಂಗ್ಲೀಷ್ ಸೈನ್ಯದ ಆಗಮನದ ವಾರ್ತೆ ಬೀರಿದ್ದರು. ನಾಲ್ಕೈದು ಸಾವಿರದ ಸೈನ್ಯ ದೊಡ್ಡ ದೊಡ್ಡ ತೋಪುಗಳೊಡನೆ ಬರುತ್ತಿದ್ದುದು ಗೊತ್ತಾಗುತ್ತಲೂ ಅವನಿಗೆ ದಿಗಿಲಾಗದಿರಲಿಲ್ಲ. ಮಿತ್ರರಿಂದ ಸಹಾಯ ಬರಲು ಇನ್ನೂ ನಾಲ್ಕು ದಿನಗಳವರೆಗಾದರೂ ಕಾಯಬೇಕಾಗಿತ್ತು, ಆ ಸಹಾಯ ಬರುವ ಮುನ್ನವೇ ವೈರಿ ಆಗಮಿಸಿದುದರಿಂದ ಎಲ್ಲರಿಗೂ ಗಾಬರಿಯಾಗುವುದು ಸಹಜವಾಗಿತ್ತು.

"ಮದ್ದು ಗುಂಡಿನ ತಯಾರಿ ಎಲ್ಲಿಯತನಕ ಬಂದಿದೆ ರಾಘೋಬ?" ಎಂದು ತನ್ನ ಸೇನಾಪತಿಯನ್ನು ವಿಚಾರಿಸಿದ್ದ ಭಾಸ್ಕರರಾಯ.

"ಏನೋ ಅಲ್ಪ ಸ್ವಲ್ಪ ಆಗಿದೆ ಹುಜೂರ್."

"ಆರೇಳು ತಿಂಗಳವರೆಗಾದರೂ ಸಾಕಾಗಬಹುದೇ?"

"ಒಂದು ವಾರ ಕೂಡಾ ಸಾಲುವುದಿಲ್ಲ ಸರಕಾರ್. ಆ ಹರಾಮ್‌ಖೋರ್ ಕೃಷ್ಣಾಜಿ ಮತ್ತು ಬನ್ಯಾ ಘಾತ ಮಾಡಿ ಈ ಗತಿಗೆ ತಂದಿಟ್ಟರು."

ಸ್ನಾನ ಸಂಧ್ಯಾವಂದನೆಗಳನ್ನು ಮರೆತು ಭಾಸ್ಕರರಾಯ ತಕ್ಷಣವೇ ಅರಮನೆಯಿಂದ ಹೊರಟು ಕೋಟೆಗೆ ಹೋಗಿ ಮದ್ದಿನಾಗಾರವನ್ನು ಸ್ವತಃ ಸಂದರ್ಶಿಸಿದ, ಗೋಲಂದಾಜನನ್ನು ಬರಮಾಡಿಕೊಂಡು ವಿಚಾರಿಸಿದಾಗ ತೋಫಿನ ಮದ್ದು ಒಂದು ದಿನದಲ್ಲಿಯೆ ಮುಗಿದುಹೋಗುವುದೆಂಬ ಸಂಗತಿ ಗೊತ್ತಾಯಿತು.

"ಇಷ್ಟು ಹೊತ್ತು ಏನು ಮಾಡುತ್ತಿದ್ದಿರಿ? ಮದ್ದು ಯಾಕೆ ತಯಾರ್ಮಾಡಲಿಲ್ಲ?" ಎಂದು ಭಾಸ್ಕರರಾಯ ಗದರಿಸುತ್ತಲೂ ಗೋಲಂದಾಜ ಹೇಳಿದ:

"ಮ್ಯಾನ್‌ಸನ್‌ಸಾಹೇಬನನ್ನು ಕಡಿದುಬಂದಂದಿನಿಂದ ಎಲ್ಲರೂ ಅದೇ ಹಿಗ್ಗಿನಲ್ಲಿ ಮೈಮರೆತು ಮಜಾ ಮಾಡುತ್ತಿದಾರೆ ಸರಕಾರ್. ಮದ್ದು ಗುಂಡಿನ ತಯಾರಿಯ ಕಡೆ ಯಾರಿಗೂ ಲಕ್ಷ್ಯವಿಲ್ಲ."

"ರಾಘೋಪಂತರೂ ಇತ್ತ ಬಂದಿಲ್ಲವೆ?"

"ಇಲ್ಲ ಹುಜೂರ್."

ಭಾಸ್ಕರರಾಯ ತುಟಿ ಕಚ್ಚಿಕೊಂಡು ಕೋಪವನ್ನು ಅದುಮಿ ಹಿಡಿದು ಒಂದು ನಿಮಿಷ ಸುಮ್ಮನಿದ್ದು ಅನಂತರ ಹೇಳಿದ.

"ಇಲ್ಲಿಯತನಕ ಆದದ್ದಾಯಿತು. ಈಗಲಾದರೂ ಮದ್ದಿನ ತಯಾರಿ ರಭಸದಿಂದ ಸುರು ಆಗಲಿ. ನಿನ್ನ ತೋಫಿನ ಹೊಡೆತಕ್ಕೆ ಫಿರಂಗಿಗಳ ತೋಫು ಬಾಯಿ ಮುಚ್ಚಿಕೊಂಡು ಓಡಿಹೋಗುವಂತಾಗಬೇಕು ನೋಡು."

ಗೋಲಂದಾಜ ಯಾಂತ್ರಿಕವಾಗಿ ಕತ್ತು ಕೊಡವಿದ. ಅವನ ಮುಖದಲ್ಲಿ ಮಾತ್ರ ಕೊಂಚವೂ ಉತ್ಸಾಹವಿರಲಿಲ್ಲ.

ಬೆಳಗಾಗುವುದರೊಳಗಾಗಿ ಇಂಗ್ಲೀಷರ ತೋಫುಗಳು ಅಗ್ನಿವೃಷ್ಟಿಗಾರಂಭಿಸಿದುವು. ನರಗುಂದದ ತೋಫುಗಳೂ ಮದ್ದು ಇರುವವರೆಗೆ ಗರ್ಜಿಸುತ್ತಿದ್ದು ಮದ್ದು ತೀರುತ್ತಲೂ ನಿರುಪಾಯವಾಗಿ ಮೌನ ವಹಿಸಿದುವು. ಅದರೊಂದಿಗೆ ನರಗುಂದದ ಪ್ರತಿಭಟನಾಸಾಮರ್ಥ್ಯವೂ ಅದೃಶ್ಯವಾದಂತಾಯಿತು.

ಭಾಸ್ಕರರಾಯ ದೇವಾಲಯಕ್ಕೆ ಹೋಗಿ ತನ್ನ ಕುಲದೇವತೆಯ ದರ್ಶನ ಪಡೆದು ತನ್ನ ಜೋಳಿಗೆ ಬಂದೆರಗಿದ ಪ್ರಸಾದವನ್ನು ನಿವೇದಿಸಿಕೊಂಡು ಅಲ್ಲಿಂದ

ಬಿಡುಗಡೆ ಮಾಡಬೇಕೆಂದು ಬೇಡಿಕೊಂಡು ಕೋಟೆಗೆ ಬಂದ. ಅಷ್ಟರಲ್ಲಿ ಘನ ಘೋರ ಸಂಗ್ರಾಮಕ್ಕಾರಂಭವಾಗಿತ್ತು. ಮದ್ದಿನ ಸಂಗ್ರಹ ತೀರಿಹೋಗಿದ್ದರೂ ಅವನ ದಂಡಾಳುಗಳು ಎದೆಗೆಡದೆ, ಶಕ್ತಿಮೀರಿ ಹೋರಾಡುತ್ತಿದ್ದರು. ಯುದ್ಧಕ್ಕೆ ಹೋಗುವವರಿಗಾಗಿ ಅಡುಗೆಯೂ ಸಿದ್ಧವಾಗಿತ್ತು. ನೂರಾರು ಜನರು ಊಟ ಮಾಡಿ ಯುದ್ಧಕ್ಕೆ ಹೊರಟಿದ್ದರು.

ಕೋಟೆಯನ್ನೇರಿ ಬತೇರಿಯೊಂದರ ಮೇಲೆ ನಿಂತುಕೊಂಡು ಭಾಸ್ಕರರಾಯ ಜಯಾಪಜಯದ ಲಕ್ಷಣಗಳನ್ನು ನಿರೀಕ್ಷಿಸುತ್ತಿದ್ದ. ಮದ್ದು ಗುಂಡುಗಳು ಮುಗಿಯುವವರೆಗೂ ಅವನ ದಂಡಾಳುಗಳು ಶೌರ್ಯದಿಂದ ಕಾದುತ್ತಿದ್ದರು. ಅನಂತರ, ಏರಿಬರುವ ಇಂಗ್ಲೀಷರ ಗುಂಡುಗಳೆದುರು ನರಗುಂದದವರ ಆಟ ನಡೆಯದಾಯಿತು. ಭಾಸ್ಕರರಾಯನ ಸೈನಿಕರು ಅಸಹಾಯರಾಗಿ ನೆಲಕ್ಕುರುಳತೊಡಗಿದರು. ಪ್ರತಿಭಟನಾಶಕ್ತಿ ಕುಗ್ಗಿದಂತೆ ಇಂಗ್ಲೀಷ್ ಸೈನ್ಯ ಮುನ್ನುಗ್ಗಿ ಬರತೊಡಗಿತು. ಗುಂಡಿನ ಮಳೆಯನ್ನೆದುರಿಸಲಾರದೆ ನರಗುಂದದ ಸೈನಿಕರು ಓಡಿಹೋಗಲಾರಂಭಿಸಿದರು.

ಬತೇರಿಯ ಮೇಲೆ ನಿಂತು ಕೆಳಗಿನ ಈ ದೃಶ್ಯವನ್ನುವೀಕ್ಷಿಸುತ್ತಿದ್ದ ಭಾಸ್ಕರ ರಾಯನಿಗೆ ತನಗೆ ಅಪಜಯ ತಪ್ಪದೆಂದು ಹೊಳೆಯುತ್ತಲೂ ಅವನ ಮನಸ್ಸು ಮುಂದಿನ ಪರಿಣಾಮವನ್ನು ಕುರಿತು ಯೋಚಿಸತೊಡಗಿದರು. ಕರ್ನಲ್ ಮ್ಯಾನ್ ಸನ್ನನ ವಧೆ ಮಾಡಿದುದರಿಂದ ತಾನು ಇಂಗ್ಲೀಷರ ದೃಷ್ಟಿಯಲ್ಲಿ ಮಹಾಪರಾಧ ಮಾಡಿದಂತೆಯೆ ಆಗಿತ್ತು. ಈಗ ತಾನು ಅವರ ಕೈಗೆ ಸಿಕ್ಕಿದಲ್ಲಿ ಅವರು ತನ್ನನ್ನು ಹಾಗೆಯೇ ಬಿಡುವುದಿಲ್ಲ. ಮ್ಯಾನ್‌ಸನ್ನನನ್ನು ತಾನು ಕೊಂದಂತೆಯೇ ಅವರೂ ತನ್ನನ್ನು ಕೊಲ್ಲುವರು. ತನ್ನ ಕುಟುಂಬದ ಜನರನ್ನೂ ಅವರು ಹಾಗೆಯೇ ಬಿಡಲಿಕ್ಕಿಲ್ಲ. ಅವರೂ ಕೂಡಾ ಅತ್ಯಂತ ಅವಮಾನಕರವಾದ ಪ್ರಸಂಗಗಳನ್ನೆದುರಿಸಬೇಕಾಗಿ ಬರಬಹುದು. ಈ ಸಂದರ್ಭದಲ್ಲಿ ತಾನು ಏನನ್ನು ಮಾಡಬೇಕು?

ತನ್ನ ಮೃಗಾವಲಿಗೆಂದು ಪಕ್ಕದಲ್ಲಿಯೆ ಇದ್ದ ವಿಷ್ಣುವಿನತ್ತ ಹೊರಳಿ ಭಾಸ್ಕರರಾಯ ಕೇಳಿದ :

"ಏನು ವಿಷ್ಣು, ಹೀಗಾಗಿಹೋಯಿತಲ್ಲ? ಮುಂದೆ ಹ್ಯಾಗೆ?"

ದೊರೆಯ ಮನಸ್ಸಿನಲ್ಲಿ ತಲೆದೋರಿದ ವಿಚಾರಗಳ ಸ್ವರೂಪವೆಂಥದೆಂಬುದು ವಿಷ್ಣುವಿಗಾದರೂ ಹೇಗೆ ತಿಳಿದೀತು? ಸೈನಿಕಸಹಜವಾದ ಸರಳತನದಿಂದ ಆತನೆಂದ :

"ದೇವರ ಮನಸ್ಸಿನಲ್ಲಿದ್ದಂತೆ ಆಗುತ್ತದೆ ಮಹಾರಾಜ್. ಈಗಲೂ ನಾವು ವೈರಿಗಳನ್ನೋಡಿಸಲು ಸಾಧ್ಯವಿದೆ. ನಾವು ರಣರಂಗದಲ್ಲಿಲ್ಲವಾದ್ದರಿಂದ ನಮ್ಮ ಸೈನಿಕರಿಗೆ ಹುರುಪು ಕೊಡಲು ಯಾರೂ ಇಲ್ಲ. ನಾವೂ ಅಲ್ಲಿಗೆ ಹೋಗಿ ಕಾದಾಡುವಾ. ಅಂದರೆ ಯಾರೂ ಓಡಿಹೋಗಲಿಕ್ಕಿಲ್ಲ."

ವಿಷ್ಣುವಿನ ಆ ವೀರಾವೇಶದ ನುಡಿಯಿಂದಲೂ ಭಾಸ್ಕರರಾಯನ ಮನಸ್ಸು ಚೇತರಿಸಿಕೊಳ್ಳಲಿಲ್ಲ. ಗುಂಡುಗಳೆಲ್ಲಾ ತೀರಿದ ಬಳಿಕ ವೈರಿಯನ್ನೆದುರಿಸಿ ಗೆಲ್ಲುವುದು ಅಸಾಧ್ಯವೆಂದೇ ಅವನಿಗೆ ಮನವರಿಕೆಯಾಗಿತ್ತು.

"ನಾವೀಗ ಯುದ್ಧರಂಗಕ್ಕೆ ಹೋಗುವುದರಿಂದಲೂ ಏನೂ ಪ್ರಯೋಜನವಾಗದು ವಿಷ್ಣು. ವೈರಿಗಳ ಕೈಗೆ ಸುಲಭವಾಗಿ ಸಿಗುವ ಇಚ್ಛೆಯಿದ್ದರೆ ಮಾತ್ರ ಅಲ್ಲಿಗೆ ಹೋಗಬೇಕು."

"ಅವರ ಕೈಗೇಕೆ ಸಿಗಬೇಕು ಸರಕಾರ್? ಹೋರಾಡುತ್ತಾ ಹೋರಾಡುತ್ತಾ ಮಡಿದರಾಯಿತು. ಅಪ್ಪಣೆ ಕೊಟ್ಟರೆ ನಾನೂ ಹೋಗಿ ಬರುತ್ತೇನೆ."

"ಉಹೂಂ. ಈಗ ಅದಾವುದೂ ಬೇಡ," ಎಂದು ಭಾಸ್ಕರರಾಯ ಹೇಳುತ್ತಿದ್ದಂತೆಯೆ ಗಾಬರಿಯಿಂದ ಓಡಿಬಂದ ರಾಘೋಬ ಗಡಿಬಿಡಿಯಿಂದ ಮಾತನಾಡಿದ:

"ವೆಂಕಟೇಶ್ವರ ನಮ್ಮ ಕೈ ಬಿಟ್ಟ ಸರಕಾರ್. ನಮ್ಮ ಸೈನಿಕರೆಲ್ಲಾ ಓಡಿಹೋಗುತ್ತಿದ್ದಾರೆ. ಮುಂದೇನು ಮಾಡಬೇಕೆಂಬುದೇ ತಿಳಿಯದಾಗಿದೆ."

"ರಾಮರಾಯರೆಲ್ಲಿದಾರೆ ರಾಘೋಬಾ?"

"ಇಲ್ಲೇ ಇದಾರೆ ಹುಜೂರ್, ಅರಮನೆಯಲ್ಲಿ."

"ನಾವ್ಯಾರೂ ವೈರಿಗಳ ಕೈಗೆ ಸಿಗಬಾರದು ರಾಘೋಬ. ಈಗಿಂದೀಗ ಇಲ್ಲಿಂದ ಹೊರಡುವ ತಯಾರಿ ಮಾಡಿರಿ," ಎಂದು ಹೇಳಿದೊಡನೆ ಭಾಸ್ಕರರಾಯ ಅರಮನೆಗೆ ಹೋಗಿ ತನ್ನ ಹತ್ತಿರ ಇದ್ದ ಮಹತ್ವದ ಕಾಗದಪತ್ರಗಳನ್ನೆಲ್ಲ ಒಟ್ಟುಗೂಡಿಸಿ ಸುಟ್ಟುಹಾಕಿದ.

"ನನ್ನದಂತೂ ಸರ್ವನಾಶವಾದಂತಾಯಿತು ವಿಷ್ಣು. ನನ್ನಿಂದಾಗಿ ನನ್ನ ಮಿತ್ರರೂ ಯಾಕೆ ತೊಂದರೆಪಡಬೇಕು? ನನಗೆ ಸಹಾಯ ಮಾಡುವುದಾಗಿ ಅವರು ಬರೆದಿದ್ದ ಪತ್ರಗಳನ್ನೆಲ್ಲಾ ನಾಶಮಾಡಿದ್ದೇ ಒಳ್ಳೆಯದಾಯ್ತು–ಅಲ್ಲವೆ?"

"ಹೌದು ಸರಕಾರ್."

"ಇನ್ನು ನಾವು ಹೊರಡುವ ತಯಾರಿ ಮಾಡಬೇಕು. ನೀನೂ ತಯಾರಾಗು ವಿಷ್ಣು."

ವಿಷ್ಣುವಿಗೆ ಉಭಯಸಂಕಟಕ್ಕಿಟ್ಟುಕೊಂಡಿತ್ತು. ಶೂರನೂ ಸಮರ ಪ್ರೇಮಿಯೂ ಆದ ಆ ಯುವಕನಿಗೆ ರಣರಂಗದಿಂದ ಓಡಿಹೋಗುವುದೆಂದರೆ ಅತ್ಯಂತ ನಾಚಿಕೆಗೇಡಿನ ಸಂಗತಿಯೆಂದೇ ಅನ್ನಿಸಿತ್ತು. ದೊರೆಯು ಆಜ್ಞೆಯಾದಲ್ಲಿ ಆತ ಆ ಕ್ಷಣವೇ ಯುದ್ಧರಂಗಕ್ಕೆ ಹೋಗಿ ಹೋರಾಡುತ್ತ ಹೋರಾಡುತ್ತ ಸಾಯುವುದಕ್ಕೂ ಸಿದ್ಧನಿದ್ದ. ವೀರೋಚಿತವಾದ ಅಂಥ ಸಾವೇ ಅವನಿಗೆ ಪ್ರಿಯವಾಗಿತ್ತು. ನರಗುಂದದಿಂದ ಪಲಾಯನ ಮಾಡುವುದು? ಆ ವಿಚಾರ ಹೊರಡುತ್ತಲೂ ಲಜ್ಜೆಯಿಂದ ಅವನ ತಲೆ ಬಾಗಿಹೋಗಿತ್ತು.

"ಏನನ್ನುವಿ ವಿಷ್ಣು? ನನ್ನೊಡನೆ ಬರಲು ಇಚ್ಛೆಯಿಲ್ಲವಾದರೆ ಹೇಳು. ಅನುಮಾನ ಪಡಬೇಡ. ನಾನೊಬ್ಬನೇ ಹೊರಟುಹೋಗುತ್ತೇನೆ. ನನ್ನಿಂದಾಗಿ ಬೇರೆ ಯಾರಿಗೂ ತೊಂದರೆಯಾಗುವದು ಬೇಡ."

"ಛೆ. ಛೆ. ತಮ್ಮನ್ನೊಬ್ಬರನ್ನೇ ಇಲ್ಲಿಂದ ಕಳಿಸಲು ತಮ್ಮ ಈ ಸೇವಕರಿಗೆ ಮನಸ್ಸು ಬರುವುದು ಶಕ್ಯವೇ ಸರಕಾರ್? ತಾವಿದ್ದಲ್ಲಿ ನಾನು. ನನ್ನ ದೇಹದಲ್ಲಿ ಜೀವವಿರುವವರೆಗೂ ಮಹಾರಾಜರ ಸೇವೆಗಾಗಿಯೆ ನಾನು ಮೀಸಲು."

"ಹಾಗಾದರೇಕೆ ಹಿಂದು ಮುಂದು ನೋಡುತ್ತಿರುವೆ? ನಾವೀಗ ಒಂದು ಕ್ಷಣವನ್ನೂ ವ್ಯರ್ಥವಾಗಿ ಕಳೆಯುವಂತಿಲ್ಲ."

"ನರಗುಂದವನ್ನು ಬಿಟ್ಟು ಹೋಗುವ ಕಲ್ಪನೆಯೇ ನನ್ನ ಮನಸ್ಸಿಗೆ ಬರದಾಗಿದೆ ಮಹಾರಾಜ್."

"ಮತ್ತೇನು ಮಾಡಬೇಕೆನ್ನುವೆ ಹಾಗಾದರೆ?"

"ಆಗಲೆ ಹೇಳಿದೆನಲ್ಲ ಸರಕಾರ್. ನಾವು ಸ್ವತಃ ರಣಭೂಮಿಗೆ ಹೋಗಿ ಕಾದಾಡಬೇಕು."

ರಣಭೂಮಿಗೆ ಕಾಲಿಡುವ ವಿಚಾರವೇ ಭಾಸ್ಕರರಾಯನಿಗೆ ರುಚಿಸದಂತಾಗಿತ್ತು. ವೈರಿಗಳ ಕೈಯಲ್ಲಿ ಸಿಕ್ಕು ಅವಹೇಳನಕ್ಕೊಳಗಾಗುವ ಅಪ್ರಿಯ ಪ್ರಸಂಗವನ್ನು ತಪ್ಪಿಸಲೆಂದೇ ಆತ ಪಲಾಯನದ ನಿರ್ಧಾರಕ್ಕೆ ಬಂದುದಾಗಿತ್ತು. ಓಡಿಹೋಗಿ ತಲೆ ಮರೆಸಿಕೊಳ್ಳುವುದೇ ಒಳ್ಳೆಯದೆಂದು ರಾಘೋಬನೂ ವಾದಿಸುತ್ತಿದ್ದ. ದಿವಾಣನಾದ ರಾಮರಾಯನಿಗೂ ವಿಜಯದ ಆಸೆಯುಳಿದಿರಲಿಲ್ಲ. ಬಂಡಾಯದ ಗದ್ದಲ ಮುಗಿಯುವವರೆಗೆ ಎಲ್ಲಾದರೂ ಸುರಕ್ಷಿತವಾಗಿರುವುದೇ ಒಳ್ಳೆಯ

ದೆಂದು ಆತನೂ ಹೇಳುತ್ತಿದ್ದ. ಪಲಾಯನ ಯೋಜನೆಯನ್ನು ವಿರೋಧಿಸುತ್ತಿದ್ದವ ನೆಂದರೆ ವಿಷ್ಣುವೊಬ್ಬನೇ.

"ಈಗ ನಾವು ಹುಂಬರಂತೆ ಯುದ್ಧಕ್ಕೆ ಹೋಗಿ ವೈರಿಗಳ ಕೈಗೆ ಸಿಗುವದ ರಲ್ಲಿ ಅರ್ಥವಿಲ್ಲ ವಿಷ್ಣು. ಭಾವನೆಯ ಕೈಯಲ್ಲಿ ಬುದ್ಧಿ ಕೊಡದೆ ನಾವೀಗ ಮುತ್ಸದ್ದಿ ತನದಿಂದ ವರ್ತಿಸಬೇಕಾಗಿದೆ. ಮುಂದೆ ದೇವರು ಕೃಪೆ ಮಾಡಿದರೆ ಮತ್ತೆ ನಮಗೆ ಒಳ್ಳೆಯ ಕಾಲ ಬರಬಹುದು. ಅದಕ್ಕಾಗಿ ಕಾಯಬೇಕು," ಎಂದ ಭಾಸ್ಕರರಾಯ.

ಮತ್ತೆ ವಿಷ್ಣು ವಾದಿಸಲಿಲ್ಲ. ತನ್ನ ವೈಯಕ್ತಿಕ ಇಚ್ಛೆಯನ್ನು ತುಂಬಾ ಕಷ್ಟದಿಂದ ಬಿಗಿಹಿಡಿದು, ರಾಜನನ್ನು ಹಿಂಬಾಲಿಸುವುದೇ ತನ್ನ ಕರ್ತವ್ಯವೆಂದು ಹೇಳಿಕೊಂಡು ಆತ ಹೊರಡುವ ಸಿದ್ಧತೆಗೆ ತೊಡಗಿದ.

ತನ್ನ ತಾಯಿ ಮತ್ತು ಪತ್ನಿಯರ ಬಗೆಗೆ ಯಾವ ವ್ಯವಸ್ಥೆ ಮಾಡ ಬೇಕೆಂಬುದು ಭಾಸ್ಕರರಾಯನಿಗೊಂದು ಸಮಸ್ಯೆಯಾಯಿತು. ಅವರನ್ನು ಅರಮನೆ ಯಲ್ಲಿಯೂ ಬಿಡುವಂತಿರಲಿಲ್ಲ. ತನ್ನ ಜತೆಯಲ್ಲಿಯೂ ಕರೆದೊಯ್ಯುವಂತಿರಲಿಲ್ಲ. ಗುಡ್ಡ, ಬೆಟ್ಟ ಅಲೆಯುತ್ತ ಹೋಗಬೇಕಾದ ಪ್ರಸಂಗ. ಜತೆಯಲ್ಲಿ ಸ್ತ್ರೀಯರಿದ್ದರೆ ಅದೂ ಒಂದು ಆತಂಕವೆ. ಹಾಗಾದರೆ ಅವರನ್ನೆಲ್ಲಿ ಇಡುವುದು?

ಆ ವಿಚಾರ ಚಿಂತಿಸುತ್ತಲೇ ಭಾಸ್ಕರರಾಯ ಅರಮನೆಯ ಒಳಭಾಗಕ್ಕೆ ಬಂದ. ಅಲ್ಲಿ ಅವನ ತಾಯಿ ಯಮುನಾಬಾಯಿಯೂ ಪತ್ನಿ ಸಾವಿತ್ರೀಬಾಯಿಯೂ ಅದೇ ಚಿಂತೆಯಲ್ಲಿಯೆ ,ಮುಳುಗಿ, ಉದ್ವಿಗ್ನ ಮನಸ್ಸಿನಿಂದ ವೆಂಕಟೇಶನನ್ನು ಪ್ರಾರ್ಥಿಸುತ್ತ ಕುಳಿತಿದ್ದರು. ತಮ್ಮ ಸೈನಿಕರು ಓಡಿಬರುತ್ತಿದ್ದ ಸಂಗತಿ ಅವರಿಗೂ ಗೊತ್ತಾಗಿತ್ತು. ಮುಂದೇನಾಗುವುದೆಂಬುದನ್ನು ಊಹಿಸಲು ಸಾಧ್ಯವಿರಲಿಲ್ಲ. ದೇವರಲ್ಲಿ ಮೊರೆಯಿಡುವುದೊಂದೇ ಅವರಿಗುಳಿದ ಉಪಾಯವಾಗಿತ್ತು.

ಭಾಸ್ಕರರಾಯ ಒಳಗೆ ಬರುತ್ತಲೂ ಸಾಧ್ವಿಯಾದ ಸಾವಿತ್ರೀಬಾಯಿ ವಿನಯದಿಂದ ಎದ್ದು ನಿಂತಳು.

"ಅಪ್ಪಾ, ಬಾಬಾ ಸಾಹೇಬ್, ಯುದ್ಧದ ಲಕ್ಷಣ ಹ್ಯಾಗಿದೆ?" ಯಮುನಾ ಬಾಯಿ ಕೇಳಿದಳು.

ದುಃಖದಿಂದ ಕಂಪಿಸುವ ಧ್ವನಿಯಲ್ಲಿ ಭಾಸ್ಕರರಾಯನೆಂದ:

"ಇನ್ನೇನೂ ಆಸೆ ಉಳಿಯಲಿಲ್ಲ ಅವ್ವ. ನಮಗೆ ಅಪಜಯ ಖಂಡಿತ. ಈಗಾಗಲೇ ಇಂಗ್ಲಿಷರು ಒಂದೊಂದೇ ಹೆಜ್ಜೆ ಮುನ್ನುಗ್ಗಿ ಬರುತ್ತಿದ್ದಾರೆ."

ಯಮುನಾಬಾಯಿ ಗಾಬರಿಗೊಂಡಿದ್ದಳಾದರೂ ಈ ಪ್ರಸಂಗದಲ್ಲಿ ಧೃತಿಗೆಡಲಿಲ್ಲ. ಗಂಭೀರ ಸ್ವರದಲ್ಲಿಯೆ ಆಕೆ ಹೇಳಿದಳು :

"ಸೋಲು ಗೆಲವು ಎಲ್ಲಾ ದೈವಾಧೀನ ಬಾಬಾ ಸಾಹೇಬ್. ಅಪಜಯ ಬಂದಿತೆಂದು ನೆಲಹಿಡಿದು ಕೂಡಬಾರದು. ಈಗ ನೀನೇನು ಮಾಡಬೇಕೆಂದಿರುವಿ?"

ಪಲಾಯನದ ವಿಚಾರವನ್ನು ತಾಯಿಯೆದುರು ಪ್ರಸ್ತಾಪಿಸಬೇಕಾದರೆ ಭಾಸ್ಕರರಾಯನಿಗೆ ಬಹಳ ಸಂಕೋಚವಾಯಿತು. ಶೂರ ಪುರುಷನ ಕುವರಿಯಾಗಿ ಜನಿಸಿ ವೀರಾಗ್ರಣಿಯ ಕೈಹಿಡಿದು ತೇಜಸ್ವಿನಿಯಾಗಿ ಬಾಳಿದ ತನ್ನ ತಾಯಿಗೆ ಪಲಾಯನದ ವಿಚಾರ ಅಸಹನೀಯವಾಗುವುದೆಂದು ಅವನಿಗೂ ತಿಳಿದಿತ್ತು. ಓಡಿಹೋಗುವ ಬದಲು ಯುದ್ಧಭೂಮಿಗೆ ಹೋಗಬೇಕೆಂದೇ ಆಕೆಯೂ ಉಪದೇಶಿಸುವ ಸಂಭವವಿತ್ತು.

ಎರಡು ನಿಮಿಷ ತಲೆ ತಗ್ಗಿಸಿ ಕುಳಿತಿದ್ದು ಅನಂತರ ಆತ ಮೆಲ್ಲನೆ ಮಾತನಾಡಿದ :

"ನಮ್ಮಗೆ ಜಯ ದೊರಕುವುದಿಲ್ಲವೆಂದು ಖಚಿತವಾಗಿರುವಾಗ ಈಗ ನಾನು ಯುದ್ಧಕ್ಕೆ ಹೋಗಿ ಇಂಗ್ಲಿಷರ ಕೈಯಲ್ಲಿ ಸಿಗುವುದು ಜಾಣತನದ್ದಲ್ಲ. ಅಲ್ಲವೇನವ್ವಾ? ನಿನಗೇನನಿಸುತ್ತದೆ?"

ಯಮುನಾಬಾಯಿ ಒಡನೆಯೆ ಉತ್ತರವೀಯಲಿಲ್ಲ. ಮಗನು ಕೇಳಿದ ಪ್ರಶ್ನೆಯಿಂದಲೂ ಅವನ ಮಾತಿನ ಧಾಟಿಯಿಂದಲೂ ಅವನ ಮನಸ್ಸಿನಲ್ಲಿದ್ದುದೇನೆಂಬುದು ಆಕೆಗೆ ಅರಿವಾಗಿತ್ತು. ಯುದ್ಧ ಮಾಡುವ ಉತ್ಸಾಹವೇ ತನ್ನ ಮಗನಿಗಿಲ್ಲವೆಂಬುದು ವ್ಯಕ್ತವಾಗುತ್ತಲೂ ಆ ಕೆಚ್ಚೆದೆಯ ಮಹಿಳೆಗೆ ಅತ್ಯಂತ ವ್ಯಸನವಾಯಿತು. ಯುದ್ಧ ಮಾಡುತ್ತ ಮಾಡುತ್ತ ಆತ ಮಡಿದುಹೋಗಿದ್ದರೂ ಆಕೆಗೆ ಅಷ್ಟು ಸಂತಾಪವಾಗುತ್ತಿರಲಿಲ್ಲ.

"ಅಂದರೆ? ಯುದ್ಧವನ್ನು ಇಲ್ಲಿಗೇ ನಿಲ್ಲಿಸಿ ನೀನು ಎಲ್ಲಿಗಾದರೂ ಹೊರಟು ಬಿಡುವ ವಿಚಾರವೋ ಏನು?"

"ಹೌದು ಅವ್ವ. ಬೇರಾವ ಉಪಾಯವೂ ಇಲ್ಲ. ವೈರಿಯ ಕೈಯಲ್ಲಿ ಸಿಕ್ಕು ಅವಮಾನ ಸಹಿಸುವುದಕ್ಕಿಂತ ಎಲ್ಲಾದರೂ ಓಡಿಹೋಗುವುದೇ ಮೇಲಲ್ಲವೆ?"

"ಸರಿ. ನಮ್ಮ ವಿಚಾರವೇನು? ನಮ್ಮದೇನು ವ್ಯವಸ್ಥೆ ಮಾಡುವವ?"

"ಅದೇ ನನಗೆ ತಿಳಿಯದಾಗಿದೆ. ನಾನೀಗ ಪಾರಾಗಿ ಹೋಗಬೇಕಾದರೆ

ಅಡ್ಡಹಾದಿ ಹಿಡಿದು ಗುಡ್ಡಗಾಡಿನಲ್ಲಿ ಕಲ್ಲು ಮುಳ್ಳು ತುಳಿಯುತ್ತಾ ಹೋಗ ಬೇಕಾಗುವುದು. ಸ್ತ್ರೀಯರಾದ ನಿಮ್ಮಿಂದ ಅಂಥ ಪ್ರವಾಸ ಶಕ್ಯವಾಗದು. ಅದಕ್ಕಾಗಿ ನೀವೇ ನಿಮಗೆ ಸರಿಯೆನಿಸಿದ ಮಾರ್ಗ ಹುಡುಕಿಕೊಳ್ಳಬೇಕು."

ಅಪಜಯದಿಂದ ಕಂಗೆಟ್ಟು ತನ್ನ ಮಗ ವಿವೇಕವನ್ನೂ ಕಳೆದುಕೊಂಡಿರುವ ನೇನೊ ಎಂದುಕೊಂಡು ಯಮುನಾಬಾಯಿ ಮತ್ತಷ್ಟು ವ್ಯಥಿತಳಾದಳು. ತಮ್ಮ ಮಾರ್ಗವನ್ನು ತಾವೇ ಹುಡುಕಿಕೊಳ್ಳಬೇಕಂತೆ! ಮಗನಾದವನು ತಾಯಿಗೆ, ಪತಿಯಾದವನು ಪತ್ನಿಗೆ ಹೇಳುವ ಮಾತೇ ಇವು!

"ಎಂಥಾ ವಿಚಿತ್ರ ಮಾತು ಆಡುತ್ತಿರುವಿಯಲ್ಲ ಬಾಬಾ ಸಾಹೇಬ್? ನಮ್ಮನ್ನು ಹೀಗೆ ಬಿಟ್ಟು ನಿನ್ನಷ್ಟಕ್ಕೆ ನೀನು ಹೊರಟು ಹೋಗುವವನೋ ಏನು? ಹೆಂಗಸರಾದ ನಾವು ಮುಂದೆ ಏನು ಮಾಡೋಣ?"

"ನನಗಂತೂ ಈಗ ಒಂದೂ ಹೊಳೆಯದಾಗಿದೆ ಅವ್ವಾ. ನನ್ನ ನಿಮ್ಮ ವಿಯೋಗವಾಗುವದಂತೂ ನಿಶ್ಚಿತ. ವೈರಿಗಳ ಕೈಗೆ ನಾನೂ ಸಿಗಬಾರದು. ನೀವೂ ಸಿಗಬಾರದು. ನಮ್ಮ ಗೌರವವನ್ನೂ ಜೀವಗಳನ್ನೂ ಉಳಿಸಿಕೊಂಡು ತಲೆ ಮರೆಸಿ ಕೊಳ್ಳುವದೇ ಒಳ್ಳೆಯದು. ವೆಂಕಟೇಶನು ಯಾವುದಾದರೂ ದಾರಿ ತೋರಿಸ ಬಹುದು. ಅದನ್ನನುಸರಿಸಿ ಹೊರಟುಹೋಗಬೇಕು. ಅರಣ್ಯದಲ್ಲಿ ಹಾದುಹೋಗು ವಾಗ ಹಿಂಸ್ರಪಶುಗಳು ನಮ್ಮನ್ನು ಮುರಿದು ತಿಂದರೂ ಪರವಿಲ್ಲ. ವೈರಿಗಳಿಂದ ಅವಮಾನ ಮಾಡಿಸಿಕೊಳ್ಳುವುದಕ್ಕಿಂತ ಇದೇ ಮೇಲು."

"ನೀನನ್ನುವದೇನೋ ನಿಜ. ಆದರೆ, ನಮ್ಮನ್ನು ಬಿಟ್ಟುಹೋಗುವ ಯೋಚನೆ ಯಾಕಪ್ಪಾ ಬಾಬಾ ಸಾಹೇಬ್? ನಾವೂ ನಿನ್ನ ಸಂಗಡವೇ ಬರುವೆವು. ನಿನಗೆ ಬಂದ ಸಂಕಟ ನಮಗೂ ಬರುವುದು, ಅಷ್ಟೆ. ನಾವು ಅದನ್ನೆಲ್ಲಾ ಎದುರಿಸಲು ಸಿದ್ಧರಿದ್ದೇವೆ. ಯಾಕೆ ಸಾವಿತ್ರೀಬಾಯಿ, ನೀನೇನನ್ನುವಿ?"

"ಇವರು ನಮ್ಮನ್ನು ಬಿಟ್ಟು ಹೋಗುವ ಮಾತನ್ನು ಕೇಳಿದಾಗಿನಿಂದ ನನ್ನ ಜೀವದಲ್ಲಿ ಜೀವವಿಲ್ಲದಂತಾಗಿದೆ ಅತ್ತೆಯವರೆ."

"ಕೇಳಿದಿಯಾ ಬಾಬಾ ಸಾಹೇಬ್?"

"ಬಿಟ್ಟು ಹೊರಡದೆ ಬೇರೆ ಹಾದಿಯಿಲ್ಲ ಅವ್ವಾ. ಈಗ ಹೆಚ್ಚು ಮಾತಾಡಲು ಕೂಡಾ ಸಮಯವಿಲ್ಲ. ನಿಮ್ಮ ಜೀವ, ನಿಮ್ಮ ಧರ್ಮ, ನಿಮ್ಮ ಶೀಲ ಉಳಿಸಿಕೊಳ್ಳಬೇಕೆಂಬ ಅಪೇಕ್ಷೆಯಿದ್ದರೆ ಈಗಿಂದೀಗ ಎದ್ದು ನಿಮಗೆ ಸರಿಕಂಡ ಹಾದಿ ಹಿಡಿದು ಹೊರಡಬೇಕು."

ಪತಿಯ ಮುಖದಿಂದ ಅಂಥ ಸ್ಪಷ್ಟ ಮಾತು ಹೊರಡುತ್ತಲೂ ಸಾಧ್ವೀ ಮಣಿಯಾದ ಸಾವಿತ್ರೀಬಾಯಿ ಹತಾಶಳಾಗಿ,

"ಅಯ್ಯೋ ದೇವರೇ, ವೆಂಕಟೇಶಾ, ಎಂಥಾ ಹೊತ್ತು ತಂದೆಯಪ್ಪಾ! ನಾನೇನು ತಪ್ಪು ಮಾಡಿದ್ದೆ ? ಪೂರ್ವಜನ್ಮದಲ್ಲಿ ನಾನಾವ ಅಪರಾಧ ಮಾಡಿದ್ದೆ ನೆಂದು ನನಗೀಗ ಈ ಶಿಕ್ಷೆ?" ಎಂದು ಹಲುಬುತ್ತಾ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಯಮುನಾಬಾಯಿಗೂ ಅಳುವುಕ್ಕಿ ಬಂದಿತ್ತು. ಆದರೂ ಆಕೆ ಅದನ್ನು ನುಂಗಿಕೊಂಡು ಕೇಳಿದಳು :

"ಅಪ್ಪಾ, ಬಾಬಾಸಾಹೇಬ್, ಸಾಂಗಲಿ ಮಿರಜ ಕೊಲ್ಲಾಪುರಗಳ ರಾಜರು ನಿನ್ನ ಸಹಾಯಕ್ಕೆ ಬರುವವರಿದ್ದರಲ್ಲ. ಅದೇನಾಯಿತು ?"

"ಅವರು ಬರಲು ಇನ್ನೂ ನಾಲ್ಕು ದಿನ ಬೇಕು. ಅಷ್ಟರಲ್ಲಿಯೇ ಇಂಗ್ಲಿಷರ ಸೈನ್ಯ ಬಂದು ನಮ್ಮ ಲೆಕ್ಕವೆಲ್ಲಾ ಕೆಟ್ಟುಹೋಯಿತು. ನಮ್ಮ ಮಿತ್ರರು ಸಹಾಯಕ್ಕೆ ಬರುವವರೆಗಾದರೂ ನಾವು ಹೇಗೋ ತಡೆಹಿಡಿಯಬಹುದಾಗಿತ್ತು. ಆದರೆ, ದುರ್ದೈವದಿಂದ ನಮ್ಮಲ್ಲಿದ್ದ ಮದ್ದಿನ ಸಂಗ್ರಹವೂ ಆ ನೀಚ ಫಿತೂರಿ ಗಳಿಂದ ನಾಶವಾಯಿತು. ಅವರಿಂದಲೇ ನಮಗೆ ಅಪಜಯವೊದಗಿತು. ನಮ್ಮ ಜಾತಿಯವರೇ ಆದ ಆ ನಾಯಿಗಳು ನಮ್ಮ ಉಪ್ಪು ಉಂಡು ನಮ್ಮ ಮೇಲೇ ತಿರುಗಿಬಿದ್ದರು. ನಮ್ಮ ಎಷ್ಟೋ ಗುಪ್ತ ಸಂಗತಿಗಳನ್ನೂ ಅವರು ಇಂಗ್ಲಿಷರಿಗೆ ತಿಳಿಸಿಬಿಟ್ಟರು. ಅದಕ್ಕಾಗಿಯೆ ನಾನು ಅನ್ನುವದು–ಈಗ ನಾವು ಒಬ್ಬರೊಬ್ಬರ ವಿಚಾರ ಮಾಡುತ್ತಾ ವೇಳೆಗಳೆಯುವಂತಿಲ್ಲ. ನಾನಂತೂ ಓಡಿಹೋಗಲು ನಿರ್ಧರಿಸಿದ್ದೇನೆ. ನಿಮ್ಮನ್ನು ಕರೆದೊಯ್ಯಲು ಈಗ ಅನುಕೂಲವಿಲ್ಲ. ನನ್ನನ್ನು ತಡೆಯಬೇಡಿರಿ. ನಿಮಗೆ ಉಚಿತವೆಂದು ತೋರಿದ ಮಾರ್ಗವನ್ನು ನೀವು ಅನುಸರಿಸಿರಿ."

"ನಾವೆಲ್ಲಿಗೆ ಹೋಗೋಣ ಬಾಬಾಸಾಹೇಬ್ ?"

"ಅದನ್ನು ನಾನು ಹೇಳಲಾರೆ ಅವ್ವಾ. ಅಂತೂ ನೀವು ಇಲ್ಲಿಂದ ಈಗಿಂದೀಗಲೇ ಹೊರಬಿದ್ದು ಹೋಗುವುದಂತೂ ಅವಶ್ಯ. ಮುಂದೆ ನಿಮಗೆ ಯೋಗ್ಯವೆನಿಸಿದಂತೆ ಮಾಡಿರಿ. ಅವ್ವಾ, ನೀನೂ ತಿಳಿದವಳು. ರಾಜಮನೆತನದ ಸ್ತ್ರೀಯರಿಗೆ ಮಾನವೇ ಭೂಷಣವೆಂಬುದನ್ನು ನಿನಗೆ ಹೇಳಬೇಕಾಗಿಲ್ಲ. ಇಲ್ಲೇ ಹೆಚ್ಚು ಹೊತ್ತು ಚಿಂತಿಸುತ್ತಾ ಕುಳಿತಿರುವಂತೆಯೂ ಇಲ್ಲ. ವೈರಿಗಳು ಯಾವಾಗ ಕೋಟೆಯಲ್ಲಿ ಪ್ರವೇಶಿಸಬಹುದೆಂಬುದನ್ನು ಯಾರೂ ಊಹಿಸುವಂತಿಲ್ಲ. ನೀವು

ಅವರ ಕೈಯಲ್ಲಿ ಸಿಕ್ಕರೆ ನಮ್ಮ ಪರಿವಾರಕ್ಕೇ ಅಳಿಸಲಾಗದ ಕಲಂಕ ಹತ್ತುವುದು. ಅದಕ್ಕೇ ಕೂಡಲೇ ಎದ್ದು ಹೊರಡಬೇಕೆಂದು ನಾನು ಹೇಳುವುದು. ನನಗೂ ಹೊರಡಲು ಅಪ್ಪಣೆ ಕೊಡು. ಇದೇ ನನ್ನ ನಿನ್ನ ಕಡೆಯ ಭೇಟಿ," ಎನ್ನುತ್ತಾ ಭಾಸ್ಕರರಾಯ ತಾಯಿಯ ಪಾದಗಳ ಮೇಲೆ ಮಸ್ತಕವಿಟ್ಟು ನಮಸ್ಕರಿಸಿದ.

ಯಮುನಾಬಾಯಿಯ ಕತ್ತು ಉಬ್ಬಿ ಬಂದಿತು. ಕಣ್ಣುಗಳಿಂದ ಕಂಬನಿಗಳುದುರುತ್ತಿರಲು ಆಕೆ ತನ್ನ ಮಗನನ್ನು ಎಬ್ಬಿಸಿ ಎದೆಗವಚಿಕೊಂಡಳು. ಅವನು ಅಲ್ಲಿಂದ ಹೊರಡಲು ಅನುಮತಿಯೀಯುವುದೇ ಈ ಪ್ರಸಂಗದಲ್ಲಿ ಸರಿಯಾದ ಕ್ರಮವೆಂದು ಆಕೆಗೂ ಮನದಟ್ಟಾಯಿತು.

ಮಗನ ಮಸ್ತಕದ ಮೇಲೆ ಅಕ್ಕರತೆಯಿಂದ ಕೈಯಾಡಿಸುತ್ತ ಆಕೆ ಹೇಳಿದಳು :

"ಆಗಲಿ ಮಗೂ, ನೀನು ಹೊರಡು. ದೇವರು ನಿನ್ನನ್ನು ಕಾಪಾಡಲಿ. ನಾವೂ ಹೊರಡುವೆವು. ನಮಗೆ ಯೋಗ್ಯ ದಾರಿ ತೋರಿಸುವ ಭಾರ ಆ ವೆಂಕಟೇಶನ ಮೇಲೇ ಇದೆ."

"ಅವ್ವಾ, ನಿಮ್ಮನ್ನು ಬಿಟ್ಟು ಹೋಗಲು ಮನಸ್ಸಿಲ್ಲ. ಆದರೂ ಬೇರೆ ಉಪಾಯವಿಲ್ಲವೆಂದು ಹೊರಡುತ್ತಿದೇನೆ. ನನ್ನನ್ನು ಕ್ಷಮಿಸು," ಎಂದು ನುಡಿದು ಭಾಸ್ಕರರಾಯ ತನ್ನ ಪತ್ನಿಯ ಕಡೆ ಹೊರಳಿ ಹೇಳಿದ : "ಅವ್ವನು ಹೇಳಿದಂತೆ ಮಾಡು ಸಾವಿತ್ರೀ. ನಾನು ಹೋಗಿ ಬರುವೆ."

ಅದುವರೆಗೆ ಅಳುತ್ತಳುತ್ತ ದೂರದಲ್ಲಿಯೆ ನಿಂತಿದ್ದ ಸಾವಿತ್ರೀಬಾಯಿ ಆ ಕೊನೆಯ ಗಳಿಗೆಯಲ್ಲಿ ಧಾವಿಸಿ ಬಂದು ಪತಿಯ ಚರಣಗಳ ಮೇಲುರುಳಿದಳು, "ನನ್ನನ್ನು ಹೀಗೆ ಬಿಟ್ಟು ಹೋಗಬೇಡಿರಿ. ನಿಮ್ಮ ಕೈಯಿಂದಲೇ ನನ್ನನ್ನು ಕೊಂದು ಹೋಗಿರಿ," ಎಂದು ಹೇಳುತ್ತಾ ಪತಿಯ ಪಾದಗಳನ್ನು ಕಂಬನಿಗಳಿಂದ ತೋಯಿಸತೊಡಗಿದಳು.

ಭಾಸ್ಕರರಾಯ ದಿಙ್ಮೂಢನಂತಾಗಿ ನಿಂತುಕೊಂಡ. ಪತ್ನಿಯನ್ನು ಹೇಗೆ ಸಂತೈಸಬೇಕೆಂಬುದು ಹೊಳೆಯದಂತಾಯಿತು. ತಾಯಿಯನ್ನೊಪ್ಪಿಸುವುದಕ್ಕಿಂತ ಪತ್ನಿಯನ್ನೊಪ್ಪಿಸುವುದು ಕಠಿಣವೆಂಬುದಂತೂ ಸ್ಪಷ್ಟವಾಗಿತ್ತು.

ನಾಲ್ಕು ನಿಮಿಷ ಸ್ತಬ್ಧವಾಗಿದ್ದು ಅನಂತರ ಭಾಸ್ಕರರಾಯ ಹೇಳಿದ : "ಸಾವಿತ್ರೀ, ರಾಜಪತ್ನಿಯಾದ ನೀನು ಸಾಧಾರಣ ಹೆಂಗಸರಂತೆ ವರ್ತಿಸುವುದು ಸರಿಯೆ ? ಹೀಗೆ ನೀನು ನನ್ನನ್ನು ತಡೆದು ನಿಲ್ಲಿಸಿದರೆ ನಾವೆಲ್ಲರೂ ವೈರಿಗಳ

ಕೈಯಲ್ಲಿ ಸಿಗುವ ಪ್ರಸಂಗ ಬಂದೀತು. ಅವರ ಕೈಯಲ್ಲಿ ಸಿಕ್ಕು ಪರಿಪರಿಯ ಅವಮಾನಕ್ಕೊಳಗಾಗುವುದಕ್ಕಿಂತ ಸಾವೀಗ ಒಬ್ಬರನ್ನೊಬ್ಬರು ಅಗಲಿ ಹೋಗುವುದೇ ಮೇಲೆಂದು ನಿನಗೂ ಅನ್ನಿಸಬಹುದು. ವಿಚಾರ ಮಾಡಿ ನೋಡು. ನೀನೇನು ಅಜ್ಞಾನಿಯಲ್ಲ. ವಯಸ್ಕಳು. ಪ್ರಪಂಚದ ಧರ್ಮ ತಿಳಿದವಳು...."

"ತನ್ನ ಪತಿದೇವರು ಎಲ್ಲಿರುವರೊ ಅಲ್ಲಿಯೇ ಇರಬೇಕೆಂದು ಧರ್ಮವೂ ಹೇಳುತ್ತದೆ," ಎಂದು ಬಿಕ್ಕುತ್ತ ಬಿಕ್ಕುತ್ತಲೇ ಸಾವಿತ್ರಿ ಹೇಳಿದಳು.

"ನಿಜ. ಇಲ್ಲವೆಂದು ಯಾರೆಂದರು ? ಆದರೆ ಪತ್ನಿಯೂ ಪತಿಯ ಜತೆಯಲ್ಲಿ ಹೊರಡುವುದರಿಂದ ಪತಿಯ ಜೀವಕ್ಕೆ ಗಂಡಾಂತರವೊದಗುವಂತಿದ್ದರೆ ಪತಿವ್ರತೆಯಾದವಳು ಹಾಗೆ ಹೊರಡಬಾರದೆಂದೂ ಧರ್ಮ ಹೇಳುತ್ತದೆ. ಹೌದೋ ಅಲ್ಲವೋ ?" ಎಂದು ಹೇಳುತ್ತ ಭಾಸ್ಕರರಾಯ ಪತ್ನಿಯ ಹಿಡಿತದಿಂದ ತನ್ನ ಕಾಲುಗಳನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದ. ಆದರಾಕೆ ಅವುಗಳನ್ನು ಬಿಡದೆ ಇನ್ನಷ್ಟು ಗಟ್ಟಿಯಾಗಿ ಹಿಡಿದುಕೊಂಡಳು.

"ನಾನಂತೂ ನಿಮ್ಮನ್ನು ಬಿಟ್ಟು ಅರೆಗಳಿಗೆಯೂ ಇರಲಾರೆ. ನೀವು ಹೋಗುವುದೇ ಆದರೆ ಮೊದಲು ನಿಮ್ಮ ಕೈಯಿಂದಲೇ ನನ್ನನ್ನು ಸ್ವರ್ಗಕ್ಕೆ ಕಳಿಸಿರಿ. ನಿಮ್ಮನ್ನಗಲಿ ಇರುವುದಕ್ಕಿಂತ ಮರಣವೇ ಮೇಲು."

ಪತ್ನಿಯ ಆ ಮಾತು ಭಾಸ್ಕರರಾಯನ ಎದೆಯನ್ನು ಕರಗಿಸಿತು. ಅವನ ಮೈ ನವಿರೆದ್ದಿತು. ತನ್ನ ಕೈಯಿಂದಲೇ ಅವಳನ್ನು ಸ್ವರ್ಗಕ್ಕೆ ಕಳಿಸುವುದು ? ಅಂಥ ಕ್ರೂರಕೃತ್ಯ ತನ್ನ ಕೈಯಿಂದ ಎಂದಾದರೂ ಆಗಬಹುದೇ ?

"ಪ್ರಿಯೆ, ಸಾವಿತ್ರಿ, ನೀನು ಮತ್ತೆ ಹಟ ಹಿಡಿಯಬಾರದು. ಈಗ ನಾನು ಹೇಳುವಂತೆ ಕೇಳುವುದರಲ್ಲೇ ನಮ್ಮೆಲ್ಲರ ಕಲ್ಯಾಣವೂ ಉಂಟು. ವೆಂಕಟೇಶ ಮನಸು ಮಾಡಿದರೆ ಮತ್ತೆ ನಮ್ಮೆಲ್ಲರನ್ನೂ ಒಟ್ಟುಗೂಡಿಸಬಹುದು. ಅದುವರೆಗೂ ಅಗಲಿರುವುದರಲ್ಲೇ ಹಿತವುಂಟು."

"ನಿಮ್ಮನ್ನು ಬಿಟ್ಟು ನನಗೆ ಇನ್ನಾವ ಹಿತವೂ ಬೇಡ. ನಿಮ್ಮ ಸಂಗಡ ಕರೆದೊಯ್ಯುವದು ಸಾಧ್ಯವೇ ಇಲ್ಲದಿದ್ದರೆ ಇಲ್ಲೇ ನನ್ನನ್ನು ತೀರಿಸಿಬಿಟ್ಟು ಹೋಗಿರಿ. ಅದರಿಂದ ನಿಮಗೂ ಒಂದು ಚಿಂತೆ ತಪ್ಪುವುದು. ನನ್ನ ಗತಿ ಏನಾಯಿತೋ ಎಂದು ನೀವು ಮತ್ತೆ ಮತ್ತೆ ವಿವಂಚನೆಗೊಳಗಾಗುವುದೂ ತಪ್ಪುವುದು."

ಸೊಸೆಯ ಮಾತು ಯಮುನಾಬಾಯಿಗೂ ಸಮಂಜಸವಾಗಿ ತೋರಿತು.

ಅಬಲೆಯರಾದ ತಾವಿಬ್ಬರೂ ಅಲ್ಲಿ ಇಲ್ಲಿ ಅಲೆಯುವುದಕ್ಕಿಂತ ಈಗಲೇ ಮರಣ ವನ್ನಪ್ಪಿಕೊಳ್ಳುವುದೇ ಒಳ್ಳೆಯದೆಂದು ಅನಿಸಿತು. ಹಾಗೆ ಮಾಡಿದುದೇ ಆದರೆ ಮಾನಾಪಮಾನಗಳ ಸಮಸ್ಯೆಯೇ ಪರಿಹಾರವಾಗುವುದು. ವೈರಿಗಳ ಕೈಗೆ ಸಿಕ್ಕಿ ಬೀಳುವ ಪ್ರಸಂಗವೂ ಉದ್ಭವಿಸಲಾರದು.

"ಸಾವಿತ್ರಿಬಾಯಿ ಹೇಳಿದಂತೆಯೇ ಮಾಡು ಬಾಬಾಸಾಹೇಬ್. ಅದೇ ಈ ಸಮಯದಲ್ಲಿ ಯೋಗ್ಯವಾದದ್ದು."

"ಅವ್ವಾ, ನೀನೂ ಈ ಹುಚ್ಚಿಯಂತೆಯೇ ಮಾತಾಡುವಿಯಲ್ಲ!"

"ಊಹೂಂ. ಇದರಲ್ಲೇನು ಹುಚ್ಚು ಇದೆ ಬಾಬಾಸಾಹೇಬ್? ಹಿಂದಕ್ಕೆ ನಮ್ಮ ದೇಶದಲ್ಲಿ ಇಂಥ ಪ್ರಸಂಗಗಳು ಬಂದಾಗ ರಜಪೂತರು ತಮ್ಮ ಕುಟುಂಬ ದವರ ವ್ಯವಸ್ಥೆ ಹೇಗೆ ಮಾಡುತ್ತಿದ್ದರೋ ಹಾಗೆ ನೀನೂ ಮಾಡಬಾರದೇಕೆ?"

ರಜಪೂತರು ಮಾಡುತ್ತಿದ್ದ ಆ ವ್ಯವಸ್ಥೆಯ ನೆನಪು ಬಂದ ಮಾತ್ರಕ್ಕೇ ಭಾಸ್ಕರರಾಯನ ಮೈಮೇಲಿನ ರೋಮಗಳು ನಿಮಿರಿನಿಂತವು. ಅವನ ಹೃದಯ ಕ್ರಿಯೆಯೂ ಕ್ಷಣಕಾಲ ತಡೆದು ನಿಂತಂತಾಯಿತು.

"ಅವ್ವಾ, ಆ ಕ್ರೂರ ನಿರ್ದಯ ರಜಪೂತರಿಗೂ ನಮಗೂ ಎಲ್ಲಿಯ ಹೋಲಿಕೆ? ಅವರು ತಮ್ಮ ಹೆಂಡರು ಮಕ್ಕಳನ್ನು ಚಿತೆಯಲ್ಲಿ ಹಾಕಿ ಕೊಂದು, ಆಮೇಲೆ ಸೂತಕದ ಹಳದಿಬಟ್ಟೆ ತೊಟ್ಟು ಸಾಯುವುದಕ್ಕಾಗಿಯೆ ರಣರಂಗಕ್ಕೆ ಹೋಗುತ್ತಿದ್ದರು. ಅಂಥ ನಿಕರದ ಸ್ಥಿತಿಯೂ ನಮಗೆ ಬಂದಿಲ್ಲ. ನಾವು ಅವರಂಥ ಕಲ್ಲೆದೆಯ ಕಟುಕರೂ ಅಲ್ಲ. ಇಲ್ಲಿಂದ ಓಡಿಹೋದ ನಂತರ ನಮಗೆ ಮತ್ತೆ ಒಳ್ಳೆಯ ಸ್ಥಿತಿ ಬರುವುದೆಂದು ಹೇಳಲಾಗದಿದ್ದರೂ ರಜಪೂತರಂಥ ನಿರ್ದಯದ ಕೃತ್ಯ ಮಾತ್ರ ನಮ್ಮಿಂದಾಗದು. ಕೋಮಲ ಮನಸ್ಸಿನ ಬ್ರಾಹ್ಮಣರಾದ ನಾವು ಯುಕ್ತಿ ಪ್ರಯುಕ್ತಿಗಳಿಂದ ಮಾತ್ರ ಕಾರ್ಯ ಸಾಧಿಸುವವರು. ರಜಪೂತರಂಥ ಘೋರಕರ್ಮ ಮಾಡಿದರೆ ರೌರವ ನರಕ ತಪ್ಪಲಾರದು. ನಿಮ್ಮನ್ನು ಬೆಂಕಿಯ ಬಾಯಿಗೆ ಬಲಿಕೊಡುವ ವಿಚಾರವನ್ನೂ ನಾನು ಸಹಿಸಲಾರೆ. ದಯಮಾಡಿ ಅಂಥ ವಿಚಾರವನ್ನು ತೆಗೆದುಹಾಕಿ ನನಗೀಗ ಹೋಗಲು ಅನುಮತಿ ಕೊಡಿರಿ," ಎಂದು ಹೇಳಿ ಭಾಸ್ಕರರಾಯ ಮತ್ತೊಂದು ಬಾರಿ ತಾಯಿಗೆ ವಂದಿಸಿದ.

ಯಮುನಾಬಾಯಿ ಮತ್ತೆ ಮಾತನಾಡಲಿಲ್ಲ. ಹೊರಟು ನಿಂತ ಪತಿಯನ್ನು ಕಡೆಯ ಬಾರಿಗೆ ನೋಡುತ್ತ ಸಾವಿತ್ರಿಬಾಯಿಯೆಂದಳು:

"ಆಯಿತು. ನಿಮ್ಮ ಅಪ್ಪಣೆಯಂತೆಯೆ ನಡೆದುಕೊಳ್ಳುವೆ. ಅಗ್ನಿಸಾಕ್ಷಿ

ಯಾಗಿ ನನ್ನ ಕೈ ಹಿಡಿದು ಇಷ್ಟು ವರ್ಷ ಪ್ರೀತಿಯಿಂದ ನಡಸಿಕೊಂಡು ಬಂದಿರಿ. ನಾನಾದರೂ ತಮ್ಮ ಚರಣಸೇವೆಯಲ್ಲಿಯೇ ಆಯುಷ್ಯ ಕಳೆದೆ. ಈಗ ದೇವರು ನನ್ನ ಪಾಲಿಗೆ ದುಃಖದ ದಿನಗಳನ್ನು ಕಳಿಸಿದ್ದಾನೆ. ಉಪಾಯವಿಲ್ಲ. ನನ್ನ ಚಿಂತೆಯನ್ನು ಬಿಟ್ಟು ತಾವು ಹೊರಡಬಹುದು."

ಅಷ್ಟು ಹೇಳಿ ಅವಳು ಮತ್ತೆ ತನ್ನ ಪತಿಯ ಪಾದಗಳ ಮೇಲೆ ಹಣೆಯಿಟ್ಟು ವಂದಿಸಿದಳು.

ಪ್ರೀತಿಯ ಪತ್ನಿಯನ್ನು ಮೇಲಕ್ಕೆಬ್ಬಿಸಿ ಭಾಸ್ಕರರಾಯ ಒಂದು ಕ್ಷಣ ಅವಳನ್ನು ದಿಟ್ಟಿಸುತ್ತ ನಿಂತಿದ್ದ. ಅವಳೊಡನೆ ಕಳೆದ ರಸನಿಮಿಷಗಳು ಅವನ ನೆನಪಿನ ಪಟಲದ ಮೇಲೆ ಮೂಡಿ ಮರೆಯಾದುವು. ತನ್ನ ಕೈ ಹಿಡಿದು ಇಲ್ಲಿಗೆ ಬಂದಂದಿನಿಂದ ಒಂದು ಬಾರಿಯೂ ಅವಳು ತನ್ನೊಡನೆ ಜಗಳವಾಡಿರಲಿಲ್ಲ, ತನಗೆ ಅಸಂತೋಷವಾಗುವಂತೆ ವರ್ತಿಸಿರಲಿಲ್ಲ. ಪತಿಯೇ ಪರದೈವ ಎಂಬ ನುಡಿಯನ್ನು ನಂಬಿ ಅದರಂತೆ ನಡೆದುಕೊಂಡಿದ್ದಳು. ತಾನೂ ಕೂಡಾ ಅವಳನ್ನು ಅತ್ಯಂತ ಪ್ರೀತಿಯಿಂದ ನೋಡಿಕೊಂಡುದುದಾಗಿತ್ತು. ಅವಳಲ್ಲಿ ಮಕ್ಕಳಾಗದಿದ್ದಾಗಲೂ ಅವಳ ಮೇಲೆ ಇನ್ನೊಬ್ಬಳನ್ನು ವಿವಾಹವಾಗಲು ಮನಸ್ಸು ಮಾಡಿರಲಿಲ್ಲ. ಇತರ ರಾಜರಂತೆ ನೂರಾರು ಸ್ತ್ರೀಯರ ಜನಾನಾ ನಿರ್ಮಿಸುವ ರಸಿಕತನಕ್ಕೂ ತಾನು ತೊಡಗಿರಲಿಲ್ಲ. ಮಲಿಕಾಳಂಥ ಒಬ್ಬಿಬ್ಬರು ವಾರಾಂಗನೆಯರನ್ನು ಹೊರತು ಪಡಿಸಿದರೆ ಬೇರಾವ ಸ್ತ್ರೀಯರೂ ತನ್ನ ಚಿತ್ತ ಸೆಳೆಯಲು ಸಮರ್ಥರಾಗಿರಲಿಲ್ಲ. ಸಾವಿತ್ರಿಯ ಬಗೆಗೆ ತನ್ನಲ್ಲಿದ್ದ ಗಾಢವಾದ ಪ್ರೇಮವೇ ತನ್ನನ್ನು ಅವಳಿಗೆ ನಿಷ್ಠನನ್ನಾಗಿಸಿತ್ತು. ಇಷ್ಟು ವರ್ಷ ಏಕಜೀವವಾಗಿ ಬಾಳಿದ ತಾವು ಈಗ ಬೇರೆ ಬೇರೆಯಾಗುವ ಪ್ರಸಂಗ.....

ಅಗಲುವ ಆ ಗಳಿಗೆಯಲ್ಲಿ ಭಾಸ್ಕರರಾಯನ ಎದೆ ಬಿಗಿಯಿತು. ಕಣ್ಣಿನಿಂದ ಅಶ್ರುಪ್ರವಾಹ ಹರಿಯತೊಡಗಿತು. ಶಲ್ಲೆಯದಿಂದ ಮುಖ ಮುಚ್ಚಿಕೊಂಡು ಆತ ಥಟ್ಟನೆ ಹೊರಟುಹೋದ. ಪತಿಯು ಕಣ್ಮರೆಯಾದೊಡನೆಯೆ ಸಾವಿತ್ರಿಬಾಯಿ ಮೂರ್ಛಿತಳಾಗಿ ಬಿದ್ದುಬಿಟ್ಟಳು.

ಸೊಸೆಯ ಮುಖದ ಮೇಲೆ ತಣ್ಣೀರು ಚಿಮುಕಿಸಿ ಯಮುನಾಬಾಯಿ ಆಕೆಯನ್ನು ಎಚ್ಚರುಗೊಳಿಸಿದಳು. ಅರಮನೆಯಲ್ಲಿ ಹೆಚ್ಚು ಹೊತ್ತು ಕುಳಿತಿರುವಂತೆಯೂ ಇರಲಿಲ್ಲ. ಯಮುನಾಬಾಯಿ ಒಂದು ನಿಮಿಷ ಯೋಚಿಸಿ, ಕೇವಲ ಕೆಲವೇ ಬಟ್ಟೆಬರೆಗಳನ್ನೂ ಆಭರಣಗಳನ್ನೂ ಸೇರಿಸಿ ಗಂಟು ಕಟ್ಟಿದಳು.

ಅನಂತರ ಅರಮನೆಯಲ್ಲಿ ಕೆಲಸಕ್ಕಿದ್ದ ಕೊಂಕಣದ ಭಾಲಚಂದ್ರಭಟ್ಟನನ್ನು ಜತೆಗೆ ಕರೆದುಕೊಂಡು ಅತ್ತೆಯೂ ಸೊಸೆಯೂ ಯಾರಿಗೂ ಗೊತ್ತಾಗದಂತೆ ಕೋಟೆ ಯನ್ನು ತ್ಯಜಿಸಿ, ನರಗುಂದದ ನೆಲದ ಮೇಲೆ ಕಂಬನಿಗಳುದುರುತ್ತಿರಲು, ಮತ್ತೆ ಮತ್ತೆ ಹಿಂದಿರುಗಿ ಕೋಟೆಯನ್ನು ದಿಟ್ಟಿಸಿ ನೋಡುತ್ತ, ಮತ್ತೆ ಮನಸ್ಸನ್ನು ಬಿಗಿ ಹಿಡಿದು ಮುಂದೆ ನಡೆಯುತ್ತ ಹೊರಟು ಹೋದರು.

## ೧೫

ಪರಿವಾರ ಸಮೇತನಾಗಿ ದೊರೆ ಓಡಿಹೋದ ವರ್ತಮಾನ ನಿಜವೆಂಬುದು ಖಚಿತವಾಗುತ್ತಲೂ ಮುಂದೇನು ಮಾಡುವುದೆಂದು ರಾಜಶೇಖರ ಯೋಚಿಸ ತೊಡಗಿದ.

ಕೋಟೆಯ ಗೋಡೆಗಳು ಉರುಳಿ ಬೀಳುತ್ತಲೇ ಇದ್ದುವು. ವೈರಿಗಳ ಕೋವಿಗಳಿಂದ ಹಾರಿದ ಗುಂಡುಗಳು ಮಧ್ಯೆ ಮಧ್ಯೆ ಸುಂಯ್ ಎಂದು ಸಮೀಪ ದಲ್ಲಿಯೆ ಸುಳಿದು ಹೋಗುತ್ತಿದ್ದುವು. ಅವುಗಳಿಗೆ ಪ್ರತಿಯಾಗಿ ಕೋಟೆಯಿಂದ ಗುಂಡು ಹಾರಿಸುವ ವಿಚಾರವೇ ಯಾರಿಗೂ ಇರಲಿಲ್ಲ. ಕೋಟೆಯಲ್ಲಿದ್ದ ಪ್ರತಿ ಯೊಬ್ಬನೂ ತನ್ನ ಜೀವವುಳಿಸಿಕೊಳ್ಳುವ ಪ್ರಯತ್ನದಲ್ಲಿಯೆ ತೊಡಗಿಕೊಂಡಿದ್ದ. ಒಡೆಯರಿಲ್ಲದ ಕುದುರೆಗಳೂ ಬೆದರಿ ಹೇಕರಿಸುತ್ತಾ ಮನಸ್ಸು ಬಂದತ್ತ ಓಡ ತೊಡಗಿದ್ದುವು. ಈ ಅರಾಜಕತೆಯ ಸಂಧಿ ಸಾಧಿಸಿ ಕೋಟೆಯಲ್ಲಿನ ಅರಮನೆ ಯನ್ನು ಲೂಟಿ ಮಾಡುವುದರಲ್ಲೂ ಕೆಲವರು ಮಗ್ನರಾಗಿದ್ದರು.

"ಏನು ಮಾಡೋಣ ನಾಯಕಾ ? ದೇವರು ನರಗುಂದದ ಕೈ ಬಿಟ್ಟಂತೆಯೆ ಕಾಣುತ್ತದೆ," ಎಂದ ರಾಜಶೇಖರ, ತನ್ನ ಜತೆಗಿದ್ದ ಸೈನಿಕನನ್ನು ಕುರಿತು.

"ಇವರಿಗೇನು ಧಾಡಿಯಾಗೈತ್ಯೋ ಏನೋ. ಎಲ್ಲಾ ಓಡಲಿಕ್ಕೇ ಹತ್ತಿದಾರೆ, ಹೆಣ್ಣ್ಯಾಗಳ ಹಾಂಗ," ಎಂದ ಸೈನಿಕ.

"ಪಾಪ, ಈ ಸೈನಿಕರದೂ ತಪ್ಪಿಲ್ಲ ಇದರಲ್ಲಿ. ಸ್ವತಃ ರಾಜನೇ ಓಡಿ ಹೋದನಂತೆ....ಇನ್ನು ಯಾರಿಗಾಗಿ ಯುದ್ಧ ಮಾಡಿಯಾರು ಇವರು ?"

"ನೀನೇನು ಮಾಡಬೇಕಂತೀ ದಳವಾಯಣ್ಣಾ ?"

ತಾನೇನನ್ನು ಮಾಡಬೇಕು ?

ರಾಜಶೇಖರನ ಮಿದುಳು ಬಧಿರವಾದಂತಾಗಿತ್ತು. ಈ ಸಂದರ್ಭದಲ್ಲಿ ತನ್ನ

ಕರ್ತವ್ಯವೇನು ? ಕತ್ತಿ ಕಠಾರಿಗಳನ್ನೂ ಕೋವಿಗಳನ್ನು ಎಸೆದು ಓಡುತ್ತಿದ್ದ ಸೈನಿಕರನ್ನು ತಡೆದು ನಿಲ್ಲಿಸಿ ಕೋಟೆಯನ್ನುಳಿಸಿಕೊಳ್ಳಲು ಅಂತಿಮ ಪ್ರಯತ್ನ ಮಾಡಿ ನೋಡುವುದೇ ? ಅಪಜಯದ ಭಾವನೆಯಿಂದ ಎದೆಗುಂದಿರುವ ಸೈನಿಕರು ಈಗ ತನ್ನ ಮಾತನ್ನಾದರೂ ಕೇಳಬಹುದೆಂಬ ಭರವಸೆಯೇನು ?

ಕೋಟೆಯನ್ನೇರಿ ಬರುವಾಗ ರಾಜಶೇಖರನ ಜತೆಯಲ್ಲಿದ್ದ ಹತ್ತಿಪ್ಪತ್ತು ಮಂದಿ ಸೈನಿಕರಲ್ಲಿ ಅರ್ಧದಷ್ಟು ಜನರು ಅತ್ತ ಇತ್ತ ಚದರಿಹೋಗಿದ್ದರು. ಕೋಟೆ ಯನ್ನು ತ್ಯಜಿಸಿ ಹೊರಡುವಾಗ ಅವನ ಸಂಗಡ ಉಳಿದಿದ್ದುದು ಕೇವಲ ನಾಲ್ಕು ಜನರು. ಕೋಟೆಯಲ್ಲೆಲ್ಲಾ ತಾನೇ ತಾನಾಗಿ ವಿಜೃಂಭಿಸುತ್ತಿದ್ದ ಅವ್ಯವಸ್ಥೆಯನ್ನು ಕಂಡು ಅವರ ನರಗಳೂ ದುರ್ಬಲವಾಗಿದ್ದುವು. ಹೋರಾಡಬೇಕೆಂಬ ಹುಮ್ಮಸ್ಸು ಯಾರಿಗೂ ಇದ್ದ ಹಾಗಿರಲಿಲ್ಲ. ತನ್ನ ಸಂಗಡಿಗರ ಕಳಾಹೀನ ಮುಖಗಳನ್ನು ವಿಷಾದದಿಂದ ದಿಟ್ಟಿಸುತ್ತ ರಾಜಶೇಖರ ತನ್ನಲ್ಲಿ ತಾನೆ ಅಂದುಕೊಂಡ : "ಇವರೂ ಕೂಡಾ ಓಡಿಹೋಗುವ ವಿಚಾರದಲ್ಲೇ ಇರುವುದು ಸ್ಪಷ್ಟವಿದೆ. ಆದರೆ, ನನ್ನೆದುರು ಮಾನ ಕಳೆದುಕೊಳ್ಳಲು ಮನಸ್ಸಿಲ್ಲದೆ ಇಲ್ಲದ ಧೈರ್ಯ ನಟಿಸುತ್ತಿದಾರೆ. ನನ್ನಿಂದ ಒಂದು ಮಾತು ಬಂದರಾಯಿತು, ಇವರೂ ಕಾಲಿಗೆ ಬುದ್ಧಿ ಹೇಳಿ ಸುತ್ತಾರೆ."

ಪಲಾಯನದ ವಿಚಾರ ಅವನ ಮುಖದಿಂದಲೇ ಹೊರಬೀಳಬಹುದೆಂದು ಅವರೂ ಭಾವಿಸಿ ಆ ಮಾತಿಗಾಗಿಯೆ ಕಾದಿದ್ದರು. ಆದರೆ, ರಾಜಶೇಖರ ಅಂಥ ಸಲಹೆಯಿೊಯುವುದು ಅಶಕ್ಯವೇ ಆಗಿತ್ತು. ಪಲಾಯನ ಮಾಡುವುದಕ್ಕಿಂತ ಪ್ರಾಣ ತ್ಯಜಿಸುವುದೇ ಶ್ರೇಯಸ್ಕರವೆಂದು ಭಾವಿಸುವ ಅಂದಿನ ಕೆಲವೇ ಗಂಡು ಗಲಿಗಳಲ್ಲಿ ಅವನೂ ಒಬ್ಬನಾಗಿದ್ದ.

ಆತ ಮಾತನಾಡದೆ ಕುದುರೆಯನ್ನೋಡಿಸಿ ಕೋಟೆಯಿಂದಿಳಿದು ಬಂದ. ಸಂಗಡಿಗರೂ ಅವನನ್ನು ಹಿಂಬಾಲಿಸಿದರು. ನಗರದಲ್ಲಿನ ಅವ್ಯವಸ್ಥೆ, ಕೋಟೆ ಯಲ್ಲಿನದಕ್ಕೆ ಯಾವ ದೃಷ್ಟಿಯಿಂದಲೂ ಕಡಮೆಯಾಗಿರಲಿಲ್ಲ. ಆ ಹೊತ್ತಿಗಾಗಲೆ ದೊರೆಯ ಪಲಾಯನದ ವಾರ್ತೆ ನಗರದಲ್ಲಿಯೂ ಪಸರಿಸಿತ್ತು. ಕೋಟೆಯ ಗೋಡೆಗಳು ಸ್ವಲ್ಪ ಸ್ವಲ್ಪವಾಗಿ ಉರುಳಿ ಬೀಳುತ್ತಿದ್ದಂತೆ ನಾಗರಿಕರ ಧೈರ್ಯ ಸ್ಥೈರ್ಯಗಳೂ ಮಾಯವಾಗುತ್ತಿದ್ದುವು. ದೊರೆಯ ಮತ್ತು ದರಬಾರವರ ಪಲಾಯನದ ಸಮಾಚಾರವಂತೂ ನಾಗರಿಕರನ್ನು ಹತಬುದ್ಧರನ್ನಾಗಿಸಿತ್ತು.

"ನಮ್ಮನ್ನ ಇಂಗ್ಲೀಷರ ಕೈಗೆ ಕೊಟ್ಟು, ತಾವು ಮಾತ್ರ ಜೀವ ಉಳಿಸಿಕೊಂಡು ಓಡಿಹೋದರು ಆ ಮಂದಿ!" ಎಂದು ಜನರು ಶಪಿಸತೊಡಗಿದ್ದರು.

"ಇಂಗ್ಲೀಷರ ವಿರುದ್ಧ ಬಂಡು ಮಾಡಲು ನಾವೇನು ಇವರಿಗೆ ಹೇಳಿರಲಿಲ್ಲ. ತಾವೇ ಗದ್ದಲ ಎಬ್ಬಿಸಿ ಈಗ ನಮ್ಮನ್ನು ನಡುನೀರಲ್ಲಿ ಬಿಟ್ಟು ಓಡಿಹೋದರು ವಿಶ್ವಾಸಘಾತಕರು!" ಎಂದು ವರ್ತಕರು ಗೋಗರೆಯುತ್ತಿದ್ದರು.

ಎಲ್ಲ ದಿಕ್ಕುಗಳಿಂದಲೂ ನುಗ್ಗಿ ಬರುತ್ತಿದ್ದ ಆಂಗ್ಲಸೇನೆಯ ಕಣ್ಣು ತಪ್ಪಿಸಿ ಊರು ಬಿಟ್ಟು ಪಾರಾಗಿ ಹೋಗುವುದೂ ಸುಲಭ ಸಾಧ್ಯವಾಗಿರಲಿಲ್ಲ. ಕೆಲವರು ತಪ್ಪಿಸಿಕೊಂಡರು, ಇನ್ನು ಕೆಲವರು ಸಿಕ್ಕಿಬಿದ್ದರು. ಪಲಾಯನ ಹೇಳಿಸುತ್ತಿದ್ದವರು ಕೊಂಡೊಯ್ಯುತ್ತಿದ್ದ ಧನಕನಕ ವಸ್ತು ಒಡವೆಗಳು ಅನಾಯಾಸವಾಗಿಯೆ ಆಂಗ್ಲ ಸೈನಿಕರ ವಶವಾದುವು.

ನಗರವನ್ನು ತ್ಯಜಿಸಿ ಧಾವಿಸುತ್ತಿದ್ದ ಆ ಜನ ಜಂಗುಳಿಯನ್ನು ದಿಟ್ಟಿಸುತ್ತಾ ರಾಜಶೇಖರ ಕೆಲಹೊತ್ತು ಬೀದಿಗಳಲ್ಲಿ ಸುತ್ತುತ್ತಿದ್ದ. ತನ್ನ ಮನೆಗೂ ಬಂದುದಾಯಿತು. ಅಲ್ಲಿಯೂ ಹೊರಟುಹೋಗಿರಬೇಕೆಂದುಕೊಂಡು ರಾಜಶೇಖರ ಮತ್ತೆ ಬೀದಿಗೆ ಬಂದ.

"ಏನು ಮಾಡೋಣ ದಳವಾಯಣ್ಣಾ? ಲಗೂ ಹೇಳು. ವೈರಿಗಳು ನುಗ್ಗಿ ಬರ್‍ತಿದಾರೆ," ಎಂದನೊಬ್ಬ ಸೈನಿಕ.

"ಈಗ ವೈರಿಗಳನ್ನೆದುರಿಸೂದು ಅಂದರ ನೂರಿನ್ನೂರು ಮಂದಿಯಾದರೂ ಬೇಕು," ಎಂದನಿನ್ನೊಬ್ಬ.

"ನಾವು ನಾಲ್ಕೇಮಂದಿ ಹೋಗೂದು ಅಂದರ ಸಾಯಲಿಕ್ಕೇ ಹೋದ ಹಾಂಗಾದೀತು," ಎಂದ, ಮತ್ತೊಬ್ಬ.

"ಸಾಯುವುದು ಬೇಡ ಅಂತೀರಾ ಹಾಗಾದರೆ?" ಎಂದ ರಾಜಶೇಖರ. ವಿಲಕ್ಷಣವಾದ ಧ್ವನಿಯಲ್ಲಿ.

"ಸಾಯಲೇಬೇಕು ಅಂತನೀ ಅಂದರ ನಾವು ಅದಕ್ಕೂ ತಯಾರದೀವಿ ದಳವಾಯಣ್ಣಾ!" ಎಂದನೊಬ್ಬ. ಆ ಮಾತನ್ನು ಆತ ಹೃತ್ಪೂರ್ವಕವಾಗಿ ಆಡಿರಲಿಲ್ಲವೆಂಬುದನ್ನು ಅವನ ಮುಖಭಾವವೆ ಸೂಚಿಸುತ್ತಿತ್ತು.

"ಸಾಯುವುದೇ ಆದರೆ ನಾನೊಬ್ಬನೇ ಸಾಯಬೇಕು. ಪಾಪ, ಇವರನ್ನೂ ಯಾಕೆ ವ್ಯರ್ಥವಾಗಿ ಬಲಿಕೊಡಬೇಕು?" ಎಂದು ರಾಜಶೇಖರ ತನ್ನಷ್ಟಕ್ಕೆ ತಾನೇ ಹೇಳಿಕೊಂಡ.

"ನೀನಾದರೂ ಯಾಕೆ ಸಾಯಬೇಕು? ಯಾವ ಉದ್ದೇಶಕ್ಕಾಗಿ?" ಎಂದು ಅವನ ಇನ್ನೊಂದು ಮನಸ್ಸು ಪ್ರಶ್ನಿಸಿದಂತಾಯಿತು." ಈಗ ನೀನು ಸಾಯಲು ಹೋದರೆ ಅದೂ ವ್ಯರ್ಥವೇ ಆಗುವುದು. ನಿನಗಾಗಿ ಯಾರೂ ಅಳುವುದಿಲ್ಲ. ನಿನ್ನ ನೆನಪೂ ಯಾರಿಗೂ ಉಳಿಯುವುದಿಲ್ಲ. ನಿನಗಾಗಿ ವೀರಗಲ್ಲನ್ನೂ ಯಾರೂ ನೆಡುವುದಿಲ್ಲ...."

"ವೀರಗಲ್ಲು ಬಯಸಿ ನಾನೇನು ಯುದ್ಧ ಮಾಡುವುದಿಲ್ಲವಲ್ಲಾ?" ಎಂದು ಆತ ಚಕಿತನಾಗಿ ವಿಚಾರಿಸಿದ.

"ಯಾರಿಗ್ಗೊತ್ತು! ಅದೇ ಉದ್ದೇಶವಿದ್ದರೂ ಇದ್ದೀತು. ಭಾರತದ ವೀರಪುರುಷರಲ್ಲಿ ನಿನ್ನ ಹೆಸರೂ ಅಮರವಾಗಲೆಂಬ ಆಸೆಯಿದ್ದರೂ ಇದ್ದೀತು!" ಎಂದು ಅವನ ಮನಸ್ಸು ಅಣಕವಾಡಿತು.

"ಏನು ಮಾಡೋಣ ದಳವಾಯಣ್ಣಾ?" ಎಂದು ಸೈನಿಕರು ಮತ್ತೆ ಕೇಳತೊಡಗಿದ್ದರು.

ಆತ ಉತ್ತರವೀಯುವುದರೊಳಗಾಗಿಯೇ ಹಿಂದಿನಿಂದ ಹತ್ತಿಪ್ಪತ್ತು ಜನರು ಹಠಾತ್ತಾಗಿ ಬಂದು ಅವನ ಮೈಮೇಲೆ ಬಿದ್ದರು. ಬಂದವರಾರೆಂಬುದು ತಿಳಿಯುವುದರೊಳಗಾಗಿಯೆ ಕೈ ಕೈ ಕಾಳಗಕ್ಕಾರಂಭವಾಗಿತ್ತು. ರಾಜಶೇಖರನ ಸಂಗಡಿಗರೂ ಓಡಿಹೋಗುವ ವಿಚಾರವನ್ನು ತ್ಯಜಿಸಿ ದಾಳಿಗಾರರನ್ನೆದುರಿಸಿ ಹೊಡೆದಾಡ ತೊಡಗಿದರು.

ರಾಜಶೇಖರನ ಕತ್ತಿ ಚಿಣಗಿಯ ಹಾವಿನಂತೆ ಚಪಲತೆಯಿಂದ ಹಾರಿ ವೈರಿಗಳನ್ನು ತುಂಡರಿಸತೊಡಗಿತು. ಕತ್ತಿಯನ್ನು ತಿರುವುತ್ತಿದ್ದ ಹಾಗೇ ದಾಳಿಗಾರರ ನಾಯಕರಾರೆಂಬುದನ್ನು ಕಂಡುಕೊಳ್ಳಲು ಆತ ಅತ್ತಿತ್ತ ದೃಷ್ಟಿಯೋಡಿಸಿದಾಗ ನಾಲ್ಕು ಮಾರು ದೂರದಲ್ಲಿ ನಿಂತುಕೊಂಡಿದ್ದ ಕೃಷ್ಣಾಜಿಯ ಕೃಶದೇಹ ಕಾಣಿಸಿತು.

"ಎಲಾ ದ್ರೋಹೀ!" ಎನ್ನುತ್ತಾ ರಾಜಶೇಖರ ಹುಲಿಯಂತೆ ಅವನತ್ತ ಹಾರಿದ. ಆತ ತನ್ನ ಮೇಲೆ ಬೀಳಲು ನುಗ್ಗಿ ಬರುತ್ತಿದ್ದುದನ್ನು ಗಮನಿಸಿದ ಚಾಣಾಕ್ಷ ಕೃಷ್ಣಾಜಿ ಥಟ್ಟನೆ ಸರಿದು ತನ್ನ ಜತೆಗೆ ಬಂದಿದ್ದ ಸೈನಿಕರ ಹಿಂದೆ ಮರೆಯಾದ.

"ಹಿಡೀರಿ ಅವನನ್ನ. ಹೊಡೀರಿ ಅವನನ್ನ! ಬಿಡಬೇಡಿರಿ!" ಎಂದು ಸೈನಿಕರಿಗೆ ಅಪ್ಪಣೆ ಮಾಡಿದ, ಕೃಷ್ಣಾಜಿ.

ಇಪ್ಪತ್ತು ಮೂವತ್ತು ಜನರೆದುರು ಐದು ಜನರ ಶಕ್ತಿ ಎಷ್ಟು ಹೊತ್ತು ತಡೆಯಲು ಸಾಧ್ಯ? ರಾಜಶೇಖರನ ಸಂಗಡಿಗರು ಒಬ್ಬೊಬ್ಬರಾಗಿ ನೆಲಕ್ಕುರುಳಿದರು. ಅವನ ಕೈ–ತೋಳು–ಕೆನ್ನೆ–ಭುಜಗಳೂ ಚಿಕ್ಕಪಟ್ಟ ಗಾಯ ಗಳಾಗಿ ನೆತ್ತರು ಹರಿಯತೊಡಗಿತು. ಅಂಥ ಸ್ಥಿತಿಯಲ್ಲೂ ಆತ ಎದೆಗುಂದದೆ ಕತ್ತಿ ತಿರುವುತ್ತಲೇ ಇದ್ದ. ಕತ್ತಿವರಸೆಯಲ್ಲಿ ಅವನು ತೋರಿಸುತ್ತಿದ್ದ ಕೌಶಲ್ಯ ವನ್ನು ಕಂಡು ವೈರಿ ಸೈನಿಕರಿಗೂ ಒಳಗೊಳಗೇ "ಭಲೆ ಬಲೆ!" ಎನ್ನಿಸ ತೊಡಗಿತ್ತು.

"ಈತ ಸಾಧಾರಣ ವ್ಯಕ್ತಿಯಲ್ಲ. ಒಂದು ಕಾಲಕ್ಕೆ ಸೇನಾಪತಿ ಯಾಗಿದ್ದವನು. ಇಂಗ್ಲೀಷ್ ಸರಕಾರದ ಪರಮವೈರಿ. ಇವನನ್ನು ಬಿಡಬೇಡಿರಿ!" ಎಂದು ಕೃಷ್ಣಾಜಿ ಕೂಗುತ್ತಿದ್ದ.

ಹತ್ತಿಪ್ಪತ್ತು ನಿಮಿಷಗಳ ವರೆಗೆ ಏಕಾಂಗಿವೀರನಾಗಿ ಕಾದಾಡಿದ ರಾಜ ಶೇಖರ. ವೈರಿ ಸೈನಿಕರು ಅವನ ಸುತ್ತಲೂ ವರ್ತುಲಾಕಾರವಾಗಿ ಸುತ್ತುತ್ತಾ ಅವನ ಕೈಯಲ್ಲಿನ ಕತ್ತಿಯನ್ನು ಬೀಳಿಸಲು ಯತ್ನಿಸುತ್ತಿದ್ದರು. ಆತ ಅತ್ಯಂತ ಜಾಣತನದಿಂದ ಅವರ ಏಟುಗಳನ್ನು ತಪ್ಪಿಸಿಕೊಂಡು ಅವರನ್ನೇ ಗಾಯಗೊಳಿಸಲು ಏರಿಬರುತ್ತಿದ್ದ. ಹಾಗೆ ಒಂದು ಬಾರಿ ಆತ ಒಬ್ಬ ಸೈನಿಕನ ಮೇಲೇರಿ ಹೋದ ಸಮಯ ಸಾಧಿಸಿ, ಅವನ ಹಿಂಬದಿಯಲ್ಲಿದ್ದ ಇನ್ನೊಬ್ಬ ಸೈನಿಕ ಚಂಗನೆ ಹಾರಿ ಹಿಂದಿನಿಂದ ಅವನ ಕೈ ಕತ್ತರಿಸಿಹಾಕಿದ. ಕತ್ತಿಯನ್ನು ಭದ್ರವಾಗಿ ಹಿಡಿದು ಕೊಂಡಿದ್ದಂತೆಯೇ ರಾಜಶೇಖರನ ಬಲಗೈ ಸಿಡಿದು ಬಿತ್ತು.

"ಹಾ!" ಎಂದು ಆತ ಮಿಂಚಿನಂತೆ ಹಿಂದೆ ಹೊರಳಿ, ತನ್ನ ಕೈ ಕತ್ತರಿಸಿದವನ ಮೇಲೆರಗುತ್ತಿದ್ದ. ಹಾಗೆಯೇ ಎಲ್ಲ ಸೈನಿಕರೂ ಧಾವಿಸಿ ಬಂದು ಅವನನ್ನು ಬಳಸಿ ಹಿಡಿದುಕೊಂಡರು. ತುಂಡರಿಸಲ್ಪಟ್ಟ ಕೈಯಿಂದ ನೆತ್ತರು ಸುರಿಯುತ್ತಿದ್ದರೂ ಅತ್ತ ಗಮನವೀಯದೆ ರಾಜಶೇಖರ ಆಗಲೂ ಹೊಡೆದಾಡುತ್ತಲೇ ಇದ್ದ. ಆದರೆ, ಇಪ್ಪತ್ತು ಜನರ ಹಿಡಿತದಿಂದ ಬಿಡಿಸಿಕೊಳ್ಳುವುದು ಅಸಾಧ್ಯವಾದ ವಿಷಯವೇ ಆಗಿತ್ತು.

ಕ್ಷಣಮಾತ್ರದಲ್ಲಿಯೇ ಅವನ ಕೈಕಾಲುಗಳಿಗೆ ಹಗ್ಗ ಬಿಗಿದು ಬಂದಿ ಯನ್ನಾಗಿ ಮಾಡಿದರು. ಅವನ ಅಂಗಿಯನ್ನೇ ಹರಿದು ಮುಂಗೈಗೆ ಬಿಗಿದು ರಕ್ತ ಸುರಿಯುವುದನ್ನು ತಡೆಯಲಾಯಿತು.

"ಅಹಹಾ! ವೀರಾಧಿವೀರಾ! ಕರ್ಣಾರ್ಜುನರಿಗಿಂತ ಪರಾಕ್ರಮಿ ನೀನು! ಅಲ್ಲವೆ?" ಎಂದು ಅಣಕಿಸುತ್ತಾ ಕೃಷ್ಣಾಜಿ ಸಮೀಪಕ್ಕೆ ಬಂದ.

"ಹಿಂದಿನಿಂದ ಕೈ ಕಡಿದರೆಂದು ಹೀಗಾಯಿತು. ಇಲ್ಲದಿದ್ದರೆ ಗೊತ್ತಾಗುತ್ತಿತ್ತು ನನ್ನ ಪರಾಕ್ರಮ!"

"ಹಿ ಹಿ ಹಿ ಹ್ಹಿ!" ಎಂದು ಕೃಷ್ಣಾಜಿ ಹಲ್ಲು ಕಿರಿದ.

ಈ ದೇಶ ದ್ರೋಹಿಯೊಡನೆ ಮಾತನಾಡುವುದೂ ಸಲ್ಲದೆಂದೇ ಬಗೆದು ರಾಜಶೇಖರ ಮೌನ ವಹಿಸಿದ.

ಕೃಷ್ಣಾಜಿ ಮಾತ್ರ ಸುಮ್ಮನಾಗಲಿಲ್ಲ.

"ಈ ಸ್ಥಿತಿಯಲ್ಲಿ ಮಲ್ಲಿಕಾ ನೋಡಬೇಕು ನೋಡೋ ನಿನ್ನನ್ನು!"

"ಏನಾದೀತು ನೋಡಿದರೆ?"

"ಸೋತು ಹೋದ ನಿನ್ನ ಮೋರೆಯ ಮೇಲೆ ಅವಳು ಉಗುಳದಿರಳೇ?"

"ನಿನ್ನ ಹಾಗೆ ನಾನು ನಾಲ್ಕು ಕಾಸಿಗಾಗಿ ದೇಶಕ್ಕೆ ದ್ರೋಹ ಬಗೆದಿಲ್ಲ. ಹೊಡೆದಾಡುತ್ತ ಹೊಡೆದಾಡುತ್ತ, ಕಡೆಗೆ ನಿಮ್ಮ ಮೋಸದಿಂದಾಗಿ ನಿಮ್ಮ ಕೈಗೆ ಸಿಗಬೇಕಾಯಿತು. ನನ್ನನ್ನಾಕೆ ತಿರಸ್ಕಾರದಿಂದ ಕಾಣಲು ಕಾರಣವೇನೂ ಇಲ್ಲ. ಅವಳು ಉಗುಳುವುದೇ ಆದರೆ ನಿನ್ನ ಮೋರೆಯ ಮೇಲೇ ..." ಎನ್ನುತ್ತಾ ರಾಜಶೇಖರ ರೋಷವನ್ನು ತಡೆದುಕೊಳ್ಳಲಾರದೆ, ಸಮೀಪದಲ್ಲಿಯೆ ನಿಂತಿದ್ದ ಕೃಷ್ಣಾಜಿಯ ಮುಖಕ್ಕೆ 'ಥೂ' ಎಂದು ಉಗುಳಿದ.

"ಅಯ್ಯಯ್ಯೋ ಚಾಂಡಾಲಾ! ನನ್ನ ಜಾತಿ ಕೆಡಿಸಿದೆ. ಜಾತಿ ಕೆಡಿಸಿದೆ! ಬಿಡಬೇಡಿರಿ ಇವನನ್ನ. ಹೊಡೀರಿ! ಹಾಕಿರಿ!" ಎಂದು ಕಿರಿಚುತ್ತಾ ಕೃಷ್ಣಾಜಿ ಒಂದು ಮಾರು ಹಿಂದೆ ಜಿಗಿದು ನಿಂತ. ಮತ್ತೆ ತನ್ನನ್ನು ತಾನೆ ಸಾವರಿಸಿಕೊಂಡು ಆತ ಸೈನಿಕರನ್ನು ಕುರಿತು ಹೇಳಿದ: "ಇವನನ್ನು ಊರಜನರೆದುರೇ ಗಲ್ಲಿಗೇರಿಸೋಣ. ದೊಡ್ಡ ಸಾಹೇಬರ ಹತ್ತರ ತಗೊಂಡು ನಡೀರಿ!"

## ೧೬

"ಅವರಿನ್ನೂ ಯಾಕೆ ಬರಲಿಲ್ಲವೋ ಏನೊ. ಮನೆಯಲ್ಲಿ ಮಗಳ ಮದುವೆಯಾಗುವದಿದೆಯೆಂಬ ಸಂಗತಿಯೂ ಮರೆತುಹೋಯಿತೋ ಏನೊ." ಉಂಡೆಗಳನ್ನು ಕಟ್ಟುವುದರಲ್ಲಿ ತೊಡಗಿದ್ದ ರಾಧಾಬಾಯಿ–ರಾಘೋಪಂತನ ಪತ್ನಿ–ಗೊಣಗುತ್ತಿದ್ದಳು.

ಒಂದೆರಡು ದಿನಗಳಲ್ಲಿಯೆ ನಡೆಯಬೇಕಿದ್ದ ಮದುವೆಗಾಗಿ ಮನೆಯಲ್ಲಿ ರಭಸದಿಂದ ಸಿದ್ಧತೆ ನಡೆದಿತ್ತು. ಕೆಲವು ಸ್ತ್ರೀಯರು ಉಂಡೆಗಳನ್ನು ಕಟ್ಟುತ್ತಿದ್ದರೆ ಇನ್ನು ಕೆಲವರು ಅವಲಕ್ಕಿ ತಯಾರಿಸುತ್ತಿದ್ದರು, ಇನ್ನು ಹಲವರು ಬೇರೆ ಬೇರೆ ಸಾಮಗ್ರಿಗಳನ್ನು ಸಿದ್ಧಗೊಳಿಸುತ್ತಿದ್ದರು. ಕೆಲಸ ನಡೆದಿದ್ದಂತೆಯೇ ಕೆಲವರು ಮಂಗಲಗೀತಗಳನ್ನು ಹಾಡುತ್ತಿದ್ದರು. ಗೋಡೆಗಳಿಗೆ ಸುಣ್ಣ ಬಣ್ಣ ಬಳಿದು ಅಲಂಕರಿಸುವ ಕಾರ್ಯವೂ ಸಾಗಿತ್ತು. ಮಡಿಬಟ್ಟೆಯುಟ್ಟುಕೊಂಡ ಭಟ್ಟರು ಗಟ್ಟಿಯಾಗಿ ಮಂತ್ರಗಳನ್ನು ಉರುಹೊಡೆಯುತ್ತ ಗಡಿಬಿಡಿಯಿಂದ ಓಡಾಡುತ್ತಿದ್ದರು. ತಿಂಡಿಗಳು ತಯಾರಾದ ಹಾಗೆ ಚಿಕ್ಕಮಕ್ಕಳು ಅವುಗಳ ರುಚಿ ನೋಡುತ್ತ ಪಡಸಾಲೆಗಳಲ್ಲಿ ಆಟವಾಡುತ್ತಿದ್ದರು.

ಲಗ್ನಸಮಾರಂಭಕ್ಕೆಂದು ಬೇರೆ ಬೇರೆ ಊರುಗಳಿಂದ ಬಂದಿದ್ದ ಆಪ್ತೇಷ್ಟರಿಂದ ಮನೆ ತುಂಬಿಕೊಂಡಿತ್ತು. ನರಗುಂದದಲ್ಲಿ ನಡೆದ ಬಂಡಾಯದ ಸಮಾಚಾರವಾಗಲಿ ಊರ ಹೊರಗೆ ನಡೆದಿದ್ದ ಯುದ್ಧದ ವಿಚಾರವಾಗಲಿ ಆ ಜನರಿಗೆ ತಿಳಿದಿದ್ದ ಹಾಗೆಯೆ ತೋರುತ್ತಿರಲಿಲ್ಲ. ಅವರೆಲ್ಲರೂ ಮೃಷ್ಟಾನ್ನ ಭೋಜನ ಮುಗಿಸಿ ರುಚಿಕರವಾದ ವೀಳಯ ಮೆಲ್ಲುತ್ತ ಅಲ್ಲಲ್ಲಿ ಸುಖವಾಗಿ ಒರಗಿ ಕುಳಿತು ಚದುರಂಗದಾಟದಲ್ಲಿ ತಲ್ಲೀನರಾಗಿದ್ದರು. ತೋಪುಗಳ ಗರ್ಜನೆಯೂ ಕೂಡಾ ಅವರನ್ನು ಆಟದಿಂದ ಪರಾವೃತ್ತಗೊಳಿಸಲು ಸಮರ್ಥವಾಗಿರಲಿಲ್ಲ.

ಇತ್ತ ರಾಧಾಬಾಯಿ ಒಂದೇಸಮನೆ ಗೊಣಗಿಕೊಳ್ಳುತ್ತಲೇ ಇದ್ದಳು :

"ಊಟಕ್ಕೂ ಬರಲಿಲ್ಲವಲ್ಲ ಅವರು? ದಿನಾಲು ಈ ವೇಳೆಯೊಳಗಾಗಿ ಬಂದು ಉಂಡು ಹೋಗುತ್ತಿದ್ದರು. ಇವತ್ತು ಅದನ್ನು ತಪ್ಪಿಸಿದರು...."

"ಹೊರಗಡೆ ಯುದ್ಧ ನಡೆದಿದೆಯಂತಲ್ಲ ಬಾಯಿಸಾಹೇಬ್?" ಎಂದು ಒಬ್ಬ ಸುವಾಸಿನಿ ಧ್ವನಿಯೆತ್ತಿದಾಗಲೇ ಆ ಹೆಂಗಳೆಯರಿಗೆ ಯುದ್ಧದ ನೆನಪಾಯಿತು.

"ಹೌದಾ? ಯುದ್ಧ ನಡೆದಿದೆಯೆ? ನಿಜವಾಗಿಯೂ?" ಎಂದು ಒಬ್ಬಾಕೆ ಕೇಳಿದಳು.

"ತೋಫಿನ ಸಪ್ಪಳ ಕೇಳಿಸುತ್ತಿಲ್ಲವೆ? ಆ ತೋಫು ಇಂಗ್ರಜರದೇ ಇರಬಹುದು."

ತೋಫಿನ ಸದ್ದು ಹೇಗಿರುವುದೆಂಬುದು ಅವರಲ್ಲಿ ಯಾರಿಗೂ ಗೊತ್ತಿರಲಿಲ್ಲ.

ಅಂತೆಯೆ, ಅವರಲ್ಲಿ ಹೆಚ್ಚು ಜನರು, ಅದು ತೋಫಿನ ಸಪ್ಪಳವೆಂಬ ಮಾತನ್ನೇ ನಂಬದೆ ತಮ್ಮ ತಮ್ಮ ಕಾರ್ಯ ಮುಂದುವರಿಸಿದರು.

ಅಷ್ಟರಲ್ಲಿ ಮನೆಯ ಹೊರಗಡೆ, ಬೀದಿಯಲ್ಲಿ ಕೂಗಾಟ ಚೀರಾಟ ಆರಂಭ ವಾಯಿತು. ವೈರಿ ಸೈನ್ಯ ನಗರದಲ್ಲಿ ನುಗ್ಗಿ ಬರುತ್ತಿದ್ದ ಸಮಾಚಾರ ಅದೇ ತಾನೆ ಆ ಬೀದಿಯಲ್ಲೂ ಪಸರಿಸಿತ್ತು.

"ಅಯ್ಯೋ, ಇನ್ನೇನು ಗತಿ? ದೇವಾ, ವೆಂಕಟೇಶಾ, ಇನ್ನೇನು ಮಾಡೋಣ?" ಎಂದು ಪ್ರಲಾಪಿಸುತ್ತ ಬೀದಿಯ ಜನರು ಅತ್ತಿಂದಿತ್ತ ಇತ್ತಿಂದತ್ತ ಓಡಾಡತೊಡಗಿದ್ದರು.

"ಏನದು ಗಲಾಟೆ? ಏನಾಯಿತು?" ಎಂದು ರಾಧಾಬಾಯಿ ಧ್ವನಿ ಯೆತ್ತುತ್ತಿದ್ದಂತೆಯೇ ಪಡಸಾಲೆಯಲ್ಲಿ ಆಡುತ್ತಿದ್ದ ಬಾಲಬಾಲಿಕೆಯರು ಗಾಬರಿ ಯಿಂದ ಓಡಿಬಂದು ಹೇಳಿದರು:

"ಲಘಾಯಿ....ಲಘಾಯಿ....ಗೋರಾ ಮಂದಿ ಪಟ್ಟಣದಲ್ಲಿ ನುಗ್ಗಿದ್ದಾರಂತೆ."

ವಿವಾಹದ ಸಾಮಗ್ರಿಗಳನ್ನು ಇದ್ದುದಿದ್ದಲ್ಲಿಯೆ ಚೆಲ್ಲಿಕೊಟ್ಟು ಸ್ತ್ರೀಯರೆಲ್ಲಾ ಎದ್ದು ತಾರಸ್ವರದಲ್ಲಿ ಆಕ್ರೋಶಕ್ಕಾರಂಭಿಸಿದರು.

"ಇನ್ನೇನು ಗತಿ ರಾಧಾಬಾಯಿಾ? ನಮ್ಮವರಿಗೇನಾಯಿತೊ ಏನೊ. ನಮ್ಮನ್ನೂ ಹಿಡೀತಾರೋ ಏನೋ ಆ ಕೆಂಪುಮೋರೆಯ ಮಂದಿ?"

ರಾಧಾಬಾಯಿಯೆದುರೂ ಅದೇ ಪ್ರಶ್ನೆ. ಎಲ್ಲ ಸ್ತ್ರೀಯರೂ ಕೈಕಾಲು ಕಳೆದುಕೊಂಡು, ತಮ್ಮ ತಮ್ಮ ಮಕ್ಕಳನ್ನು ಅಪ್ಪಿಕೊಂಡು ರೋದಿಸುತ್ತ ಕುಳಿತರು. ಚದುರಂಗದಾಟದಲ್ಲಿ ಮೈಮರೆತಿದ್ದ ಆಪ್ತಜನರಿಗೂ ಆಗ ಎಚ್ಚರ ವಾಯಿತು. ಸಂಗತಿಯೇನೆಂಬುದು ತಿಳಿಯುತ್ತಲೂ ಅವರು ಉಟ್ಟ ಬಟ್ಟೆಗಳಲ್ಲಿಯೆ ಆ ಮನೆಯಿಂದ ಹೊರಬಿದ್ದು ಕಾಲು ಎಳೆದತ್ತ ಓಡತೊಡಗಿದರು.

ಮದುವೆಯ ಮನೆಯಲ್ಲಿ ಉರಿಯುತ್ತಿದ್ದ ಒಲೆಗಳು ಹಾಗೆಯೆ ಉರಿಯು ತ್ತಲೇ ಇದ್ದುವು. ಮಡಿಯುಟ್ಟುಕೊಂಡು ಮಂತ್ರವುರುಳಿಸುತ್ತಿದ್ದ ಭಟ್ಟರು ಮಡಿ ಯನ್ನು ತೆಗೆದು ಅಂಗಿಧೋತರವುಟ್ಟುಕೊಳ್ಳುವುದನ್ನು ಮರೆತು ಅರ್ಧ ನಗ್ನಸ್ಥಿತಿ ಯಲ್ಲಿಯೆ ಬೀದಿಗುಂಟ ಓಡುತ್ತ ಹೊರಟರು. ಮನೆಯಲ್ಲಿದ್ದ ಸ್ತ್ರೀಯರನ್ನೂ ಎಳೆಮಕ್ಕಳನ್ನೂ ಯಾರೂ ಗಮನಿಸಲಿಲ್ಲ. ತಮ್ಮ ತಮ್ಮ ಜೀವಗಳನ್ನುಳಿಸಿ ಕೊಳ್ಳುವುದೇ ಆಗ ಪ್ರತಿಯೊಬ್ಬರ ವಿಚಾರವಾಗಿತ್ತು.

ಸಖಿಯರ ಸಂಗಡ ತನ್ನ ಕೊಟಡಿಯಲ್ಲಿ ಕುಳಿತು ವಿವಾಹ ಸಮಾರಂಭದ

ಸವಿ ಕಲ್ಪನೆಯಲ್ಲಿ ಸುಖಿಸುತ್ತಿದ್ದ ವಧುವೂ ಹೌಹಾರಿ ಎದ್ದು ತಾಯಿಯನ್ನು ಹುಡುಕಿಕೊಂಡು ಬಂದಳು. ರಾಧಾಬಾಯಿಗಂತೂ ಹುಚ್ಚೇ ಹಿಡಿದ ಹಾಗಾಗಿತ್ತು.

"ಅವ್ವಾ, ಅವ್ವಾ, ಅಪ್ಪನಿನ್ನೂ ಬರಲಿಲ್ಲವೇ ?"

"ಇಲ್ಲ ಮಗಳೇ."

"ಅವನೂ ಯುದ್ಧರಂಗಕ್ಕೆ ಹೋಗಿರಬೇಕು. ದೇವರ ದಯದಿಂದ ಅವನಿಗೇನೂ ಅಪಾಯವಾಗಿರಲಿಕ್ಕಿಲ್ಲ, ಅಲ್ಲವೆ ?"

"ಅವರಿಗೇನೂ ಆಗಿಲ್ಲ ಮಗಳೇ. ಆದರೆ...." ಎನ್ನುತ್ತಾ ರಾಧಾಬಾಯಿ ಮತ್ತೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ತನ್ನ ಪತಿಯನ್ನು ಕರೆದುಕೊಂಡು ಭಾಸ್ಕರ ರಾಯ ಓಡಿಹೋಗಿದ್ದುದು ಅದೇ ತಾನೆ ಆಕೆಗೆ ತಿಳಿದುಬಂದಿತ್ತು.

"ಏನಾಯಿತವ್ವಾ ?"

"ಮನೆಗೆ ಬಂದು ನಮಗೆ ಮೋರೆ ಕೂಡಾ ತೋರಿಸದೆ, ನಮಗೊಂದು ಮಾತನ್ನು ಹೇಳದೆ ಹೊರಟುಹೋಗಿಬಿಟ್ಟಿದ್ದಾರವ್ವಾ ನಿನ್ನ ತಂದೆ ! ನಮ್ಮ ಗತಿಯೇನಾದೀತು ಎಂಬುದರ ಪರಿವೆಯೇ ಅವರಿಗಿರಲಿಕ್ಕಿಲ್ಲ....ಅಯ್ಯೋ...."

ವಾಸ್ತವವಾಗಿ ರಾಘೋಪಂತನೇನೂ ಹಾಗೆ ಅಸಡ್ಡೆಯಿಂದ ಹೊರಟುಹೋಗಿರಲಿಲ್ಲ, ಪಲಾಯನದ ಯೋಚನೆ ನಿಶ್ಚಿತವಾಗುತ್ತಲೂ ಮನೆಗೆ ಹೋಗಿ ತನ್ನ ಹೆಂಡಿರುಮಕ್ಕಳನ್ನೂ ಕುಟುಂಬದ ಇತರ ಜನರನ್ನೂ ಕಂಡು, ಅವರಿಗೂ ನಗರವನ್ನು ತ್ಯಜಿಸಿ ಹೊರಟು ಸುರಕ್ಷಿತವಾದ ಸ್ಥಳದಲ್ಲಿ ನೆಲಸಲು ತಿಳಿಸಿ ಬರಬೇಕೆಂದು ಆತ ಬಹಳವಾಗಿ ಆಶಿಸಿದ್ದ. ಆದರೆ, ಅದಕ್ಕೆಲ್ಲ ಸಮಯವಿರಲಿಲ್ಲ. ಮನೆಗೆ ಹೋಗಿ ಬರಲು ದೊರೆಯ ಅನುಜ್ಞೆ ದೊರಕಿರಲಿಲ್ಲ.

"ನೀವು ನಮ್ಮ ಸೇನಾನಾಯಕರಾದ್ದರಿಂದ ವೈರಿಗಳ ಗೂಢಚಾರರು ನಿಮ್ಮ ಮೇಲೆ ಕಣ್ಣಿಟ್ಟಿರುವುದೂ ಸಹಜ. ನೀವೀಗ ನಗರದಲ್ಲಿ ಹೋದರೆ ಅವರ ಕೈಗೆ ಸಿಕ್ಕಂತೆಯೇ. ವ್ಯರ್ಥವಾಗಿ ವೈರಿಗಳ ಕೈಯಲ್ಲಿ ಸಿಗಬಾರದು," ಎಂದು ಭಾಸ್ಕರ ರಾಯ ಹೇಳಿ ರಾಘೋಬನನ್ನು ಎಲ್ಲಿಗೂ ಬಿಟ್ಟಿರಲಿಲ್ಲ. ಕುಟುಂಬವತ್ಸಲನಾದ ರಾಘೋಬನಿಗೆ ದುಃಖವುಕ್ಕಿ ಬಂದು ಅಳುವ ಹಾಗಾಗಿತ್ತು. ತನ್ನ ಮನೆಯಲ್ಲಿ ನಡೆಯುತ್ತಿದ್ದ ವಿವಾಹದ ಸಿದ್ಧತೆಗಳನ್ನೂ ಆ ಶುಭದಿನಕ್ಕಾಗಿ ಎದುರುನೋಡುತ್ತ ಕುಳಿತ ತನ್ನ ಕನ್ಯೆಯನ್ನೂ ನೆನೆದು ಆತ ಸಂಕಟದಿಂದ ತಳಮಳಿಸಿದ್ದ. ಭಾಸ್ಕರ ರಾಯನ ಕಣ್ಣು ತಪ್ಪಿಸಿ ಪಾರಾಗಿ ಹೋಗಬೇಕೆಂಬ ವಿಚಾರವೂ ಅವನ ಮೆದುಳಿನಲ್ಲಿ ಸುಳಿದಿತ್ತು. ಆದರೆ ಹಾಗೆ ತಪ್ಪಿಸಿಕೊಂಡರೂ, ವೈರಿಗಳ ಕೈಯಿಂದ ತಪ್ಪಿಸಿ

ಕೊಳ್ಳುವುದು ಅಸಾಧ್ಯವೆಂಬುದು ಹೊಳೆಯುತ್ತಲೂ ಆತ ಖಿನ್ನನಾಗಿ ಸುಮ್ಮ ನಾಗಿದ್ದ. ಭಾಸ್ಕರರಾಯನ ಜತೆಯಲ್ಲಿ ಆತ ಊರು ತ್ಯಜಿಸಿ ಹೋಗಿದ್ದರೂ ಅವನ ಜೀವ ಮಾತ್ರ ನರಗುಂದದಲ್ಲಿನ ತನ್ನ ಮನೆಯಲ್ಲಿಯೆ ಸುತ್ತಾಡುತ್ತಿತ್ತು. ಆಂಗ್ಲ ಸೈನಿಕರು ತನ್ನ ಕುಟುಂಬದ ಸ್ತ್ರೀಯರನ್ನು ಪೀಡಿಸಲಿಕ್ಕಿಲ್ಲವಷ್ಟೆ? ತನ್ನ ಪ್ರೀತಿಯ ಕನ್ಯೆ....ವಿವಾಹಕ್ಕಾಗಿ ಕಾದು ಕುಳಿತ ಕನ್ಯೆ....ಅಯ್ಯೊ ದೇವರೇ! ರಾಘೋ ಪಂತನ ಪ್ರಾಣವೆಲ್ಲಾ ತನ್ನ ಆ ಮಗಳ ಬಳಿಯಲ್ಲಿಯೆ ಕೇಂದ್ರಿತವಾಗಿತ್ತು.

ಆದರೆ, ಈ ವಿಚಾರ ಆ ಮಗಳಿಗಾಗಲಿ ಅವಳ ತಾಯಿಗಾಗಲಿ ತಿಳಿದಿರಲಿಲ್ಲ, ತಿಳಿಯುವುದು ಸಾಧ್ಯವೂ ಇರಲಿಲ್ಲ. ತನ್ನ ಪತಿ ತಮ್ಮೆಲ್ಲರನ್ನೂ ಮರೆತು ಅಕ್ಷಮ್ಯ ಅಪರಾಧ ಮಾಡಿದನೆಂದೇ ರಾಧಾಬಾಯಿ ಬಗೆದಳು. ಊರು ಬಿಟ್ಟು ಹೊರಡ ಬೇಕೆಂಬ ವಿಚಾರವೂ ಅವಳಿಗೆ ಹೊಳೆಯದಿರಲಿಲ್ಲ. ಆದರೆ, ಅಪಾರವಾದ ಸಂಪತ್ತನ್ನು ಹೊತ್ತುಕೊಂಡು ಇಪ್ಪತ್ತು ಮೂವತ್ತು ಜನರ ದೊಡ್ಡ ಪರಿವಾರ ವನ್ನು ಕಟ್ಟಿಕೊಂಡು ಹೀಗೆ ಅವಸರದಲ್ಲಿ ಊರು ತ್ಯಜಿಸುವುದೂ ದುಸ್ತರವೇ ಆಗಿತ್ತು.

ಆದುದಾಗಲೆಂದು ರಾಧಾಬಾಯಿ ಅಲ್ಲಿಯೆ ಕುಳಿತುಕೊಂಡಳು. ಇಂಗ್ಲೀಷರ ದಂಡು ಆ ವೇಳೆಗಾಗಲೇ ಬ್ರಾಹ್ಮಣರ ಓಣಿಯಲ್ಲೂ ಪ್ರವೇಶಿಸಿತ್ತು. ರಾಘೋಪಂತ, ರಾಮರಾಯ ಮೊದಲಾದವರು ಮನೆಗಳಲ್ಲಿ ಅವಿತುಕೊಂಡಿರಬಹುದೆಂಬ ಸಂಶಯ ದಿಂದ ಸೈನಿಕರು ಬ್ರಾಹ್ಮಣರ ಮನೆಗಳಲ್ಲೆಲ್ಲ ಹೊಕ್ಕು ಶೋಧಿಸಿದರು. ರಾಘೋ ಪಂತನ ಮನೆಯನ್ನೂ ಶೋಧಿಸಿದುದಾಯಿತು. "ಯಜಮಾನನೆಲ್ಲಿ?" ಎಂದು ಅವರು ಕೇಳಿದಾಗ ರಾಧಾಬಾಯಿ ತನಗೆ ತಿಳಿಯದೆಂದು ನಿಜವನ್ನೇ ಹೇಳಿದಳು. ಅವರನ್ನು ಶೋಧಿಸಲು ಬಂದ ಆಂಗ್ಲ ಅಧಿಕಾರಿ ಸಭ್ಯನಾಗಿದ್ದುದರಿಂದ ಸ್ತ್ರೀಯರಿಗೂ ಮಕ್ಕಳಿಗೂ ಸೈನಿಕರು ಕೈ ಹಚ್ಚಲಿಲ್ಲ. ರಾಘೋಬನ ಮನೆಯಲ್ಲಿನ ವಸ್ತುಗಳನ್ನೂ ಅವರು ಮುಟ್ಟಲಿಲ್ಲ.

"ನೀವೇನೂ, ಚಿಂತಿಸಬೇಡಿರಿ ತಾಯಿ. ಸೇನಾಪತಿಗಳು ಇಲ್ಲಿಗೆ ಬಂದರೆ ಮಾತ್ರ ನಮಗೆ ತಿಳಿಸದಿರಬೇಡಿರಿ," ಎಂದು ಹೇಳಿ, ಕಾವಲುಪಡೆಯ ಸೈನಿಕರಿಗೆ ಯೋಗ್ಯ ಸೂಚನೆಗಳನ್ನಿತ್ತು ಆ ಅಧಿಕಾರಿ ಹೊರಟುಹೋದ. ನಗರದ ಇತರ ಭಾಗ ಗಳಲ್ಲಿ ಸುಲಿಗೆ ಲೂಟಿ ಅತ್ಯಾಚಾರ ನಡೆದಿದ್ದಾಗಲೂ ರಾಘೋಪಂತ ರಾಮ ರಾಯ ಮೊದಲಾದವರ ಮನೆಗಳಲ್ಲಿ ಅಂಥದೇನೂ ನಡೆಯಲಿಲ್ಲ. ಸಾಕ್ಷಾತ್ ವೆಂಕಟೇಶನೇ

ತಮ್ಮನ್ನು ಕಾಪಾಡಿದನೆಂದು ಆ ಭಾವಿಕರೆಲ್ಲರೂ ನಂಬಿ, ಅವನನ್ನು ಹಾಡಿ ಹೊಗಳತೊಡಗಿದರು.

ಇತ್ತ ನರಗುಂದದ ಸಿರಿಯೆಲ್ಲವೂ ಆಂಗ್ಲ ಸೈನಿಕರಿಂದ ಕೊಳ್ಳೆ ಹೊಡೆಯುಲ್ಪಟ್ಟಿತು. ಅಲ್ಪಾವಧಿಯಲ್ಲಿಯೇ ಕೋಟ್ಯವಧಿ ರೂಪಾಯಿ ಬೆಲೆಯ ವಸ್ತುಗಳು ಲೂಟಿ ಮಾಡಲ್ಪಟ್ಟವು. ವೇಶ್ಯೆಯರ ಮನೆಗಳನ್ನೂ ಅವರು ಬಿಡಲಿಲ್ಲ. ಅಲ್ಲಿನ ಸಿರಿವಂತ ವೇಶ್ಯೆಯೊಬ್ಬಳ ಮನೆಯಲ್ಲಿಯೆ ಲಕ್ಷಾಂತರ ರೂಪಾಯಿಯ ಮುತ್ತು ರತ್ನ ಬೆಳ್ಳಿ ಬಂಗಾರಗಳ ಒಡವೆಗಳು ದೊರೆತವು. ಓಡಿಹೋದ ನಾಗರಿಕರು ತಮ್ಮ ಸಂಪತ್ತನ್ನು ನೆಲದಲ್ಲಿ ಹೂಳಿರಬಹುದೆಂದು ಭಾವಿಸಿದ ಸೈನಿಕರು ನರಗುಂದದ ಅನೇಕ ಮನೆಗಳನ್ನು ಅಗಿದು ಮಣ್ಣು ಮಣ್ಣು ಮಾಡಿದರು.

ಮಲಿಕಾಳ ಮನೆ ಮಾತ್ರ ಕೃಷ್ಣಾಜಿಯ ಕಟಾಕ್ಷದಿಂದಾಗಿ ಸುರಕ್ಷಿತವಾಗಿ ಉಳಿದುಕೊಂಡಿತು. ಆಂಗ್ಲ ಸೇನಾಪತಿಯ ವಿಶ್ವಾಸಕ್ಕೆ ಪಾತ್ರನಾಗಿದ್ದ ಕೃಷ್ಣಾಜಿಯನ್ನು ಕೆಣಕುವ ಧೈರ್ಯ ಯಾವ ಸೈನಿಕನಿಗೂ ಇರಲಿಲ್ಲ. ಅಂದಿನ ದಿನ ರಾತ್ರೆ ಕೃಷ್ಣಾಜಿ ಅಲ್ಲಿಯೆ ತಳವೂರಲು ಪ್ರಯತ್ನಿಸಿ ವಿಫಲನಾದ. ಆ ದೇಶದ್ರೋಹಿಯ ಮುಖ ನೋಡುವ ಇಷ್ಟವೂ ತನಗಿಲ್ಲವೆಂದು ಮಲಿಕಾ ಸ್ಪಷ್ಟವಾಗಿಯೆ ಹೇಳಿಬಿಟ್ಟಳು.

"ಅವರ ಕೃಪೆಯಿಂದ ನಮ್ಮ ಮನೆ ನಮ್ಮ ಸಂಪತ್ತು ಉಳಿಯಿತು. ಅವರ ಉಪಕಾರವನ್ನು ಏಳೇಳು ಜನ್ಮಗಳಲ್ಲಿ ತೀರಿಸಲೂ ಆಗಲಿಕ್ಕಿಲ್ಲ. ಅಂಥವರಿಗೆ ಹೀಗೆಲ್ಲಾ ಮಾಡುತೀಯಲ್ಲ ಮಲಿಕಾ?" ಎಂದು ಅವಳ ತಾಯಿ ಗದರಿಸಿಕೊಂಡಳು.

ಮಗಳು ಮಾತ್ರ ಆಗಲೂ ಮಣಿಯಲಿಲ್ಲ.

"ನಮಗೇನು ಇವನ ಉಪಕಾರ ಬೇಕಾಗಿರಲಿಲ್ಲ. ತನ್ನ ನೀಚಸ್ವಾರ್ಥಕ್ಕಾಗಿ ತಾನೇ ಅಷ್ಟು ಮಾಡಿದ್ದಾನೆ. ನಿಜವಾಗಿ ಈ ಮನೆಮುರುಕನ ನೆರಳು ನೋಡುವುದೂ ಕೂಡಾ ನನಗೆ ಅಸಹ್ಯವೆನಿಸುತ್ತದೆ."

"ಕಸಬು ಮಾಡುವವರಾದ ನಮ್ಮಂಥವರಿಗೆ ಇಂಥಾ ಉಸಾಬರಿಯೆಲ್ಲಾ ಯಾಕೆ ಮಲಿಕಾ? ಪಂತರಿಂದ ಹಣ ಬರುತ್ತದೆ. ನಮಗೆ ಅಷ್ಟು ಸಾಕು."

"ಅವನ ಹಣ ಹಾಳಾಗಲಿ! ಆ ಚಾಂಡಾಲನ ಮುಖದರ್ಶನವೂ ಬೇಡ," ಎನ್ನುತ್ತಾ ಮಲಿಕಾ ಮನೆಬಿಟ್ಟು ಹೊರಡಲಣಿಯಾದಳು. ರಾಜಶೇಖರನು

ಸುರಕ್ಷಿತವಾಗಿರುವನೊ ಇಲ್ಲವೊ ಎಂದು ಅವಳ ಹೃದಯ ಒಂದೆಸಮನೆ ಚಿಂತಿಸುತ್ತಿತ್ತು.

ನಗರದಲ್ಲಿ ಕೋಲಾಹಲ ನಡೆದಿದ್ದ ಆ ಸಮಯದಲ್ಲಿ ತಾಯಿ ಅವಳನ್ನು ಹೊರಗೆ ಬಿಡುವುದು ಸಾಧ್ಯವಿತ್ತೇ? ಹಸಿದ ತೋಳಗಳಂತೆ ಬೀದಿ ಬೀದಿ ಸುತ್ತುತ್ತಿದ್ದ ಸೈನಿಕರ ಕೈಗೆ ಸಿಕ್ಕಿಬಿದ್ದರೆ ಮತ್ತೆ ಅವಳು ಮನೆಗೆ ಮರಳುವುದೂ ಸಾಧ್ಯವಾಗುವಂತಿರಲಿಲ್ಲ.

"ಎಲ್ಲಿಗೆ ಹೊರಟೆ ಮಲಿಕಾ? ನಿನಗೇನು ಹುಚ್ಚು ಹಿಡೀತೇ?"

"ಅದೊಂದು ಉಳಿದಿದೆ ಅಷ್ಟೆ," ಎನ್ನುತ್ತಾ ಅವಳು ಬಾಗಿಲು ತೆರೆದು ಹೊರಡುತ್ತಿದ್ದಂತೆಯೆ ಕೃಷ್ಣಾಜಿಯ ಅಪ್ಪಣೆಯಂತೆ ಅಲ್ಲಿ ಕಾವಲು ಮಾಡುತ್ತಿದ್ದ ಸೈನಿಕರು ಅವಳನ್ನು ತಡೆದು ನಿಲ್ಲಿಸಿದರು.

"ಬಿಡಿರಿ. ಬಿಡಿರಿ. ನನ್ನನ್ನು ಬಿಡಿರಿ," ಎಂದು ಆಕೆ ಕೂಗಿಕೊಂಡಳು.

ಸೈನಿಕರು ಮಾತನಾಡಲಿಲ್ಲ. ಅವಳನ್ನು ಮತ್ತೆ ಒಳಗೆ ನೂಕಿ ಹೊರಗಿನಿಂದ ಬಾಗಿಲು ಹಾಕಿಕೊಂಡರು.

## ೧೭

"ದಣಿವಾಯಿತೇ ರಾಘೋಬ?" ಎಂದು ಭಾಸ್ಕರರಾಯ ಕನಿಕರದಿಂದ ವಿಚಾರಿಸಿದ. ರಾಘೋಪಂತನ ಮುಖವನ್ನು ನೋಡಿದರೂ ಸಾಕು, ಯಾರಿಗಾದರೂ 'ಅಯ್ಯೋ' ಎನಿಸುವಂತಿತ್ತು. ಆಯಾಸ, ಬೇಸರು, ವ್ಯಸನಗಳ ಹೊರತು ಆ ಮುಖದ ಮೇಲೆ ಇನ್ನಾವ ಭಾವವೂ ಇರಲಿಲ್ಲ. ವೇಗವಾಗಿ ಓಡಿ ಬಂದ ನಾಯಿಯಂತೆ ಆತ ಭರದಿಂದ ಉಸಿರು ಬಿಡುತ್ತಿದ್ದ. ನಡೆದು ನಡೆದು ಕಾಲು ಸೋತು ಹೋಗಿದ್ದುವು. ಹಸಿದ ಹೊಟ್ಟೆ ತಾಳ ಹಾಕುತ್ತಿತ್ತು. ಬಾಯಿ ಆರಿಹೋದುದರಿಂದ ಉಂಟಾದ ಸಂಕಟ ಬೇರೆ.

"ಸ್ವಲ್ಪ ನಿಂತು ನೀರನ್ನಾದರೂ ಕುಡಿದು ಹೋದರಾಗದೇ ಮಹಾರಾಜ್?" ಎಂದು ದೀನಸ್ವರದಲ್ಲಿ ಕೇಳಿಕೊಂಡ ರಾಘೋಬ.

ನರಗುಂದದಿಂದ ಹೊರಟ ಆ ಎಂಟು ಜನರ ಗುಂಪು, ರಾಜಮಾರ್ಗಗಳನ್ನು ಬಿಟ್ಟು, ಅಡ್ಡಹಾದಿ ಹಿಡಿದು, ಅರಣ್ಯ ಪ್ರವೇಶಿಸಿ, ಎಲ್ಲಿಯೂ ನಿಲ್ಲದೆ ಎಲ್ಲಿಯೂ ಕೂಡ್ರದೆ ಒಂದೇಸಮನೆ ಮಾರ್ಗಕ್ರಮಿಸುತ್ತ ಬಂದಿತ್ತು. ತಾವು ನಗರ ತ್ಯಜಿಸಿ

ಹೊರಟುಹೋದ ಸಮಾಚಾರ ವೈರಿಗಳಿಗೆ ಕೂಡಲೇ ಗೊತ್ತಾಗಿರಲು ಸಾಕು. ತಮ್ಮನ್ನು ಜೀವಂತ ಹಿಡಿದು ತರಬೇಕೆಂದು ಆಜ್ಞೆ ವಿಧಿಸಿ ಅವರು ಸೈನಿಕರನ್ನೂ ಅಟ್ಟಿರಲು ಸಾಕು. ಬೇಟೆಯ ನಾಯಿಗಳಂತೆ ಅವರು ತಮ್ಮನ್ನು ಹುಡುಕಿ ಹಿಡಿದೊಯ್ಯಲು ಯತ್ನಿಸುವುದೂ ಖಂಡಿತ. ಅವರ ಕೈಗೆ ಸಿಗದೆ ಪಾರಾಗಿ ಹೋಗ ಬೇಕಿದ್ದರೆ, ಒಂದು ನಿಮಿಷವನ್ನೂ ವ್ಯರ್ಥಗೊಳಿಸದೆ, ವಿಶ್ರಾಂತಿಯ ಯೋಚನೆಗೂ ಎಡೆಗೊಡದೆ ಆದಷ್ಟು ಬೇಗ ಆದಷ್ಟು ದೂರ ಹೋಗಬೇಕಾದುದು ಅಗತ್ಯ ವಾಗಿತ್ತು. ಸುರಕ್ಷಿತ ತಾಣಕ್ಕೆ ಹೋಗಿ ತಲುಪುವವರೆಗೂ ಹಸಿವು, ದಾಹ, ಆಯಾಸ ಯಾವುದನ್ನೂ ಲೆಕ್ಕಿಸುವಂತಿರಲಿಲ್ಲ.

ಹಾಗೆ ಯೋಚಿಸಿದ ಭಾಸ್ಕರರಾಯ ನಡುವೆ ಎಲ್ಲಿಯೂ ನಿಂತುಕೊಳ್ಳದೆ ಎಲ್ಲರಿಗಿಂತ ತಾನೇ ಮುಂದಾಗಿ ನಡೆಯುತ್ತ ಬಂದಿದ್ದ.

ಆದರೆ, ರಾಘೋಬನ ದೀನಸ್ಥಿತಿಯನ್ನು ಕಂಡ ಬಳಿಕ ಅವನ ಮನಸ್ಸೂ ಕರಗಿತು. ನೀರಡಿಸಿ ಮೇಲುಸಿರು ಬಿಡುತ್ತಿದ್ದ ರಾಘೋಬನಲ್ಲಿ ಹಾಗೆಯೇ ಹೆಚ್ಚು ಹೊತ್ತು ನಡೆಯುವ ತ್ರಾಣವೂ ಉಳಿದಿರಲಿಲ್ಲ.

"ಒಳ್ಳೇದು. ಅದೋ, ಅಲ್ಲೊಂದು ಝರಿಯಿದೆ. ಎಲ್ಲರೂ ನೀರು ಕುಡಿದು ಮುಂದೆ ಹೋಗೋಣ."

"ಭಾಸ್ಕರರಾಯ ಅಷ್ಟು ಹೇಳಿದುದೇ ತಡ, ರಾಘೋಬ ಓಡೋಡುತ್ತ ಹೋಗಿ ಝರಿಯ ಮೇಲೆ ಬಾಗಿ ಕುಳಿತು, ಕೈಕಾಲು ಮುಖ ತೊಳೆದುಕೊಳ್ಳುವ ಗೊಡವೆಗೂ ಹೋಗದೆ ಗಟಗಟನೆ ನೀರು ಕುಡಿದ. ಹೊಟ್ಟೆಯಲ್ಲೆಲ್ಲ ನೀರು ತುಂಬಿಕೊಳ್ಳುತ್ತಲೂ ಅವನ ಮುಖದ ಮೇಲೆ ಕೊಂಚ ಬಣ್ಣವೇರಿತು.

"ವೆಂಕಟೇಶಾ! ವೆಂ ಕ ಟೇ ಶಾ! ದಯಾಘನಾ! ದಯಾಘನಾ!" ಎನ್ನುತ್ತಾ ಆತ ನೆತ್ತಿಗೂ ಕಣ್ಣುಗಳಿಗೂ ನೀರು ಸಿಂಪಡಿಸಿಕೊಂಡು ಝರಿಯಿಂದ ದೂರ ಸರಿದು ಇತರರಿಗೆ ಸ್ಥಳ ಮಾಡಿಕೊಟ್ಟ.

"ಸಮಾಧಾನವಾಯ್ತೇ ರಾಘೋಬ?" ಕೇಳಿದವನು ಭಾಸ್ಕರರಾಯ.

"ಆಯ್ತು ಮಹಾರಾಜ್. ನೀರು ಕುಡಿಯಲು ಅಪ್ಪಣೆ ಕೊಟ್ಟು ಉಪಕಾರ ಮಾಡಿದಿರಿ."

"ಬರೀ ನೀರಿನಿಂದ ತೃಪ್ತಿಯಾಯಿತೇ ರಾಘೋಬಾ?"

ನೀರನ್ನು ಕುಡಿದ ರಾಘೋಬನ ಹೊಟ್ಟೆ ಅಷ್ಟರಲ್ಲಿಯೇ ಆಹಾರಕ್ಕಾಗಿ ಬೇಡತೊಡಗಿತ್ತು. ಎಂಟು ಹತ್ತು ದಿನಗಳವರೆಗೂ ಉಪಾಹಾರಕ್ಕೆ ಕೊರತೆ

ಯಾಗದಿರಲೆಂದು ಯಮುನಾಬಾಯಿ ಸಾಕಷ್ಟು ಉಂಡೆಗಳನ್ನೂ ಅವಲಕ್ಕಿಯನ್ನೂ ಕಟ್ಟಿ ಅಡುಗೆಯವನ ಕೈಯಲ್ಲಿ ಕೊಟ್ಟು ಕಳಿಸಿದ್ದಳು. ಅಡುಗೆಯವನನ್ನು ಹೊರತು ಪಡಿಸಿ ಇನ್ನೂ ಮೂವರು ಸೇವಕರು ದೊರೆಯ ಜತೆಯಲ್ಲಿ ಬಂದಿದ್ದರು. ಅಕ್ಕಿ ಬೇಳೆ ತುಪ್ಪ ಮೊದಲಾದ ಆಹಾರ ಪದಾರ್ಥಗಳನ್ನೂ ಅವರು ಹೊತ್ತು ತಂದಿದ್ದರು.

ದಟ್ಟವಾಗಿ ಬೆಳೆದಿದ್ದ ವೃಕ್ಷಗಳ ನೆರಳಲ್ಲಿ ಅವರು ಕುಳಿತುಕೊಂಡಿದ್ದರು. ಅಲ್ಲಿಯೆ ಇಳಿಜಾರು ಪ್ರದೇಶದಲ್ಲಿ ಝರಿ ಹರಿದುಹೋಗುತ್ತಿತ್ತು. ದೊಡ್ಡ ದೊಡ್ಡ ವೃಕ್ಷಗಳು ಮರೆಯಾಗಿದ್ದುದರಿಂದ ಬಿಸಿಲಿನ ತಾಪ ಎಷ್ಟು ಮಾತ್ರಕ್ಕೂ ಇರಲಿಲ್ಲ. ನೀರು ಕುಡಿದು ಆ ತಂಪಿನಲ್ಲಿ ವಿರಮಿಸಿದ್ದ ಹಾಗೆ ಭಾಸ್ಕರರಾಯನ ಮನಸ್ಸು ತನ್ನ ತಾಯಿ–ಪತ್ನಿಯರನ್ನು ನೆನೆದು, ಅವರ ಗತಿಯೇನಾಗಿರಬಹುದೋ ಎಂದು ಚಿಂತಿಸ ತೊಡಗಿತು.

ತಾನೇನೊ ಇಲ್ಲಿ, ಸದ್ಯಕ್ಕಂತೂ ಸುರಕ್ಷಿತವಾಗಿರುವ ತಾಣದಲ್ಲಿ ನೀರು ಸೇವಿಸಿ ತೃಪ್ತನಾಗಿ ಕುಳಿತಿದ್ದಾನೆ. ಜತೆಯಲ್ಲಿ ಇನ್ನೂ ಏಳು ಜನರಿದ್ದಾರೆ. ಪ್ರಸಂಗ ಬಂದರೆ ಏಳೂ ಜನರು ಕೂಡಿ ವೈರಿಗಳನ್ನೆದುರಿಸಲು ಸಾಧ್ಯವಿದೆ. ಆದರೆ, ತನ್ನ ಆ ಪ್ರೀತಿಯ ತಾಯಿ, ಒಲವಿನ ಪತ್ನಿ....ಅವರೆಲ್ಲಿರುವರೊ....ಅವರ ಜತೆ ಯಲ್ಲಿ ಯಾರಾದರೂ ಇರುವರೊ ಇಲ್ಲವೊ....

ಅರಮನೆಯನ್ನು ಬಿಟ್ಟು ಹೊರಗಡೆ ಅಡಿಯನ್ನೇ ಇಡದಿದ್ದ ತನ್ನ ತಾಯಿಯೂ ಕೋಮಲ ಜೀವಿಯಾದ ಪತ್ನಿಯೂ ಗುಡ್ಡಬೆಟ್ಟಗಳಲ್ಲಿ ನಡೆದು ಹೋಗುತ್ತಿರುವಾಗ ಅನುಭವಿಸುತ್ತಿರಬಹುದಾದ ಕಷ್ಟವನ್ನು ನೆನೆದೊಡನೆ ಭಾಸ್ಕರ ರಾಯನ ಕರುಳಿನಲ್ಲಿ ಕಲಮಲವಾಯಿತು. ಅರಣ್ಯದಲ್ಲಿ ಅವರು ಹಾದಿ ತಪ್ಪಿಸಿ ಕೊಂಡರೇನು ಗತಿ ? ಆಕಸ್ಮಾತ್ತಾಗಿ ಹುಲಿ ಚಿರತೆಗಳಂಥ ಹಿಂಸ್ರಪಶುಗಳು ಅವರ ಮೇಲೆ ಬಂದೆರಗಿದರೇನು ಗತಿ ?

ಭಾಸ್ಕರರಾಯನ ಶರೀರ ಕಂಪಿಸಿತು. ತಾನು ಅವರನ್ನು ಬಿಟ್ಟು ಬಂದದ್ದು ತಪ್ಪಾಯಿತೇನೋ ಎಂದು ಅವನಿಗೆ ಪಶ್ಚಾತ್ತಾಪವಾಯಿತು. ತಾನೂ ಅವರ ಜತೆಯಲ್ಲಿದ್ದಿದ್ದರೆ ಸಂಕಟಕಾಲದಲ್ಲಿ ರಕ್ಷಣೆಯಾದರೂ ಇರುತ್ತಿತ್ತು. ಈಗ ಪಾಪ, ಅವರು ನಿರ್ಗತಿಕರಂತಾಗಿರಬಹುದು. ತನ್ನಂಥ ಗಂಡುಸು ಇದ್ದೂ ಇಲ್ಲದಂತಾ ಯಿತು ಅವರ ಪಾಲಿಗೆ....

ರಾಘೋಬನ ವಿಚಾರಗಳೂ ತನ್ನ ಕುಟುಂಬದವರ ನೆನಪುಗಳಲ್ಲಿಯೆ

ಕೇಂದ್ರಿತವಾಗಿದ್ದುವು. ಮಗಳನ್ನೂ ಪತ್ನಿಯನ್ನೂ ಎಳೆಮಕ್ಕಳನ್ನೂ ನೆನೆದು ನೆನೆದು ಅವನ ಹೃದಯ ಮೂಕವಾಗಿ ರೋದಿಸುತ್ತಲಿತ್ತು.

ವಿಷ್ಣು ಕುಲಕರ್ಣಿಗೆ ಮಾತ್ರ ಅಂಥ ಚಿಂತೆ ಯಾವುದೂ ಇರಲಿಲ್ಲ. ಹೇಳಿ ಕೇಳಿ ಬ್ರಹ್ಮಚಾರಿ. ಹಿಂದಿಲ್ಲ, ಮುಂದಿಲ್ಲ. ಮನೆತನದ ಜವಾಬ್ದಾರಿಯಿಲ್ಲ. ಶ್ರೀ ರಾಮಚಂದ್ರನಿಗೆ ಹನುಮಂತನಿದ್ದ ಹಾಗೆ ಭಾಸ್ಕರರಾಯನಿಗೆ ಈ ವಿಷ್ಣು. ಅವನ ಚಿಂತೆಯೇನಿದ್ದರೂ ಅದೆಲ್ಲವೂ ಒಡೆಯನನ್ನು ಕುರಿತದ್ದು. ನೀರು ಕುಡಿದು ಭಾಸ್ಕರರಾಯ ವಿಶ್ರಮಿಸಿಕೊಂಡಿದ್ದಾಗಲೂ ವಿಷ್ಣು ಮಾತ್ರ ವಿರಮಿಸದೆ ಮೈಯೆಲ್ಲ ಕಣ್ಣಾಗಿ ಮೈಯೆಲ್ಲ ಕಿವಿಯಾಗಿ ವೈರಿಗಳ ಸುಳುವಿಗಾಗಿ ಎಚ್ಚರದಿಂದ ಕಾದಿದ್ದ. ಭಾಸ್ಕರರಾಯನ ಸೇವೆಯಲ್ಲಿರುವವರೆಗೂ ಅವನ ಮೈಗಾವಲಿನ ಕೆಲಸವೇ ವಿಷ್ಣುವಿನ ಉಸಿರು, ಅವನ ಬದುಕು; ಅವನ ಲಕ್ಷ್ಯವೆಲ್ಲಾ ಅದರಲ್ಲಿಯೆ.

"ಹಸಿವಾಗಿದೆಯೇನಪ್ಪಾ ವಿಷ್ಣು ?" ಅದು ದೊರೆಯ ಪ್ರಶ್ನೆ.

ಹಸಿವು ? ವಿಷ್ಣುವಿಗೆ ಅದರ ಅರಿವೂ ಇರಲಿಲ್ಲ. ದೊರೆ ಅದರ ಪ್ರಸ್ತಾಪ ವೆತ್ತಿದಾಗಲೇ ವಿಷ್ಣುವಿಗೆ ಅದರ ನೆನಪು.

"ನಿಮಗೂ ಹಸಿವಾಗಿರಬಹುದು. ಇಲ್ಲೇ ಅಡಿಗೆ ಮಾಡಿ ಊಟ ಮಾಡೋಣ ಭಾಸ್ಕರರಾಯ ಮತ್ತೆ ವಿಚಾರಿಸಿದ, ಜತೆಯವರೆಲ್ಲರನ್ನೂ.

ಇನ್ನೂ ಎರಡು ಮೂರು ತಾಸುಗಳವರೆಗಾದರೂ ತಾವು ನಡೆಯುತ್ತಲೇ ಇದ್ದರೊಳ್ಳೆಯದೆಂದು ವಿಷ್ಣುವಿಗನ್ನಿಸಿತ್ತು. ಆತನಂತೂ ಸಾಯಂಕಾಲದವರೆಗೂ ಹಸಿವನ್ನು ತಡೆ ಹಿಡಿದು ಹಾಗೆ ಮಾರ್ಗಕ್ರಮಿಸಬಲ್ಲ.

ಆದರೆ ರಾಘೋಬ ? ಇನ್ನಿತರರು ?

"ಇಲ್ಲಿ ಸ್ಥಳವೂ ಬಹಳ ಚೆನ್ನಾಗಿದೆಯಲ್ಲವೇ ಮಹಾರಾಜ್ ? ಅಡಿಗೆಗೆ ಪ್ರಶಸ್ತವಾದ ಸ್ಥಳ. ಸ್ನಾನಕ್ಕೂ ಅನುಕೂಲವುಂಟು. ಇಲ್ಲೇ ಮಾಡಿದರೂ ಸರಿಯೆ," ಎಂದ ರಾಘೋಬ.

ನಿಜವಾಗಿ, ಅಲ್ಲಿ ಹೆಚ್ಚುಕಾಲ ಉಳಿಯುವ ಇಷ್ಟ ಭಾಸ್ಕರರಾಯನಿಗಿರಲಿಲ್ಲ. ಆದರೂ, ರಾಘೋಬನ ಮನಸ್ಸು ನೋಯಿಸಲಾರದೆ ಆತ ಅಡುಗೆಗೆ ಅನುಮತಿಯೀಯಬೇಕಾಯಿತು.

ಆಳುಗಳು ಅತ್ತಿತ್ತ ಹೋಗಿ ಸೌದೆ ಶೇಖರಿಸಿ ತಂದರು. ಕಲ್ಲುಗಳಿಂದ ಒಲೆ ಹೂಡಿ ಬೆಂಕಿ ಹೊತ್ತಿಸಿದುದಾಯಿತು. ಪಾತ್ರೆ ಹೊರಬಂದು ಒಲೆಯೇರಿ ಕುಳಿತುವು. ಅಕ್ಕಿ ಬೇಳೆ ಬೇಯತೊಡಗಿದುವು.

ಒಲೆಗಳಿಂದೆದ್ದು ವೃಕ್ಷಗಳ ಕೆಳಗಡೆ ಸುರುಳಿಸುತ್ತಿಕೊಳ್ಳುತ್ತಿದ್ದ ಹೊಗೆಯನ್ನು ಸುಮ್ಮನೆ ದಿಟ್ಟಿಸುತ್ತ ಭಾಸ್ಕರರಾಯ, ಅರ್ಧ ತನ್ನಷ್ಟಕ್ಕೇ ಎನ್ನುವಂತೆ ಮಾತನಾಡಿದ.

"ಎಂಥಾ ಸ್ಥಿತಿ ಬಂದಿತಲ್ಲ ನಮಗೆ ರಾಘೋಬಾ? ಹೀಗೆಲ್ಲ ಆಗಬಹುದೆಂದು ಯಾರು ತಿಳಿದಿದ್ದರು? ಅಂತೂ ದೇವರ ಲೀಲೆ ವಿಚಿತ್ರ ಎಂಬುಸುಳ್ಳಲ್ಲ."

"ಅದೇನೋ ನಿಜ ಮಹಾರಾಜ್. ಆದರೂ, ಆ ನೀಚ ಚಾಂಡಾಲರು ಮನೆಮುರುಕತನದ ಕೃತ್ಯಕ್ಕೆ ಕೈಹಾಕದಿದ್ದರೆ ಇಂಥಾ ಸ್ಥಿತಿ ಬರುತ್ತಿರಲಿಲ್ಲ."

ಆ ಮಾತಿಗೆ ತಲೆದೂಗುತ್ತ ವಿಷ್ಣುವೂ ಹೇಳಿದ:

"ಮದ್ದಿನ ಸಂಗ್ರಹವನ್ನು ಅವರು ಕೆಡಿಸದಿದ್ದರೆ ನಮಗೆ ಅಪಜಯ ವೊದಗುತ್ತಿರಲಿಲ್ಲ–ನಮ್ಮ ದುರ್ಗವೋ ಅತ್ಯಂತ ಭದ್ರವಾದದ್ದು. ವೈರಿಗಳಿಂದ ನಮಗೆ ಅಂಜಿಕೆಯಿರಲಿಲ್ಲ. ನಮ್ಮ ಸೈನಿಕರೂ ಗೋಲಂದಾಜರೂ ಯಾರಿಗೂ ಕಡಮೆಯವರಲ್ಲ. ಮದ್ದು ತೀರಿದ ಬಳಿಕ ಅವರಾದರೂ ಏನು ಮಾಡಿಯಾರು?"

"ಆ ಕೃತಘ್ನರು ನನ್ನ ಕೈಗೆ ಸಿಕ್ಕಿದ್ದರೆ ಅವರನ್ನು ತುಂಡು ತುಂಡಾಗಿ ಕಡಿದು ನನ್ನ ಸಿಟ್ಟನ್ನಾದರೂ ಶಾಂತಗೊಳಿಸಬಹುದಿತ್ತು. ಅದೂ ಆಗಲಿಲ್ಲ;" ಎಂದ ಭಾಸ್ಕರರಾಯ.

"ಇಂದಿಲ್ಲ ನಾಳೆ ಅವರಿಗೆ ತಕ್ಕ ಪ್ರಾಯಶ್ಚಿತ್ತವಾಗದಿರದು ಮಹಾರಾಜ್. ಅಂಥಾ ದುರ್ಯೋಧನ ದುಶ್ಶಾಸನರಿಗೇ ಶಿಕ್ಷೆಯಾಗದಿರಲಿಲ್ಲ. ಇನ್ನು ಇವರಿಗೆ...." ಎಂದ ರಾಘೋಬ.

"ಕೃಷ್ಣನ ಸಹಾಯವಿದ್ದಿತೆಂದು ಪಾಂಡವರು ಕೌರವರನ್ನು ಸೋಲಿಸಿದರು. ನಮಗೆ ಮಾತ್ರ ಯಾರ ಸಹಾಯವೂ ಸದ್ಯಕ್ಕಂತೂ ಇಲ್ಲವಲ್ಲ?" ಎಂದ ವಿಷ್ಣು.

"ನೀನನ್ನುವುದು ನಿಜ ವಿಷ್ಣು. ಯಾರ ಸಹಾಯವೂ ಇಲ್ಲವೆಂತಲೇ ನಾವೀಗ ಕಾಡುಗುಡ್ಡಗಳಲ್ಲಿ ಅಲೆಯಬೇಕಾಗಿ ಬಂದಿದೆ."

"ಅಂಥಾ ಪಾಂಡವರಿಗೂ ವನವಾಸ ತಪ್ಪಲಿಲ್ಲ."

"ತಪ್ಪಲಿಲ್ಲ. ನಿಜ. ಆದರೆ ವನವಾಸದಲ್ಲೂ ಅವರಿಗೆ ಕೃಷ್ಣನ ಸಹಾಯವಿತ್ತು. ನಮಗೆ?"

"ಸದ್ಯಕ್ಕಂತೂ ನಮಗೆ ನಾವೇ ಸಹಾಯಕರು. ನಮ್ಮ ಸ್ವಂತಶಕ್ತಿಯ ಬಲದ ಮೇಲೇ ನಾವು ವೈರಿಗಳಿಂದ ಪಾರಾಗಬೇಕಾಗಿದೆ. ನಮ್ಮ ವಿಚಾರ

ಹಾಗಿರಲಿ. ಪೂಜ್ಯ ಮಾತೋಶ್ರೀಯವರು ಎಷ್ಟು ವಿಘ್ನಗಳನ್ನೆದುರಿಸ ಬೇಕಾಗಿದೆಯೊ ಏನೊ."

"ಮಾತೋಶ್ರೀಯವರು ಮತ್ತು ರಾಣೀ ಸರಕಾರದವರ ಸಂಗಡ ನಾನಾದರೂ ಹೋಗಬಹುದಿತ್ತು. ಮಹಾರಾಜರು ಅಪ್ಪಣೆ ಮಾಡಿದ್ದರೆ. ಅವರ ಕೂದಲೆಳೆಯೂ ಕೊಂಕದಂತೆ ರಕ್ಷಿಸಿಕೊಂಡು ಹೋಗಿ ಸುರಕ್ಷಿತ ಸ್ಥಳದಲ್ಲಿ ಸೇರಿ ಸುತಿದ್ದೆ," ಎಂದ ವಿಷ್ಣು.

"ಹೌದು ವಿಷ್ಣು. ನೀನು ಹೋಗಿದ್ದರೆ ಹಾಗೇ ಮಾಡುತ್ತಿದ್ದೆ. ಸಂಶಯ ವಿಲ್ಲ. ಆದರೆ ಗಡಿಬಿಡಿಯಲ್ಲಿ ನನಗೆ ಈ ವಿಚಾರವೇ ಹೊಳೆಯಲಿಲ್ಲ," ಎಂದು ವಿಷಾದದಿಂದ ನುಡಿದ ಭಾಸ್ಕರರಾಯ. ಕೋಟೆಯನ್ನು ಬಿಟ್ಟು ಹೊರಡುವಾಗ ಅವನ ಬುದ್ಧಿಗೇ ಮಂಕು ಕವಿದುಕೊಂಡಿತ್ತು. ಶಸ್ತ್ರಾಸ್ತ್ರಗಳನ್ನು ಜತೆಯಲ್ಲಿ ತರಬೇಕೆಂಬ ವಿಚಾರವೂ ಅವನಿಗೆ ಹೊಳೆದಿರಲಿಲ್ಲ. ವಿಷ್ಣುವಿನ ಬಳಿಯಲ್ಲಿ ಯಾವಾಗಲೂ ಇರುತ್ತಿದ್ದ ಕಿರುಗತ್ತಿಯೊಂದನ್ನುಳಿದು ಆ ಗುಂಪಿನಲ್ಲಿ ಇನ್ನಾರ ಬಳಿಯಲ್ಲಿಯೂ ಶಸ್ತ್ರಗಳಿರಲಿಲ್ಲ. ಹಠಾತ್ತಾಗಿ ವೈರಿಗಳು ಬಂದೆರಗಿದರೆ ಇವರು ಮಲ್ಲಯುದ್ಧಕ್ಕೇ ನಿಲ್ಲಬೇಕಾಗುತಿತ್ತು!

"ಈಗಲಾದರೂ ಏನಂತೆ? ತಾವು ಅಪ್ಪಣೆ ಕೊಟ್ಟರೆ ನಾನು ಹೋಗಿ ಮಾತೋಶ್ರೀಯವರನ್ನೂ ರಾಣೀ ಸರಕಾರದವರನ್ನೂ ಪತ್ತೆಮಾಡಿ ಅವರನ್ನು ರಕ್ಷಿಸುವೆ," ಎಂದ ವಿಷ್ಣು.

ತನ್ನೊಡನೆ ಬಂದಿದ್ದ ಜನರಲ್ಲೆಲ್ಲಾ ಗಟ್ಟಿಗನೂ ಕೆಚ್ಚೆದೆಯವನೂ ಆಗಿದ್ದ ವಿಷ್ಣುವನ್ನು ದೂರ ಕಳಿಸಲು ಭಾಸ್ಕರರಾಯ ಸಿದ್ಧನಾಗಲಿಲ್ಲ. ಈಗ ಅವನನ್ನು ಕಳಿಸುವುದರಿಂದ ಪ್ರಯೋಜನವೂ ಆಗಲಾರದೆಂದೇ ಅವನಿಗನಿಸಿತು. ತಾವು ಕೋಟೆಯಿಂದ ಹೊರಟ ಮರುಗಳಿಗೆಯಲ್ಲಿಯೆ ತನ್ನ ತಾಯಿಯೂ ಪತ್ನಿಯೂ ಹೊರಟು ಬಿಟ್ಟಿರಬಹುದು. ಅವರು ಯಾವ ಕಡೆಗೆ ಹೋದರೆಂಬುದು ಯಾರಿಗೂ ಗೊತ್ತಿರಲಾರದು. ವಿಷ್ಣು ಅವರನ್ನು ಹುಡುಕುವುದಾದರೂ ಎಲ್ಲಿ? ಹುಡುಕುತ್ತ ನಡೆದಾಗ ಅವನೇ ವೈರಿಗಳ ಕೈಗೆ ಸಿಕ್ಕಿ ಬೀಳುವ ಸಂಭವವೂ ಇಲ್ಲದಿಲ್ಲ. ಇಂಥ ವೀರಾಗ್ರಣಿಯನ್ನು, ವಿಶ್ವಾಸದ ಸೇವಕನನ್ನು ವ್ಯರ್ಥವಾಗಿ ಕಳೆದುಕೊಳ್ಳುವುದು ಸರಿಯೆ?

"ಊ ಹೂಂ. ಅದೇನು ಅವಶ್ಯವಿಲ್ಲ," ಎಂದಿಷ್ಟೆ ನುಡಿದು ಭಾಸ್ಕರರಾಯ ಮೌನವಹಿಸಿದ.

ಕೆಲವು ಕ್ಷಣ ಯಾರೂ ಮಾತನಾಡಲಿಲ್ಲ. ಪಾತ್ರೆಗಳಲ್ಲಿ ಅಕ್ಕಿ ಕುದಿಯುವ ಸಪ್ಪಳನ್ನುಳಿದು ಬೇರಾವ ಸದ್ದೂ ಇರಲಿಲ್ಲ. ಆದರೆ, ಇದ್ದುದಿದ್ದ ಹಾಗೆಯೇ ದೂರದಿಂದ ಯಾರದೋ ಕೂಗು ಕೇಳಿಸಿತು. ಅದು ಕಿವಿಗೆ ಬೀಳುತ್ತಲೂ ಮೊದಲು ಬೆಚ್ಚಿಬಿದ್ದವನು ರಾಘೋಬ. ಸ್ನಾನಕ್ಕೆಂದು ಝರಿಯ ನೀರಲ್ಲಿ ಇಳಿದಿದ್ದ ಆತ ಭೀತಿಯಿಂದ ನಡುಗುತ್ತಾ ಕೂಗು ಕೇಳಿಸಿದ ದಿಕ್ಕಿಗೆ ತಿರುಗಿ,

"ವೈರಿಗಳೇ ಬಂದರೋ ಏನೊ ನಮ್ಮನ್ನು ಹಿಡೀಲಕ್ಕೆ. ಈಗೇನು ಮಾಡೋಣ ಹುಜೂರ್ ?" ಎಂದ.

"ಶೂಶ್ಶ್ಯಾ ! ಇನ್ನು ನನ್ನನ್ನು ಹುಜೂರ್ ಗಿಜೂರ್ ಸರಕಾರ್ ಮಹಾರಾಜ್ ಎಂದು ಯಾರೂ ಕರೆಯಬೇಡಿ. ಹಾಗೆ ಕರೆದದ್ದು ವೈರಿಗಳಿಗೆ ಕೇಳಿಸಿದರೆ ಅವರು ನನ್ನನ್ನು ಹಿಡಿಯುವುದು ಬಹಳ ಸುಲಭವಾದೀತು. ಅಲ್ಲವೇ ವಿಷ್ಣು ?"

"ಹೌದು. ತಾವು ಹೇಳುವುದೂ ನಿಜ."

ಕೂಗು ಮತ್ತೊಂದು ಬಾರಿ ಕೇಳಿಸಿತು. ಆ ಕೂಗಿನ ವಿಶಿಷ್ಟಗತಿಯನ್ನು ಲಕ್ಷ್ಯವಿಟ್ಟು ತಿಳಿದುಕೊಂಡು ಭಾಸ್ಕರರಾಯನೆಂದ :

"ಇದು ಸೈನಿಕರ ದನಿಯ ಹಾಗಿಲ್ಲ. ಯಾರೋ ಹಳ್ಳಿಯವ ಕೂಗುತ್ತಿದ್ದ ಹಾಗಿದೆ. ಅಲ್ಲವೇ ವಿಷ್ಣು ?"

"ಹೌದು. ತಪ್ಪಿಸಿಕೊಂಡ ದನಗಳನ್ನು ರೈತರು ಹಾಗೆ ಕೂಗುವುದುಂಟು."

ರಾಘೋಬನಿಗೆ ಮಾತ್ರ ಆಗಲೂ ಸಮಾಧಾನವೆನಿಸಲಿಲ್ಲ.

"ನಮ್ಮನ್ನು ಮೋಸಗೊಳಿಸಿ ಬಲೆಯಲ್ಲಿ ಹಿಡಿಯುವದಕ್ಕಾಗಿ ವೈರಿಗಳೇ ಹಾಗೆ ಕೂಗುತ್ತಿರಬಾರದೇಕೆ ?" ಎಂದು ಆತ ಕೇಳಿದ.

"ಹಿಡಿಯಲು ಬರುವವರು ಯಾವಾಗಲೂ ಸದ್ದು ಮಾಡದೆ ಬರುತ್ತಾರೆ. ಹೀಗೆ ಕೂಗಿ ಗಲಾಟೆ ಮಾಡಿ ನಗಾರಿ ಬಾರಿಸಿಕೊಂಡು ಯಾರೂ ಬರುವುದಿಲ್ಲ," ಎಂದು ವಿಷ್ಣು ತಿರಸ್ಕಾರ ಮಿಶ್ರಿತ ಧ್ವನಿಯಲ್ಲಿ ಹೇಳಿದ. ಈ ಪುಕ್ಕ ಅಸಾಮಿ ಯನ್ನು ತಾವು ಜತೆಯಲ್ಲಿ ಕರೆದು ತಂದದ್ದೇ ತಪ್ಪಾಯಿತೆಂದು ವಿಷ್ಣುವಿಗನ್ನಿಸಿತು. ಇವನ ಹೇಡಿತನದಿಂದಾಗಿ ಎಂಥ ಸಂಕಟ ಬರುವುದೋ ಏನೊ, ತಮ್ಮ ಮೇಲೆ....

ಕೂಗು ಪುನಃ ಕೇಳಿಸಲಿಲ್ಲ. ಆಗ ಮಾತ್ರ ರಾಘೋಬ ಹಾಯಾಗಿ ಉಸಿರಾಡಿಸುತ್ತ ಮತ್ತೆ ಸ್ನಾನಕ್ಕಿಳಿದ.

ಭಾಸ್ಕರರಾಯನಿಗೆ ಮತ್ತೆ ತನ್ನ ತಾಯಿ-ಪತ್ನಿಯರ ನೆನಪು ಬಂದಿತ್ತು.

ಈ ಸಮಯದಲ್ಲಿ ಅವರು ಎಲ್ಲಿರಬಹುದು ? ಏಳುತ್ತ ಬೀಳುತ್ತ ಕಾಡುಹಾದಿಯಲ್ಲಿ ಓಡುತ್ತಿರಬಹುದೇ ? ಅಥವಾ ತಮ್ಮ ಹಾಗೆಯೇ ಆಯಾಸಗೊಂಡು ಎಲ್ಲಿಯಾದರೂ ವಿರಮಿಸಿರಬಹುದೇ ?

## ೧೮

ತನ್ನ ತಾಯಿ-ಪತ್ನಿಯರನ್ನು ಕುರಿತು ಭಾಸ್ಕರರಾಯ ಯೋಚಿಸುತ್ತಿದ್ದ ಆ ಸಮಯದಲ್ಲಿಯೆ ಇತ್ತ, ಇನ್ನೊಂದು ಅರಣ್ಯದಲ್ಲಿ ಯಮುನಾಬಾಯಿ ಮತ್ತು ಸಾವಿತ್ರಿಬಾಯಿಯರೂ ಆತನನ್ನೆ ಕುರಿತು ಯೋಚಿಸುತ್ತಿದ್ದರು.

"ಈಗ ಎಲ್ಲಿರಬಹುದು ಅವರು ? ಸುರಕ್ಷಿತವಾಗಿರಬಹುದಷ್ಟೆ ? ದೇವರ ದಯೆಯಿಂದ ವೈರಿಗಳ ಕೈಗೆ ಸಿಕ್ಕದಿದ್ದರಾಯಿತು. ದೇವಾ, ವೆಂಕಟಪತೇ, ಅಷ್ಟು ಮಾಡು," ಎಂದು ಸಾವಿತ್ರಿಬಾಯಿ ಮನಸ್ಸಿನಲ್ಲಿಯೆ ದೇವರನ್ನು ಬೇಡುತ್ತಿದ್ದಳು.

ದುರ್ಗದ ಗುಪ್ತ ಮಾರ್ಗದ ಮೂಲಕ ಹೊರಬಿದ್ದು ಯಾವುದೋ ಕಾಲು ದಾರಿ ಹಿಡಿದು ನಡುವೆ ಎಲ್ಲಿಯೂ ನಿಲ್ಲದೆ ಅವರು ನಡೆಯುತ್ತ ಬಂದಿದ್ದರು. ವೈರಿಗಳಿಂದ ತಪ್ಪಿಸಿಕೊಳ್ಳಲು ಅರಣ್ಯವೇ ಸರಿಯಾದ ಸ್ಥಳವೆಂದು ಬಗೆದು ಆ ಅಪರಿಚಿತ ಅಡವಿಯಲ್ಲಿ ಪ್ರವೇಶಿಸಿದ್ದರು. ಸಿರಿವಂತರ ಮನೆಗಳಲ್ಲಿ ಹುಟ್ಟಿ ರಾಣಿವಾಸದಲ್ಲಿ ಆಯುಷ್ಯ ಕಳೆದ ಆ ಸ್ತ್ರೀಯರು ಅಡವಿಯಲ್ಲಿ ನಡೆದು ಬರುತ್ತಿದ್ದುದು ಅದೇ ಮೊದಲುಬಾರಿ. ಕಾಲುಹಾದಿ ಹುಡುಕಿಕೊಂಡು ಮುನ್ನಡೆಯುವ ಭಟ್ಟನಿಗೂ ಕೂಡಾ ಅರಣ್ಯ ಪ್ರವಾಸವೆಂದರೆ ಅರಿಯದ ವಿಷಯವೇ ಆಗಿತ್ತು. ಅದಲ್ಲದೆ, ಆತ ಸ್ವಭಾವತಃ ಸೋಮಾರಿ. ಅರಮನೆಯ ಅಡುಗೆಯ ಮನೆಯಲ್ಲಿ ಮನಸ್ವಿಯಾಗಿ ತಿಂದು ಬೆಳೆಸಿದ ಬೊಜ್ಜು ದೇಹ ಹೊತ್ತು ಗುಡ್ಡ ಹತ್ತುವುದು ಪ್ರಯಾಸಕರವೂ ಆಗಿತ್ತು. ಭಾಲಚಂದ್ರಭಟ್ಟ ಮೇಲುಸಿರು ಬಿಡುತ್ತಾ ಆಗಾಗ ಅಲ್ಲಿ ಇಲ್ಲಿ ಕುಳಿತು ದಣಿವಾರಿಸಿಕೊಳ್ಳುತ್ತಾ, ಹೆಗಲಮೇಲಿನ ಗಂಟಿನ ಭಾರದಿಂದ ಇನ್ನಷ್ಟು ನರಳುತ್ತಾ ಹೇಗೋ ಕಾಲೆಳೆದುಕೊಂಡು ಬರುತ್ತಿದ್ದ.

ನಾಲ್ಕೈದು ಹರದಾರಿಗಳಷ್ಟು ಪ್ರದೇಶವನ್ನು ಹಿಂದೆ ಬಿಟ್ಟು ಬಂದುದಾಗಿತ್ತು. ಅತ್ತೆ ಸೊಸೆಯರಾಗಲಿ ಅವರ ಅಡುಗೆಯ ಭಟ್ಟನೇ ಆಗಲಿ ಅಷ್ಟು ದೂರ ಎಂದೂ ನಡೆದವರಲ್ಲ. ತವರೂರಿಗೋ ಬೇರೆ ಮತ್ತೆಲ್ಲಿಗೋ ಹೋಗುವ ಸಂದರ್ಭ ಬಂದಾಗಲೆಲ್ಲಾ ಮೇನೆಯಲ್ಲಿ ಕುಳಿತು ಹೋಗಿಬರುತ್ತಿದ್ದವರು ಅವರು.

ಆಗ ಕೈಗೊಬ್ಬ ಆಳು, ಕಾಲಿಗೊಬ್ಬ ಆಳು ಮೇನೆ ಹೊರುವ ಬೋಯಿಗಳು ಬೇರೆ. ಕೊಂಚವೂ ಆಯಾಸವಿಲ್ಲದೆಯೆ ಬಲುದೂರದ ಪ್ರಯಾಣವೂ ಮುಗಿದು ಹೋಗುತ್ತಿತ್ತು. ಆದರೆ ಈಗ....ಜೀವನದ ಅಂತಿಮ ಪಯಣವೆಂಬಂತಿರುವ ಈ ಪಯಣ....

"ಅತ್ತೆಯವರೆ, ಅತ್ತೆಯವರೆ," ಎನ್ನುತ್ತಾ ಸಾವಿತ್ರಿಬಾಯಿ ಕುಸಿದು ಕುಳಿತಳು.

ಒಂದೆರಡು ಹೆಜ್ಜೆ ಮುಂದಿದ್ದ ಅತ್ತೆ ಥಟ್ಟನೆ ಹಿಂದೆ ಬಂದು ಸೊಸೆಯನ್ನು ಬರಸೆಳೆದು ಅಪ್ಪಿಕೊಂಡಳು. ಅತ್ತೆ ಸೊಸೆಯರಿಬ್ಬರ ನೇತ್ರಗಳಿಂದಲೂ ಕಂಬನಿ ಧಾರೆಯಾಗಿ ಹರಿಯತೊಡಗಿತು.

"ಬಹಳ ದಣಿವಾಯಿತೇ ಸಾವಿತ್ರೀ?" ಎಂಬ ಪ್ರಶ್ನೆಯನ್ನೇನೋ ಕೇಳಿದಳು ಅತ್ತೆ. ಆದರೆ ಮರುಕ್ಷಣದಲ್ಲಿಯೆ ಆ ಪ್ರಶ್ನೆ ಹಾಸ್ಯಾಸ್ಪದವಾದುದೆಂದು ಅವಳಿಗೇ ಅನ್ನಿಸಿತು. ಎಲ್ಲಿಯೂ ನಿಲ್ಲದೆ ಇಷ್ಟು ದೂರ, ಇಂಥ ಒರಟು ಹಾದಿಯಲ್ಲಿ ನಡೆದು ಬಂದರೆ ದಣಿವಾಗದಿರುತ್ತದೆಯೆ ?

ಯಮುನಾಬಾಯಿಗೂ ತುಂಬಾ ಆಯಾಸವಾಗಿತ್ತು. ಆದರೂ ಆಕೆ ಮೊದಲಿನಿಂದಲೂ ಗಟ್ಟಿಮನಸ್ಸಿನವಳು. ಆಯಾಸವಾದರೂ ಅದನ್ನು ನಿರ್ಲಕ್ಷಿಸುವ ಸ್ವಭಾವ. ಸಾವಿತ್ರಿಬಾಯಿ ಮಾತ್ರ ಅತ್ತೆಯಷ್ಟು ಗಟ್ಟಿಗಳಲ್ಲ. ಅದೊಂದು ಅತ್ಯಂತ ಕೋಮಲ ಜೀವ.

ಆಯಾಸದ ಆಧಿಕ್ಯದಿಂದಾಗಿ ಸಾವಿತ್ರಿಬಾಯಿಯ ಮುಖ ಕೆಂಪಾಗಿತ್ತು. ಹಣೆಯ ಮೇಲೆಲ್ಲಾ ಬೆವರ ಹನಿಗಳು ಮೂಡಿದ್ದುವು. ಶ್ವಾಸೋಚ್ಛ್ವಾಸ ವೇಗದಿಂದ ಸಾಗಿತ್ತು. ಮುಳ್ಳು ಕಂಟಿಗಳಿಗೆ ಸಿಕ್ಕಿ ಸೀರೆ ಎಷ್ಟೋ ಕಡೆ ಹರಿದು ಹೋಗಿತ್ತು. ಅರಮನೆಯನ್ನು ತ್ಯಜಿಸಿ ಬರುವಾಗ ಅವಳ ಕಾಲುಗಳಲ್ಲಿದ್ದ ತೆಳ್ಳನೆಯ ಪಾದರಕ್ಷೆಗಳು ಕಲ್ಲುಮುಳ್ಳುಗಳಿಗೆ ತಾಕಿ ಹರಿದು ಹೋಗಿದ್ದುವು. ಬೆಣ್ಣೆಯಂತೆ ನುಣುಪಾಗಿದ್ದ ಅವಳ ಕೋಮಲ ಪಾದಗಳಿಗೆ ಅನೇಕ ಕಡೆಗಳಲ್ಲಿ ಗಾಯಗಳಾಗಿ ರಕ್ತ ಹರಿದಿತ್ತು. ಬೆರಳು ಒಡೆದಿದ್ದುವು.

ಯಮುನಾಬಾಯಿಗೂ ಹಾಗೆಯೇ ಆಗಿದ್ದಿತಾದರೂ ಅವಳಿಗೆ ಅತ್ತ ಗಮನವಿರಲಿಲ್ಲ. ಆದಷ್ಟು ಶೀಘ್ರವಾಗಿ ವೈರಿಗಳ ಅಳವಿನಿಂದ ದೂರ ದೂರ ಹೋಗಬೇಕೆಂಬುದೊಂದೇ ಅವಳ ತಾತ್ಕಾಲಿಕ ಉದ್ದಿಷ್ಟವಾಗಿತ್ತು. ಪಾದರಕ್ಷೆ ಹರಿದು ಬೆರಳು ಒಡೆದು ಹೋಗಿ ರಕ್ತ ಸುರಿದಾಗಲೂ ಆಕೆಗೆ ಅದರ ಅರಿವು ಬಂದಿರಲಿಲ್ಲ.

ಆದರೆ, ಸೊಸೆಯ ಅವಸ್ಥೆಯನ್ನು ಕಂಡಾಗ ಮಾತ್ರ ಆಕೆಯ ನಸುಕಠೋರ ಹೃದಯವೂ ಕರಗಿತು....

ಸೊಸೆಯನ್ನು ಮತ್ತೆ ಬಿಗಿದಪ್ಪಿಕೊಂಡು ಯಮುನ್ನಾಬಾಯಿ,

"ಅರಮನೆಯಲ್ಲಿ ಯಾವಾಗಲೂ ರತ್ನಗಂಬಳಿಯ ಮೇಲೇ ನಡೆದಾಡುತ್ತಿದ್ದ ನೀನು, ನನ್ನ ಪ್ರೀತಿಯ ಸೊಸೆ, ನನ್ನ ಮಗನ ಅರಸಿ, ಈ ಅಡವಿಯಲ್ಲಿ ಕಲ್ಲು ಮುಳ್ಳು ತುಳಿಯುತ್ತಾ ಬರಬೇಕಾಗಿ ಬಂತಲ್ಲಾ! ಕಾಲುಬೆರಳೂ ಒಡೆದು ಹೋಗಿವೆ. ಚರ್ಮವೂ ಕಿತ್ತುಹೋಗಿದೆ. ಅಯ್ಯೋ ಮಗಳೇ! ಈ ರಕ್ತವನ್ನು ಹ್ಯಾಗಾದರೂ ನೋಡಲೀ?" ಎನ್ನುತ್ತಾ ತನ್ನ ಸೆರಗು ಹರಿದು ಸೊಸೆಯ ಕಾಲ್ಬೆರಳುಗಳ ಮೇಲಿನ ನೆತ್ತರವನ್ನೊರೆಸತೊಡಗಿದಳು

ಅತ್ತೆಯನ್ನು ಸಾಕ್ಷಾತ್ ಮಹಾಲಕ್ಷ್ಮಿಯೆಂದು ಭಾವಿಸಿ ಅವಳ ಬಗೆಗೆ ಅತ್ಯಂತ ಪೂಜ್ಯಭಾವವಿಟ್ಟುಕೊಂಡಿದ್ದ ಸಾವಿತ್ರಿಬಾಯಿ ಬೆಚ್ಚಿಬಿದ್ದು ತನ್ನ ಕಾಲುಗಳನ್ನು ದೂರ ಸರಿಸಿಕೊಂಡು ಅತ್ತೆಯ ಚರಣಗಳನ್ನು ಮುಟ್ಟಿ ನಮಸ್ಕರಿಸುತ್ತ ಹೇಳಿದಳು:

"ನೀವು ಹೀಗೆಲ್ಲ ನನ್ನ ಕಾಲು ಮುಟ್ಟಬಾರದು ಅತ್ತೆಯವರೆ. ನಿಮ್ಮಿಂದ ಸೇವೆ ಮಾಡಿಸಿಕೊಂಡು ನಾನು ಯಾವ ನರಕಕ್ಕೆ ಹೋಗಲಿ?"

"ನೀನು ಕೇವಲ ನನ್ನ ಸೊಸೆಯೆಂದು ನಾನು ತಿಳಿದಿಲ್ಲ ಸಾವಿತ್ರೀ. ನೀನು ನನ್ನ ಸೊಸೆಯೂ ಹೌದು, ಪ್ರೀತಿಯ ಪುತ್ರಿಯೂ ಹೌದು. ಇಲ್ಲಿ ಬಾ, ನಿನ್ನ ಬೆರಳಿಗೆ ಪಟ್ಟಿ ಕಟ್ಟುತ್ತೇನೆ."

"ಬೇಡಾ ಅತ್ತೆಯವರೆ. ದಯಮಾಡಿ ನನ್ನ ಕಾಲು ಮುಟ್ಟಬೇಡಿರಿ. ಕಲ್ಲಿಗೆ ತಾಕಿ ನಿಮ್ಮ ಬೆರಳೂ ರಕ್ತಬಂಬಾಳವಾಗಿವೆಯಲ್ಲ? ಬನ್ನಿ, ನಾನು ಕಟ್ಟುತ್ತೇನೆ." ಎನ್ನುತ್ತಾ ಅತ್ತೆಯ ಚರಣಗಳನ್ನೆತ್ತಿಕೊಂಡು ತನ್ನ ಸೀರೆಯಿಂದ ಒರೆಸಿದಳು ಸಾವಿತ್ರಿಬಾಯಿ.

"ನಿನ್ನಂಥ ಸದ್ಗುಣೆಗೂ ಇಂಥ ಸ್ಥಿತಿ ಬಂತಲ್ಲ ಸಾವಿತ್ರೀ! ಪೂರ್ವಜನ್ಮದಲ್ಲಿ ನಾವು ಯಾವ ಪಾಪ ಮಾಡಿದ್ದೆವೊ. ಅದರ ಫಲವನ್ನು ಈಗ ಅನುಭವಿಸುತ್ತಿದೇವೆ. ಅತ್ತ ಬಾಬಾಸಾಹೇಬನಿಗೆ ಏನು ತೊಂದರೆ ಬಂದಿದೆಯೊ ಮಗು ಊಟವನ್ನಾದರೂ ಮಾಡಿರುವನೊ ಇಲ್ಲವೊ."

ಪತಿಯ ಪ್ರಸ್ತಾಪ ಬರುತ್ತಲೂ ಮತ್ತೆ ಸಾವಿತ್ರೀಬಾಯಿಯ ಕೊರಳು

ಬಿಗಿಯಿತು. ಪತಿಯ ಅವಸ್ಥೆಯನ್ನು ಊಹಿಸಲೆತ್ನಿಸುತ್ತ ಅವಳು ತನ್ನ ಕಷ್ಟಗಳನ್ನು ಮರೆತಳು.

"ಏಳಿರಿ ಅತ್ತೆಯವರೆ, ಬಹಳ ಹೊತ್ತು ಹೀಗೆ ಕೂತಿರುವುದೂ ಸರಿಯಲ್ಲ. ಏಳಿರಿ ಹೋಗೋಣ."

"ಹೌದವ್ವಾ. ನಾವು ಹೀಗೆಲ್ಲಾ ಕೂತಿರುವಂತಿಲ್ಲ. ನಡೆ ಹೋಗುವಾ," ಎಂದು ಯಮುನಾಬಾಯಿಯೂ ಎದ್ದು ಭಾಲಚಂದ್ರಭಟ್ಟನತ್ತ ದೃಷ್ಟಿ ತಿರುಗಿಸಿದಳು. ಅತ್ತೆ ಸೊಸೆಯರು ವಿರಮಿಸಲು ಕುಳಿತ ಸಂಧಿ ಸಾಧಿಸಿ ಆತ ಗಂಟನ್ನು ತಲೆಯ ಕೆಳಗಿಟ್ಟುಕೊಂಡು ಗಿಡದ ನೆರಳಲ್ಲಿ ನಿದ್ದೆ ಹೋಗಿದ್ದ!

ಅಂಥ ಸಮಯದಲ್ಲಿಯೂ ನಿಶ್ಚಿಂತನಾಗಿ ಗೊರಕೆ ಹೊಡೆಯುತ್ತ ಬಿದ್ದಿದ್ದ ಭಟ್ಟನನ್ನು ಕಂಡೊಡನೆ ಯಮುನಾಬಾಯಿಗೆ ತುಸು ನಗುವೂ ಬರದಿರಲಿಲ್ಲ. ಅವನ ಬಗೆಗೆ ಕನಿಕರವೂ ಉಂಟಾಗದಿರಲಿಲ್ಲ. ಮರುಕ್ಷಣದಲ್ಲಿಯೆ ಆಕೆಗೆ ತಮ್ಮ ಬಗೆಗೂ ಕನಿಕರ ಬಂದಿತು. ವೈರಿಗಳ ಕೈಯಿಂದ ತಪ್ಪಿಸಿಕೊಳ್ಳಲು ತಮಗೇನೊ ಅವಸರವಾಗಿದೆ. ಭಾಲಚಂದ್ರಭಟ್ಟನಿಗೆ ಅಂಥ ಅವಸರವೇನೂ ಇಲ್ಲ. ಇಂಗ್ಲೀಷ್ ಸೈನಿಕರು ಅವನನ್ನು ಬಂಧಿಸಿದರೂ ಕೂಡಾ ಅವನಿಗೇನನ್ನೂ ಮಾಡುವುದಿಲ್ಲ. ಒಂದೆರಡು ಪ್ರಶ್ನೆ ಕೇಳಿ, ಆತ ನಿರುಪದ್ರವಿಯೆಂದು ತಿಳಿಯುತ್ತಲೂ ಬಿಟ್ಟುಬಿಡಬಹುದು. ಆದರೆ ತಾವು....ತಮ್ಮನ್ನು ಅವರು ಹಾಗೇ ಬಿಡುವುದುಂಟೇ?

"ರಾಣಿಯರಾಗಿ ಕಷ್ಟಪಡುವುದಕ್ಕಿಂತ ಅಡುಗೆಯಾಳುಗಳಾಗಿ ನಿಶ್ಚಿಂತರಾಗಿರುವುದೇ ಮೇಲಲ್ಲವೇ ಸಾವಿತ್ರೀ?" ಎಂದಳು ಯಮುನಾಬಾಯಿ.

"ಭಾಲಚಂದ್ರಭಟ್ಟನ ನಿದ್ದೆಯನ್ನು ನೋಡಿದರೆ ನನಗೂ ನಿಮ್ಮಂತೆಯೇ ಅನಿಸುತ್ತದೆ ಅತ್ತೆಯವರೆ. ನನಗೇ ಆಗಲಿ ನಿಮಗೇ ಆಗಲಿ ಈ ಸಂದರ್ಭದಲ್ಲಿ ಇಂಥ ಸುಖನಿದ್ದೆ ಬರುವುದು ಶಕ್ಯವೆ?"

"ಈ ಸೋಮಾರಿ ಕೂಳಬಕ್ಕನನ್ನು ಕರೆತರುವುದರ ಬದಲು ಒಂದು ನಾಯಿಯನ್ನು ಕರೆತಂದಿದ್ದರೂ ಉತ್ತಮವಾಗುತಿತ್ತು. ಇವನ ನಿದ್ದೆಯೇನು ಬೇಗ ಮುಗಿಯುವ ಹಾಗೆ ಕಾಣುವದಿಲ್ಲ," ಎನ್ನುತ್ತಾ ಯಮುನಾಬಾಯಿ ಭಟ್ಟನನ್ನು ಕೂಗಿದಳು.

ಆದರೆ, ಹರದಾರಿ ಹರದಾರಿಗಳವರೆಗೆ ನಡೆದು ಬಂದು ದಣಿದ ಭಟ್ಟನ ನಿದ್ದೆ ಆ ಕೂಗಿನಿಂದ ನಾಶವಾಗುವಂತಿರಲಿಲ್ಲ. ಅವನ ಗೊರಕೆಗಳು ದೀರ್ಘವಾಗುತ್ತಲೇ ಇದ್ದುವು.

ಅವನ ಸಮೀಪಕ್ಕೆ ಹೋಗಿ ಕಿವಿಯ ಬಳಿ ಗಟ್ಟಿಯಾಗಿ ಕೂಗಿದಾಗಲೇ ಅವನಿಗೆಚ್ಚರವಾಯಿತು.

"ಓ! ಏನು? ಯಾರು? ಯಾಕೆ?" ಎನ್ನುತ್ತಾ ಆತ ದೊಡ್ಡ ಧ್ವನಿಯಿಂದ ಆಕಳಿಸುತ್ತ ಎದ್ದು ಕುಳಿತ.

"ನಾವೆಲ್ಲಿದೇವೆ, ಯಾವ ಸನ್ನಿವೇಶದಲ್ಲಿದೇವೆ ಎಂಬುದರ ನೆನಪೂ ಇಲ್ಲವೇ ನಿನಗೆ ಭಟಜೀ ?"

"ಅಯ್ಯೋ ಹಾಳು ನಿದ್ದೆ. ಮೈಮರೆತು ಹೋಗಿತ್ತು ಮಾಸಾಹೇಬ್. ಚಾಕರನದು ದೊಡ್ಡ ತಪ್ಪಾಯಿತು," ಎನ್ನುತ್ತಾ ತನ್ನ ಭಾರವಾದ ದೇಹವನ್ನು ಕಷ್ಟದಿಂದ ಎಬ್ಬಿಸುತ್ತಾ ಭಾಲಚಂದ್ರಭಟ್ಟ ಮೇಲಕ್ಕೆದ್ದ.

ಹಾದಿಯಿಲ್ಲದ ಕಾಡಿನಲ್ಲಿ ಮತ್ತೆ ಅವರ ಪ್ರಯಾಣ ಮುಂದುವರಿಯಿತು. ಎಲ್ಲಿಗೆ ಹೋಗುವುದೆಂಬುದು ತಿಳಿಯದು. ಯಾವ ಊರಿಗೆಂಬುದು ತಿಳಿಯದು. ಹೊರಟ ದಿಶೆಯೂ ತಿಳಿಯದು. ಅರೆಬೆಪ್ಪನಂತಿದ್ದ ಭಾಲಚಂದ್ರಭಟ್ಟನ ಮೆದುಳೂ ಕೊಂಚ ತಬ್ಬಿಬ್ಬಾಗಿಯೆ ಚಲನವಲನ ಮಾಡಲಾರಂಭಿಸಿತು. ಹೀಗೆಯೇ ಈ ಅರಣ್ಯದಲ್ಲಿ ತಾವು ಮೂವರೂ ಹೊರಟಿರುವುದಾದರೂ ಎಲ್ಲಿಗೆ? ಕಾಡಿನಲ್ಲಿರುವಾಗಲೆ ಕತ್ತಲೆಯಾದರೆ ತಾವು ಆಶ್ರಯ ಪಡೆಯುವುದೆಲ್ಲಿ? ಈ ಅರಣ್ಯದಲ್ಲಿ ಹಿಂಸ್ರಪಶುಗಳಿರಲಿಕ್ಕಿಲ್ಲವೆಂದು ನಂಬುವುದಾದರೂ ಹೇಗೆ? ಹುಲಿಯೋ ಚಿರತೆಯೋ ಬಂದೆರಗಿದರೆ. ಈ ಹೆಣ್ಣುಮಕ್ಕಳು ಏನು ಮಾಡಬಲ್ಲರು? ಅವರ ಮಾತಿರಲಿ, ತಾನಾದರೂ ಏನು ಮಾಡಬಲ್ಲ? ಜನ್ಮವನ್ನೆಲ್ಲಾ ಈರುಳ್ಳಿ ಹೆರಚುವುದರಲ್ಲೂ ರೊಟ್ಟಿ ಬಡಿಯುವುದರಲ್ಲೂ ಕಳೆದವನು ಹುಲಿ ಚಿರತೆಗಳನ್ನೇನು ಬಡೆದೇನು ತಲೆ! ದುರ್ಮರಣಕ್ಕೊಳಗಾದರೆ ರೌರವನರಕ ತಪ್ಪುವುದಿಲ್ಲವೆಂದು ಪುರಾಣಿಕರು ಬೇರೆ ಹೇಳುವುದಿಲ್ಲವೆ? ಅಯ್ಯೋ ದೇವರೆ, ತಮಗೆ ನರಕವಾಸವೇ ಕಾದಿದೆಯೆ?

ಅಪರಿಚಿತವಾದ ಅರಣ್ಯದಲ್ಲಿ ಪ್ರವಾಸ ಮಾಡುವ ಬದಲು ಸನಿಯದಲ್ಲಿಯೆ ಇರಬಹುದಾದ ಯಾವುದೊಂದು ಹಳ್ಳಿಗೆ ಹೋಗಿ ಕೆಲವು ದಿನಗಳಮಟ್ಟಿಗಾದರೂ ಯಾವನೊಬ್ಬ ಪುಣ್ಯಾತ್ಮನಲ್ಲಿ ಆಶ್ರಯಪಡೆಯುವುದು ಹೆಚ್ಚು ಸುರಕ್ಷಿತವೆಂದು ಭಾಲಚಂದ್ರಭಟ್ಟನಿಗೆನಿಸಿತು. ಅವನೊಬ್ಬನೇ ಇದ್ದ ಪಕ್ಷದಲ್ಲಿ ಆ ಯೋಚನೆಯಂತೆ ವರ್ತಿಸಲು ಆತ ವಿಳಂಬ ಮಾಡುತ್ತಿರಲಿಲ್ಲ. ಆದರೆ, ಅವನೊಡನಿದ್ದವರು ಒಡತಿ

ಯರು; ಇಷ್ಟು ದಿನ ಅವನಿಗೆ ಅನ್ನವಿಟ್ಟು ಸಲಹಿದವರು. ಅವರ ಅಪ್ಪಣೆಯಿಲ್ಲದೆ ತಾನೊಂದು ಹೆಜ್ಜೆಯನ್ನೂ ಹೊರಳಿಸುವಂತಿಲ್ಲ.

ಬಹಳ ಧೈರ್ಯ ತಂದುಕೊಂಡು ಆತ ಹೇಳಿದ :

"ಈ ಕಾಡಿನಲ್ಲಿ ಹಾದಿಯಂತೂ ಸಿಗುವುದಿಲ್ಲ. ಇಲ್ಲೇ ರಾತ್ರಿಯಾದರೆ ಗತಿಯೇನು ಮಾಸಾಹೇಬ್ ?"

ಆ ಸಮಸ್ಯೆ ಯಮುನಾಬಾಯಿಯನ್ನೂ ಬಹಳ ಸಮಯದಿಂದ ಕಾಡುತ್ತಿತ್ತು. ಕಾಡಿನಲ್ಲಿಯೆ ರಾತ್ರಿಯಾದರೆ ನಿಜಕ್ಕೂ ಕಷ್ಟದ ಪರಿಸ್ಥಿತಿಯೇ.

"ವೆಂಕಟಪತಿಯೇ ಗತಿ!" ಎಂದಳು ಯಮುನಾಬಾಯಿ.

ಆಗ, ಭಾಲಚಂದ್ರಭಟ್ಟ ತನ್ನ ಮನಸ್ಸಿನಲ್ಲಿನ ಯೋಚನೆಯನ್ನು ಬಹಿರಂಗಪಡಿಸಿದ.

"ಉಹೂಂ. ಈಗ ನಾವು ಯಾವ ಹಳ್ಳಿಗೂ ಹೋಗುವಂತಿಲ್ಲ. ವೈರಿಗಳ ಗೂಢಚಾರರು ನಮಗಾಗಿ ಸುತ್ತೂಕಡೆ ಹುಡುಕುತ್ತಿರಲು ಸಾಕು. ನಾವಾಗಿಯೇ ಹೋಗಿ ಅವರ ಕೈಗೆ ಸಿಕ್ಕಂತಾದೀತು. ನಮ್ಮನ್ನಷ್ಟೇ ಅಲ್ಲ, ನಮಗೆ ಆಶ್ರಯವಿತ್ತ ಜನರನ್ನೂ ಅವರು ಬಿಡಲಿಕ್ಕಿಲ್ಲ. ನಮ್ಮಿಂದಾಗಿ ಪಾಪ, ಹಳ್ಳಿಯವರಿಗಾದರೂ ಯಾಕೆ ತೊಂದರೆಯಾಗಬೇಕು ಭಟಜೀ ?"

"ತಾವೇ ಹೀಗಂದರೆ ಹ್ಯಾಗೆ ಮಾಸಾಹೇಬ್ ? ಸುತ್ತಮುತ್ತ ಇರುವ ಹಳ್ಳಿಗಳೆಲ್ಲಾ ತಮ್ಮವು. ಎಲ್ಲರೂ ತಮ್ಮ ಪ್ರಜೆಗಳು. ಪೂಜ್ಯ ತಾಯಿಗಾಗಿ ಸ್ವಲ್ಪ ತೊಂದರೆ ಸಹಿಸಲು ಯಾರೂ ನಿರಾಕರಿಸಲಾರರು.

"ಅವರು ನಿರಾಕರಿಸಲಾರರು. ನಿಜ. ಆದರೂ–ಅವರಿಗೆ ತೊಂದರೆ ಕೊಡುವುದು ನನಗೆ ಇಷ್ಟವಿಲ್ಲ." ಯಮುನಾಬಾಯಿ ಒಂದು ಕ್ಷಣ ತಡೆದು ಮತ್ತೆ ಅಂದಳು : "ನಮ್ಮಿಂದಾಗಿ ನಿನಗೂ ಬಹಳ ತೊಂದರೆಯಾಯಿತು ಭಟಜೀ."

"ಅಯ್ಯೊ ಅಯ್ಯೋ ತಾಯಿ....ತಮ್ಮಿಂದ ನನಗೆ ತೊಂದರೆ ಅಂದರೆ ನಾನು ನರಕ ಕುಂಡದಲ್ಲಿ ಕೊಳೆತೇನು. ಹಡೆದ ತಾಯಿಗಿಂತಲೂ ಹೆಚ್ಚು ಮಮತೆಯಿಂದ ಈ ಬಡವನನ್ನು ನೋಡಿಕೊಂಡು ಬಂದೀರಿ ಇಲ್ಲಿಯವರೆಗೆ. ನಿಮ್ಮ ಋಣ ತೀರಿಸುವದು ಜನ್ಮಾಂತರಗಳಲ್ಲೂ ಸಾಧ್ಯವಾಗದು."

"ನೋಡು ಭಟಜಿ, ನಿನಗೆ ಹೆಚ್ಚು ತೊಂದರೆ ಕೊಡಲು ನಮಗಿಷ್ಟವಿಲ್ಲ. ಕಾಡಿನಲ್ಲಿ ಅಲೆಯಲು ನಿನಗೆ ಭಯವಾಗುತ್ತಿದ್ದರೆ ಹೊರಳಿ ಹೋಗಿಬಿಡು. ನಮ್ಮ ಚಿಂತೆ ಬೇಡ."

ಹಳ್ಳಿಗೆ ಹೋಗುವ ಮಾತನ್ನು ತಾನು ಯಾಕಾದರೂ ಆಡಿದೆನೊ ಎನಿಸಿ ಭಟ್ಟನಿಗೆ ಅತ್ಯಂತ ವ್ಯಸನವಾಯಿತು. ಆತ ಓಡೋಡುತ್ತ ಹೋಗಿ ಯಮುನಾ ಬಾಯಿಯ ಕಾಲು ಹಿಡಿದುಕೊಂಡು ಹೇಳಿದ:

"ನಿಮ್ಮನ್ನು ಬಿಟ್ಟು ನಾನೊಬ್ಬನೇ ಹೇಗೆ ಹೋಗಲು ಸಾಧ್ಯ ಮಾಸಾಹೇಬ್? ನನ್ನ ತಪ್ಪು ಏನಿದ್ದರೂ ಹೊಟ್ಟೆಯಲ್ಲಿ ಹಾಕಿಕೊಂಡು...."

"ಏಳೇಳು ಭಟಜೀ. ಮೇಲೇಳು," ಎಂದು ಯಮುನಾಬಾಯಿ ಅವನನ್ನು ಎಬ್ಬಿಸಿದಳು.

ಮತ್ತೊಂದು ತಾಸು ನಡೆದ ಬಳಿಕ ಹಸಿವು ಬಾಯಾರಿಕೆಗಳಿಂದ ಬಳಲಿ ಅವರು ಗಿಡವೊಂದರ ಅಡಿಯಲ್ಲಿ ಕುಳಿತುಕೊಂಡರು. ಕುಡಿಯಲು ನೀರು ಬೇಕಾಗಿತ್ತು. ಆದರೆ ಅದನ್ನು ದೊರಕಿಸುವ ದಾರಿ ಕಾಣುತ್ತಿರಲಿಲ್ಲ. ಸಮೀಪದಲ್ಲಿ ತೊರೆಗಳೂ ಇರಲಿಲ್ಲ, ಝರಿಗಳೂ ಇರಲಿಲ್ಲ.

"ಇಲ್ಲೇ ಎಲ್ಲಾದರೂ ನೀರಿರಬಹುದೇನೋ ಹುಡುಕಿ ತರುವೆಯಾ ಭಟಜೀ?" ಎಂದಳು ಯಮುನಾಬಾಯಿ.

ನೀರಡಿಕೆಯಿಂದಾಗಿ ಭಾಲಚಂದ್ರಭಟ್ಟನ ಜೀವವೂ ತಳಮಳಿಸತೊಡಗಿತ್ತು. ಒಡತಿಯ ಬಾಯಿಂದ ನೀರಿನ ಮಾತು ಹೊರಬಿದ್ದುದೇ ತಡ, ಭಟ್ಟ ಅವಸರದಿಂದಲೇ ಅದನ್ನು ಹುಡುಕಿಕೊಂಡು ಹೊರಟ. ಅರ್ಧ ತಾಸು ಅತ್ತಿತ್ತ ಅಲೆದ ತರುವಾಯ ಒಂದು ದಿಕ್ಕಿನಿಂದ ಪ್ರವಾಹದ ಮಂದಸ್ವರ ಕೇಳಿಬರತೊಡಗಿತು. ಭಟ್ಟ ಓಡೋಡುತ್ತಲೇ ಅತ್ತ ಹೊರಟು, ಸನಿಯಲ್ಲಿಯೆ ಹರಿದುಹೋಗುತ್ತಿದ್ದ ಹೊಳೆಯನ್ನು ಕಂಡು ಆನಂದದಿಂದಲೂ ಉದ್ರೇಕದಿಂದಲೂ ಅದಕ್ಕೆ ನಮಸ್ಕರಿಸಿ ತೃಪ್ತಿಯಾಗುವವರೆಗೂ ನೀರು ಕುಡಿದು ಒಡತಿಯರಿಗಾಗಿ ತಂಬಿಗೆ ತುಂಬಿಕೊಂಡು ಬಂದ.

ನೀರು ಸೇವಿಸಿ ತೃಪ್ತಿಯಾದ ತರುವಾಯ ಸಾವಿತ್ರೀಬಾಯಿ ಕೇಳಿದಳು:

"ನೀರೆಷ್ಟು ಸವಿಯಾಗಿದೆಯಲ್ಲ ಅತ್ತೆಯವರೆ! ಇದನ್ನೆಲ್ಲಿಂದ ತಂದೆ ಭಟಜೀ?"

"ಇಲ್ಲೇ ಸಮೀಪದಲ್ಲೇ ಹೊಳೆಯವ್ವ ಹರಿದುಹೋಗುತ್ತಿದಾಳೆ ರಾಣೀ ಸರಕಾರ್."

"ತಾಯಿ ಮಲಪ್ರಭೆಯೇ ಇರಬೇಕು ಆಕೆ. ನಮ್ಮ ಪುಣ್ಯ. ಈ ಸಂಕಟ

ಸಮಯದಲ್ಲಿ ಅವಳಾದರೂ ನಮಗೆ ಜತೆಯಾದಳು," ಎನ್ನುತ್ತಾ ಯಮುನಾಬಾಯಿ ಸೊಸೆಯ ಮುಖವನ್ನು ಅರ್ಥಗರ್ಭಿತ ದೃಷ್ಟಿಯಿಂದ ನೋಡಿದಳು.

ಅತ್ತೆಯ ಮಾತಿನಲ್ಲಡಗಿದ್ದ ಅರ್ಥವೇನೆಂಬುದು ಸಾವಿತ್ರಿಬಾಯಿಗೂ ಒಡನೆಯೆ ಗೊತ್ತಾಯಿತು. ಪೆದ್ದಂಬಟ್ಟನಾದ ಅಡುಗೆಯವನಿಗೆ ಮಾತ್ರ ಆ ಅಂತರಾರ್ಥ ಹೊಳೆಯಲಿಲ್ಲ. ಒಡತಿಯರಿಬ್ಬರ ಮುಖಗಳನ್ನೂ ಮಿಕಿಮಿಕಿ ನೋಡುತ್ತಾ ಆತ ತುಸು ದೂರದಲ್ಲಿ ನಿಂತುಕೊಂಡಿದ್ದ.

ಇನ್ನಷ್ಟು ನೀರು ಬೇಕೇ ಮಾಸಾಹೇಬ್?"

"ಏನೂ ಬೇಡ ಭಟಜೀ. ಸದ್ಯ ಇಷ್ಟೇ ಸಾಕು."

ಒಡತಿಯರು ಇನ್ನು ಫಲಾಹಾರದ ಪ್ರಸ್ತಾಪವೆತ್ತಬಹುದೆಂದು ಭಾಲಚಂದ್ರ ಭಟ್ಟ ನಿರೀಕ್ಷಿಸಿದ್ದ. ಆದರೆ ಮಲಪ್ರಭೆಯ ಮಡಿಲಲ್ಲಿ ಚಿರನಿದ್ರೆಯಲ್ಲಿ ಮುಳುಗಲು ಯೋಚಿಸುತ್ತಿದ್ದ ಆ ಸಮಯದಲ್ಲಿ ಆ ಮಹಿಳೆಯರಿಗೆ ತಿನಿಸಿನ ನೆನಪಾದರೂ ಹೇಗೆ ಬಂದೀತು.

ಭಟ್ಟ ನೋಡಿಯೆ ನೋಡಿದ. ಅರ್ಧ ತಾಸು ಕಳೆದರೂ ಅವರು ತಿಂಡಿಯ ಪ್ರಸ್ತಾಪವೆತ್ತಲೇ ಇಲ್ಲ. ಅವನ ಹಸಿಬೆಯ ಚೀಲದಲ್ಲಿ ನೂರಾರು ಉಂಡೆಗಳೂ ಚಕ್ಕುಲಿ ಮೊದಲಾದ ರುಚಿಕರ ತಿಂಡಿಗಳೂ ತುಂಬಿದ್ದುವು. ಯಮುನಾಬಾಯಿಯ ಅಪ್ಪಣೆಯಾಗದೆ ಅವುಗಳನ್ನು ಹೊರದೆಗೆಯುವಂತಿರಲಿಲ್ಲ. ಹತ್ತಿರದಲ್ಲಿಯೆ ಇದ್ದರೂ ಅಲಭ್ಯವಾಗಿದ್ದ ಆ ಆಹಾರ ಪದಾರ್ಥಗಳನ್ನು ನೆನೆದು ನೆನೆದು ಅವನ ಮನಸ್ಸು ಮರುಗತೊಡಗಿತು. ನಾಲಗೆ ನೀರು ಬಿಟ್ಟು ಮತ್ತೆ ಒಣಗತೊಡಗಿತು. ಆತ ವ್ಯಥಿತನಾದ, ನಿರಾಶನಾದ, ತನ್ನ ವಿಧಿಯನ್ನು ಹಳಿದುಕೊಳ್ಳುತ್ತಾ ಕೊಂಚ ದೂರದಲ್ಲಿದ್ದ ಗಿಡದ ನೆರಳಿಗೆ ಹೋಗಿ ಹಾಸಿಗೆಯಂತೆ ಹರಡಿದ್ದ ಎಲೆಗಳ ರಾಶಿಯ ಮೇಲೆ ಮಲಗಿಕೊಂಡ. ಹಸಿವು-ದಣಿವುಗಳಿಂದ ಬಳಲಿದ್ದ ಆ ಬಡಜೀವವನ್ನು ನಿದ್ರಾದೇವಿ ಕೂಡಲೇ ಅಪ್ಪಿಕೊಂಡು ಸಂತೈಸತೊಡಗಿದಳು.

ಆಗಮಾತ್ರ ಯಮುನಾಬಾಯಿ ಅವನನ್ನು ನಿದ್ದೆಯಿಂದೆಬ್ಬಿಸುವ ಗೊಡವೆಗೆ ಹೋಗಲಿಲ್ಲ. ಅವಳ ಮನಸ್ಸಿನಲ್ಲಿ ರೂಪಗೊಂಡು ನಿರ್ದಿಷ್ಟ ಆಕಾರ ತಳೆಯುತ್ತಿದ್ದ ವಿಚಾರವೊಂದನ್ನು ಕುರಿತು ಸೊಸೆಯೊಂದಿಗೆ ಬಿಚ್ಚುಮಾತಿನಿಂದ ಚರ್ಚಿಸಲು ಅವನ ನಿದ್ದೆಯೂ ಅನುಕೂಲವೇ ಆಯಿತು. ಆತ ಎಚ್ಚರವಾಗಿದ್ದಾಗ ಅವರು ಅಂಥ ಮಾತು ಆಡುವಂತಿರಲಿಲ್ಲ.

ಆತ ನಿಜವಾಗಿಯೂ ನಿದ್ರಾಧೀನನಾಗಿದ್ದುದು ಖಚಿತವಾಗುತ್ತಲೂ ಯಮುನಾಬಾಯಿಯೆಂದಳು :

"ನಿನ್ನ ಮನಸ್ಸಿನಲ್ಲೇನಿದೆ ಸಾವಿತ್ರಿ ?"

"ತಮ್ಮನ್ನು ಹಿಂಬಾಲಿಸುವದನ್ನು ಬಿಟ್ಟರೆ ನನ್ನಲ್ಲಿ ಇನ್ನಾವ ವಿಚಾರವೂ ಇಲ್ಲ ಅತ್ತೆಯವರೆ."

"ನಾನಂತೂ ಒಂದು ನಿರ್ಧಾರಕ್ಕೆ ಬಂದಿದ್ದೇನೆ ಸಾವಿತ್ರೀ. ತಾಯಿ ಮಲಪ್ರಭಾ ಸಮೀಪದಲ್ಲಿಯೆ ಇದ್ದಾಳೆ. ಅವಳನ್ನುಳಿದು ನಮಗೆ ಬೇರಾವ ಆಶ್ರಯವೂ ಇಲ್ಲದಂತಾಗಿದೆ. ಅದಕ್ಕಾಗಿ–ಇನ್ನು ತಡಮಾಡದೆ...."

"ನನ್ನ ಮನಸ್ಸಿನಲ್ಲೂ ಅದೇ ವಿಚಾರ ಬಂದಿತ್ತು ಅತ್ತೆಯವರೆ. ವೈರಿಗಳ ಕೈಯಲ್ಲಂತೂ ನಾವು ಸಿಗಬಾರದು. ಮ್ಯಾನ್‌ಸನ್ ಸಾಹೇಬನನ್ನು ಯಜಮಾನರು ಕೊಂದಂದಿನಿಂದ ಇಂಗ್ಲೀಷರು ಸಿಟ್ಟುಬೆಂಕಿಯಾಗಿದಾರೆ. ಅದರ ಸೇಡನ್ನು ತೀರಿಸಿಕೊಳ್ಳಲೆಂದೇ ಕಾದು ಕುಳಿತಿರಬೇಕು ಅವರು, ಗಾಯಗೊಂಡ ಹಾವಿನಂತೆ. ನಾವು ಅವರ ಕೈಗೆ ಸಿಕ್ಕರೆ ಪರಿಪರಿಯ ಅವಮಾನ ಹೊಂದಿ ಸಾಯಬೇಕಾದೀತು. ಅದರ ಬದಲು ಈಗಲೇ ಸಾಯುವುದು ಒಳ್ಳೆಯದು."

"ಹೌದು ಮಗೂ. ನೀನನ್ನುವದು ನಿಜ. ಅಂತೆಯೇ ನಾನೂ ಈ ನಿರ್ಧಾರಕ್ಕೆ ಬಂದದ್ದು. ನೀನೂ ಅದೇ ರೀತಿ ನಿಶ್ಚಯಿಸಿದ್ದು ಸಂತೋಷದ ಸಂಗತಿಯೇ."

"ಅತ್ತೆಯವರೆ, ನೀವಿದ್ದಲ್ಲಿ ನಾನು. ಇಬ್ಬರಿಗೂ ಸಮ್ಮತವಾದ ಮಾರ್ಗ ಹುಡುಕಿಕೊಳ್ಳಿರೆಂದು ಯಜಮಾನರೂ ಹೇಳಿದ್ದಾರೆ."

"ಇದ್ದರೆ ನಿನ್ನಂಥ ಸೊಸೆಯಿರಬೇಕು. ನಾನು ಮುಂದಿನ ಜನ್ಮದಲ್ಲಿ ಮತ್ತೆ ಹೆಣ್ಣಾಗಿ ಹುಟ್ಟಿ ಬಂದರೆ ನಿನ್ನನ್ನು ನನ್ನ ತಂಗಿಯನ್ನಾಗಿ ಹುಟ್ಟಿಸೆಂದು ದೇವರಲ್ಲಿ ಬೇಡಿಕೊಳ್ಳುವೆ. ಹೂಂ. ಇನ್ನು ತಡವಾಗಬಾರದು. ನಮ್ಮ ತಯಾರಿ ನಾವು ಮಾಡೋಣ," ಎನ್ನುತ್ತಾ ಯಮುನಾಬಾಯಿ ತನ್ನ ಮೈಮೇಲಿನ ಎಲ್ಲ ಆಭರಣಗಳನ್ನೂ ತೆಗೆದು ಕೆಳಗಿರಿಸಿದಳು. ಅತ್ತೆಯನ್ನನುಸರಿಸಿ ಸೊಸೆಯೂ–ತನ್ನ ಮಾಂಗಲ್ಯದ ಒಡವೆಗಳನ್ನು ಬಿಟ್ಟು–ಇನ್ನುಳಿದ ಎಲ್ಲ ಆಭರಣಗಳನ್ನೂ ಕಳಚಿ ಅತ್ತೆಯೆದುರು ಇರಿಸಿದಳು.

"ಈ ಆಭರಣಗಳನ್ನಿಟ್ಟುಕೊಂಡು ನಾವು ಪ್ರಾಣ ಬಿಡುವುದೊಳ್ಳೆಯದಲ್ಲ ಸಾವಿತ್ರೀ. ಸತ್ತಮೇಲೆ ಈ ಅಲಂಕಾರದಿಂದಾದರೂ ಏನು ಪ್ರಯೋಜನ ? ನಮ್ಮ ಶವಗಳ ಸಂಸ್ಕಾರಕ್ಕೂ ಕೂಡಾ ಇವುಗಳಿಂದ ಆತಂಕವಾಗುವ ಸಂಭವವಿದೆ. ಈ

ಒಡವೆಗಳನ್ನು ನೋಡಿ, ಜನರು ಅಂಜಿ ನಮ್ಮ ಶವಗಳನ್ನು ಮುಟ್ಟಲೂ ಹಿಂಜರಿಯ ಬಹುದು. ನೋಡುವವರಿಗೆ ನಾವು ಯಾರೋ ಬಡಮನೆತನದವರಂತೆ ಕಾಣ ಬೇಕು. ಅಂದರೆ ಗುಪ್ತವಾದ ರೀತಿಯಲ್ಲಿ ಪ್ರೇತದಹನವಾಗಬಹುದು. ಅಲ್ಲವೆ ?"

"ಹೌದು ಅತ್ತೆಯವರೆ. ಅಲ್ಲದೆ, ಈ ಆಭರಣಗಳು ಯಾರೋ ಅಪರಿಚಿತರ ಕೈಗೆ ಬೀಳುವುದಕ್ಕಿಂತ ಇಷ್ಟು ವರ್ಷ ಏಕನಿಷ್ಠೆಯಿಂದ ನಮ್ಮ ಸೇವೆ ಮಾಡಿದ ಈ ಬಡ ಬ್ರಾಹ್ಮಣನಿಗೇ ಹೋಗುವುದು ಅಗತ್ಯ. ಅದರಿಂದ ಇವನ ಮನೆತನದ ದಾರಿದ್ರ್ಯ ಮಾಯವಾಗಿ ವಂಶಾನುವಂಶಗಳವರೆಗೆ ನಮ್ಮನ್ನು ನೆನೆಯುತ್ತಾ ಸುಖದಿಂದ ಜೀವಿಸುವಂತಾಗುವುದು."

ಆಭರಣಗಳೆಲ್ಲವನ್ನೂ ಒಂದು ಬಟ್ಟೆಯಲ್ಲಿ ಬಿಗಿದು ಕಟ್ಟಿ ಯಮುನಾಬಾಯಿ ಮತ್ತೆ ಭಟ್ಟನನ್ನು ಕೂಗಿ ಎಬ್ಬಿಸಿದಳು. ಅಷ್ಟರಲ್ಲಿ ಸಾಯಂಕಾಲದ ಸಮಯವೂ ಸಮಾಪಿಸಿತ್ತು. ಬಿಸಿಲಿನ ತಾಪ ಕಡಮೆಯಾಗಿ ಗಾಳಿಯಲ್ಲಿ ಸಂಜೆಯ ತಂಪು ಬೆರೆಯತೊಡಗಿತ್ತು. ಅಡವಿಯಲ್ಲಿನ ಬಗೆಬಗೆಯ ಜೀವಗಳು ತಮ್ಮ ತಮ್ಮ ಚಟುವಟಿಕೆಗಳಿಗಾರಂಭಿಸಿದ್ದುವು. ಬಿಸಿಲು ಉಗ್ರವಾಗಿದ್ದಾಗ ಗಿಡಗಳನ್ನು ಹೊಕ್ಕು ನಿದ್ರಿಸುತ್ತಿದ್ದ ಕೋತಿಗಳು ಮತ್ತೆ ಹೊರಬಿದ್ದು ಮರದಿಂದ ಮರಕ್ಕೆ ಜಿಗಿಯ ತೊಡಗಿದ್ದುವು. ದೂರ, ಯಾವುದೋ ಗಿಡವೊಂದರಲ್ಲಿ ಅವಿತುಕೊಂಡು ಕಲ್ಕುಟುಕ ಹಕ್ಕಿಯೊಂದು ಏಕಪ್ರಕಾರವಾಗಿ ಧ್ವನಿ ಮಾಡುತ್ತಿತ್ತು.

"ಹಸಿವಾಗಿರಬೇಕಲ್ಲ.ಭಟಜಿ ?" ಎಂದಳು ಯಮುನಾಬಾಯಿ.

ಭಟ್ಟ ಎಳೆಬಾಲಕನಂತೆ ನಾಚುತ್ತ ಹೇಳಿದ:

"ಆಗಿದೆ....ಆಗಿದೆ ಮಾಸಾಹೇಬ್. ತಮಗೂ ಆಗಿರಬೇಕು...."

"ಈ ಸಮಯದಲ್ಲಿ ನಮಗೇನೂ ಬೇಡವಾಗಿದೆ ಭಟಜೀ."

"ಹೀಗೆಂದರೆ ಹ್ಯಾಗೆ ಮಾಸಾಹೇಬ್ ? ನಮಗೆ ದುಃಖವಾಗುತ್ತದೆ.

"ನಮ್ಮ ಚಿಂತೆ ನಿನಗೆ ಬೇಡ ಭಟಜೀ. ಗಂಟು ಬಿಚ್ಚಿ ನೀನು ಹೊಟ್ಟೆ ತುಂಬಾ ತಿಂದು ನೀರು ಕುಡಿದು ಇಲ್ಲಿಗೆ ಬಾ. ನಿನಗೊಂದು ಮಾತು ಹೇಳು ವುದಿದೆ."

ಗಂಟು ಬಿಚ್ಚಿ ಆಹಾರ ಪದಾರ್ಥಗಳನ್ನು ಹೊರದೆಗೆಯುತ್ತ ಭಟ್ಟನೆಂದ:

"ತಾವೂ ಒಂದೆರಡು ಉಂಡಿಗಳನ್ನಾದರೂ ತೆಗೆದುಕೊಳ್ಳಿ ಮಾಸಾಹೇಬ್. ತಮ್ಮನ್ನು ಬಿಟ್ಟು ನಾನೊಬ್ಬನೇ ಹೇಗೆ ತಿನ್ನುವುದು ?"

"ನೀನು ತಿಂದು ತೃಪ್ತನಾದರೆ ನಮಗೂ ಸಂತೋಷವಾಗುವುದು ಭಟಜೀ.

ಇದೊಂದು ದಿನ ಉಪವಾಸವಿದ್ದು ದೇವರನ್ನೊಲಿಸಿಕೊಳ್ಳಬೇಕೆಂದು ನಾವು ನಿರ್ಧರಿಸಿದ್ದೇವೆ. ನೀನು ತಿನ್ನಪ್ಪಾ."

ಮುಗ್ಧಸ್ವಭಾವದ ಭಟ್ಟ ಆ ಮಾತನ್ನು ಕೂಡಲೇ ನಂಬಿ ತಿಂಡಿಗಳನ್ನು ಬಾಯಿಗೆ ತುಂಬಿಕೊಳ್ಳತೊಡಗಿದ. ತಿನ್ನುತ್ತ ಹೋದಹಾಗೆಲ್ಲ ಅವನ ಮುಖದ ಮೇಲೇರಿ ಬಂದ ತೃಪ್ತಿಯ ಬಣ್ಣವನ್ನು ಕಂಡು ಅತ್ತೆಸೊಸೆಯರಿಗೆ ಪರಮ ಸಂತೋಷವಾಯಿತು. ಬ್ರಾಹ್ಮಣನ ಈ ತೃಪ್ತಿ ತಮ್ಮ ಆತ್ಮಗಳನ್ನು ಶಾಂತ ವಾಗಿಡುವುದೆಂದೇ ಅವರು ಭಾವಿಸಿದ್ದರು.

ಆತ ನೀರು ಕುಡಿದು ಬಂದ ತರುವಾಯ, ಒಡವೆಗಳ ಗಂಟನ್ನು ಅವನ ಕೈಯಲ್ಲಿಡುತ್ತ ಯಮುನಾಬಾಯಿಯೆಂದಳು :

"ಇನ್ನು ಮೇಲೆ ಇದರಲ್ಲಿರುವುದೆಲ್ಲಾ ನಿನ್ನದೇ ಭಟಜೀ. ಇವನ್ನು ತೆಗೆದುಕೊಂಡು ಇಲ್ಲಿಂದ ಹೊರಟುಬಿಡು."

ಭಟ್ಟ ಕಕ್ಕಾವಿಕ್ಕಿಯಾಗಿ ಆ ಗಂಟು ಬಿಚ್ಚಿ ನೋಡಿ, ಕಣ್ಣು ಕುಕ್ಕುವ ಮುತ್ತು ರತ್ನ ವಜ್ರಗಳ ಆಭರಣಗಳನ್ನು ಕಂಡು ಮತ್ತಷ್ಟು ದಿಗಿಲುಗೊಂಡು,

"ಇದೆಲ್ಲಾ ಏನು ಮಾಸಾಹೇಬ್? ಇವೆಲ್ಲಾ ನನಗೇಕೆ? ನಾನೆಲ್ಲಿಗೆ ಹೋಗಲಿ?" ಎಂದು ಪ್ರಶ್ನಿಸಿದ.

"ನೀನು ಈಗತಾನೇ ಮಲಗಿದ್ದಾಗ ನಾವಿಬ್ಬರೂ ಬಹಳ ವಿಚಾರ ಮಾಡಿ ಒಂದು ನಿಶ್ಚಯಕ್ಕೆ ಬಂದಿದೇವೆ. ಸದ್ಯಕ್ಕಂತೂ ನೀನು ನಮ್ಮ ಸಂಗಡ ಇರುವುದು ನಮ್ಮ ಕ್ಷೇಮದ ದೃಷ್ಟಿಯಿಂದಲೇ ಒಳ್ಳೆಯದಲ್ಲ. ಈ ಒಡವೆಗಳೂ ನಮ್ಮ ಮೈಮೇಲಿರಬಾರದು. ಇವುಗಳನ್ನು ನೋಡಿಯೇ ನಾವು ನರಗುಂದದ ರಾಜ ಮನೆತನದವರೆಂಬುದು ವೈರಿಗಳಿಗೆ ಗೊತ್ತಾಗಿ ಹೋಗಬಹುದು."

ಹೌದು, ಅದೂ ನಿಜ– ಎನಿಸಿತು ಭಟ್ಟನಿಗೆ. ಅರಮನೆಯಿಂದ ಹೊರಡು ವಾಗಲೇ ಇವರು ಈ ವಿಚಾರ ಮಾಡಲಿಲ್ಲವೇಕೆ?

ಬೆಳಕಿನಲ್ಲಿ ಥಳಥಳನೆ ಹೊಳೆಯುತ್ತಿದ್ದ ಆ ಆಭರಣಗಳು ಭಟ್ಟನ ಅರೆಬೆಪ್ಪು ಮೆದುಳಿನಲ್ಲೂ ಕ್ರಾಂತಿಯುಂಟಾಗುವಂತೆ ಮಾಡಿದುವು. ಎಷ್ಟಾಗಬಹುದು ಇವು ಗಳ ಬೆಲೆ? ಸಾವಿರ? ಲಕ್ಷ? ಕೋಟಿ? ತನ್ನ ಜೀವಮಾನವಲ್ಲಿಯೆ ಅಂಥ ಆಭರಣ ಕಂಡಿರದಿದ್ದ ಆ ಬಡ ಭಟ್ಟ ಅವುಗಳ ಸರಿಯಾದ ಬೆಲೆಯನ್ನು ಊಹಿಸು ವುದೂ ಕಷ್ಟವಾಗಿತ್ತು.

ನಿಮಿಷಗಳು ಕಳೆದಂತೆಲ್ಲ ಅವನ ಮನಸ್ಸು ಆಸೆಯಿಂದ ಪುಟಿಯತೊಡಗಿತು. ಈ ಆಭರಣಗಳೆಲ್ಲವನ್ನೂ ಮಾಸಾಹೇಬರು ತನಗೇ ಕೊಡಮಾಡುತ್ತಿದಾರೆ! ತಾನೆಂಥ ಭಾಗ್ಯಶಾಲಿ! ಸಾಯುವವರೆಗೆ ಕುಳಿತು ತಿಂದರೂ ಮತ್ತೂ ಉಳಿಯುವಷ್ಟು ಆಭರಣಗಳು. ಅವೆಲ್ಲಾ ಇನ್ನು ತನ್ನವು!

ಕೊಂಕಣದ ಹಳ್ಳಿಯಲ್ಲಿದ್ದ ತನ್ನ ವೃದ್ಧ ತಾಯಿಯ ಮೂರ್ತಿ ಅವನ ಕಣ್ಣೆದುರು ಕಾಣಿಸಿಕೊಂಡಿತು. ಉಟ್ಟುಕೊಳ್ಳಲು ಮತ್ತೊಂದು ಸೀರೆಯೂ ಇಲ್ಲದೆ ಅತ್ಯಂತ ದರಿದ್ರಾವಸ್ಥೆಯಲ್ಲಿ ದಿನಗಳೆಯುತ್ತಿದ್ದ ಆ ತಾಯಿಗೆ ಈ ಭಾರಿ ನಿಧಿಯನ್ನು ಕಂಡು ಎಷ್ಟು ಸಂತೋಷವಾದೀತು! ಆಯುಷ್ಯದುದ್ದಕ್ಕೂ ಕೇವಲ ಕಷ್ಟವನ್ನೇ ಉಂಡು ಕಣ್ಣೀರಿನಲ್ಲೇ ಕೈ ತೊಳೆದ ತನ್ನ ಆ ತಾಯಿ ಕೊನೆಯ ದಿನಗಳಲ್ಲಾದರೂ ಕೊಂಚ ಸುಖಪಡುವಂತಾಯಿತು. ತಾನೂ ಇನ್ನು ಅಡುಗೆಯಾಳಾಗಿ ಕೊಳೆಯುವ ಅಗತ್ಯವುಳಿಯಲಿಲ್ಲ. ಚಂದದ ಹೆಣ್ಣೊಂದನ್ನು ವಿವಾಹವಾಗಿ, ಹಳ್ಳಿಯಲ್ಲಿಯೆ ದೊಡ್ಡದೊಂದು ಮನೆ ಕಟ್ಟಿಕೊಂಡು ಸೊಗಸಾಗಿ ಸಂಸಾರ ಸಾಗಿಸಬಹುದು....

ತನ್ನ ಪಾಲಿಗೆ ಕೇವಲ ಸ್ವಪ್ನವಾಗಿದ್ದ ಸಂಸಾರ....ಸಂಸಾರ ಸುಖ....

ಕೃತಜ್ಞತೆ ತುಂಬಿದ ದೃಷ್ಟಿಯಿಂದ ಭಾಲಚಂದ್ರಭಟ್ಟ ತನ್ನ ಯಜಮಾನಿಯರಿಬ್ಬರನ್ನೂ ನೋಡಿದ.

"ತೆಗೆದುಕೋ ಈ ಗಂಟನ್ನು. ನೀನಿನ್ನು ಹೊರಡು. ಹಳ್ಳಿಗೆ ಹೋಗಿ ಸುಖವಾಗಿರು," ಎಂದಳು ಯಮುನಾಬಾಯಿ.

"ನೀವೂ ನನ್ನ ಸಂಗಡಲೇ ಬರಬಾರದೇಕೆ ಮಾಸಾಹೇಬ್?"

"ನಿನ್ನ ಹಳ್ಳಿಯಿರುವುದು ಇಲ್ಲಿಂದ ನೂರಾರು ಹರದಾರಿ ದೂರದಲ್ಲಿ. ಅಲ್ಲಿಯವರೆಗೆ ನಾವು ವೈರಿಗಳ ಕಣ್ಣು ತಪ್ಪಿಸಿ ಹೋಗುವುದು ಸುಲಭವಲ್ಲ ಭಟಜೀ. ಅಷ್ಟು ದೂರದ ಪ್ರವಾಸ ಮಾಡಲು ತಕ್ಕ ಸಮಯವೂ ಇದಲ್ಲ. ಮೊದಲು ನೀನು ಹೋಗು. ಮುಂದೆ, ಬಂಡಾಯದ ಗದ್ದಲ ಅಡಗಿದ ಮೇಲೆ, ಇಂಗ್ಲೀಷರು ನಮ್ಮ ಶೋಧ ನಿಲ್ಲಿಸಿದ ಮೇಲೆ ನಾವೇ ನಿನ್ನ ಹಳ್ಳಿಗೆ ಬರುವೆನಂತೆ."

ಸರಲ ಹೃದಯದ ಆ ಆಳುಮನುಷ್ಯ ಆ ಮಾತುಗಳೆಲ್ಲವನ್ನೂ ಪೂರ್ತಿಯಾಗಿ ನಂಬಿದ. ಆತ್ಮಹತ್ಯೆ ಮಾಡಿಕೊಳ್ಳುವ ಯೋಚನೆ ಅವರಿಗಿರಬಹುದೆಂಬುದು ಅವನ ದಪ್ಪ ತಲೆಗೆ ಒಂದು ಬಾರಿಯೂ ಹೊಳೆಯಲಿಲ್ಲ. ಆಭರಣ

ಗಳು ದೊರೆತ ಆನಂದ ಬೇರೆ ಅವನನ್ನು ಇನ್ನೂ ದಿಙ್ಮೂಢನನ್ನಾಗಿಸಿತ್ತು. ಆ ಸ್ಥಿತಿಯಲ್ಲಿ ಭಾಲಚಂದ್ರಭಟ್ಟ ಹೆಚ್ಚಿನ ಚಿಕಿತ್ಸೆಗೂ ತೊಡಗುವಂತಿರಲಿಲ್ಲ.

"ನಿಜವಾಗಿಯೂ ಬರುವಿರಲ್ಲವೆ ಮಾಸಾಹೇಬ್? ನೀವೂ ಬರಬೇಕು ರಾಣೀಸಾಹೇಬ್. ಅಲ್ಲಿ ಎಲ್ಲಾ ಶಾಂತವಿದೆ. ನಿಮ್ಮ ಬಗ್ಗೆ ಯಾರಿಗೂ ಏನೂ ಸಂಶಯ ಬರುವುದಿಲ್ಲ. ರಾಜಾಸಾಹೇಬರು ಬರುವವರೆಗೂ ನೀವು ಅಲ್ಲಿಯೆ ನಿಶ್ಚಿಂತರಾಗಿ ಇರಬಹುದು."

"ಹಾಗೇ ಮಾಡೋಣವಂತೆ ಭಟಜೀ. ನೀನೀಗ ಹೊರಡು. ಹಾದಿಯಲ್ಲಿ ಯಾರಾದರೂ ನೀನು ಎಲ್ಲಿಂದ ಬಂದಿಯೆಂದು ಕೇಳಿದರೆ ನರಗುಂದದಲ್ಲಿ ಯುದ್ಧ ಸುರುವಾದೊಡನೆ ಜೀವವುಳಿಸಿಕೊಂಡು ಹೊರಟೆನೆಂದು ಹೇಳು. ನಮ್ಮ ಜತೆಗೆ ನೀನು ಹೊರಟದ್ದನ್ನು ಯಾರಿಗೂ ಹೇಳಬೇಡ. ನಾವೆತ್ತ ಹೋದೆವೆಂಬುದನ್ನೂ ತಿಳಿಸಬೇಡ. ಏಳು. ಈ ಎರಡೂ ಗಂಟು ತೆಗೆದುಕೊಂಡು ಹೊರಟುಬಿಡು. ನಾವೂ ಹೊರಡುವೆವು."

"ನಿಮಗೆ ಹಾಸಲು ಹೊದೆಯಲು ಬೇಕಲ್ಲ ಮಾಸಾಹೇಬ್?"

"ವೆಂಕಟೇಶ್ವರ ಅದರ ವ್ಯವಸ್ಥೆ ಮಾಡಲು ಸಮರ್ಥನಿದ್ದಾನೆ."

ಒಡವೆಗಳ ಗಂಟನ್ನು ಉಡಿಯಲ್ಲಿ ಕಟ್ಟಿಕೊಂಡು ಬಟ್ಟೆಬರೆ-ತಿಂಡಿತಿನಿಸು ಗಳ ಗಂಟನ್ನು ಹೆಗಲಮೇಲಿಟ್ಟುಕೊಂಡು ಭಾಲಚಂದ್ರಭಟ್ಟ ಹೊರಡಲು ಸಿದ್ಧ ನಾದ. ಒಡತಿಯರಿಬ್ಬರ ಪಾದಗಳನ್ನು ಹಿಡಿದು ವಂದಿಸಿ ಮೇಲಕ್ಕೇಳುತ್ತಲೂ ದುಃಖದಿಂದ ಅವನ ಕೊರಳು ಬಿಗಿದುಬಂತು. ಅಶ್ರುಗಳನ್ನುದುರಿಸುತ್ತ ಆತ ಹೇಳಿದ:

"ಮಾಸಾಹೇಬ್, ರಾಣೀಸಾಹೇಬ್, ಇದುವರೆಗೂ ನನ್ನನ್ನು ಹೊಟ್ಟೆಯ ಮಗನಂತೆ ಕಾಪಾಡಿದಿರಿ. ಈಗಲೂ ನಿಮ್ಮನ್ನು ಬಿಟ್ಟುಹೋಗಲು ಮನಸ್ಸಿಲ್ಲ. ಆದರೂ, ನಿಮ್ಮ ಅಪ್ಪಣೆಯನ್ನು ಮೀರಲಾರದೆ ಹೊರಟಿದೇನೆ. ಗಂಡಾಂತರಗಳೆಲ್ಲಾ ಇಲ್ಲವಾದ ಬಳಿಕ ಈ ಬಡವನನ್ನು ಮರೆಯದೆ ನನ್ನ ಹಳ್ಳಿಗೆ ಬಂದೇ ಬರಬೇಕು."

"ಆಗಲಿ ಭಾಲಚಂದ್ರಾ, ಹಾಗೇ ಆಗಲಿ. ದೇವರು ನಿನ್ನ ಕಲ್ಯಾಣ ಮಾಡಲಿ," ಎಂದು ಮನಃಪೂರ್ವಕವಾಗಿಯೆ ಅವನನ್ನು ಹರಸಿದಳು ಯಮುನಾ ಬಾಯಿ.

ಆತ ಹಿಂದಿರುಗಿ, ಗುಡ್ಡ ಇಳಿದು ಗಿಡಗಳ ಗುಂಪಿನಾಚೆ ಮರೆಯಾಗುವ

ವರೆಗೂ ಮೌನವಾಗಿ ಕುಳಿತಿದ್ದ ಅತ್ತೆ ಸೊಸೆಯರು ಅನಂತರ ಎದ್ದು ತಾವೂ ಗುಡ್ಡದಿಂದಿಳಿದು ಹೊಳೆಯ ಕಡೆಗೆ ಸಾಗಿದರು.

"ಭಾಲಚಂದ್ರನಂತೂ ಹೋದ. ನಾವಿನ್ನು ಯಾವ ಆತಂಕವೂ ಇಲ್ಲದೆ ನಮ್ಮ ಉದ್ದೇಶವನ್ನು ಈಡೇರಿಸಿಕೊಳ್ಳಬಹುದು," ಎಂದಳು ಯಮುನಾಬಾಯಿ.

"ಹೊಳೆಯ ಹತ್ತಿರ ಯಾರಾದರೂ ಇದ್ದರೇನು ಗತಿ ಅತ್ತೆಯವರೆ?"

"ಈ ಕಾಡಿನ ನಡುವೆ ಯಾವ ಮನುಷ್ಯಪ್ರಾಣಿ ಸುಳಿದೀತು ತಾಯಿ? ಹೂಂ. ಪ್ರವಾಹದ ಸೆಳೆತಕ್ಕೆ ಬಿಚ್ಚಿಹೋಗದಂತೆ ಸೀರೆಯನ್ನು ಬಿಗಿಯಾಗಿ ಕಟ್ಟಿಕೊಳ್ಳಬೇಕು."

ಇಬ್ಬರೂ ಪುನಃ ನಿಂತು, ಸೀರೆಗಳನ್ನೆತ್ತಿ ಗಟ್ಟಿಯಾಗಿ ಕಟ್ಟಿಕೊಂಡರು. ಸೆರಗನ್ನು ಸೊಂಟಕ್ಕೆ ಬಿಗಿಯುತ್ತಿದ್ದ ಹಾಗೆಯೆ ಯಮುನಾಬಾಯಿಗೆ ಮತ್ತಾವುದೋ ವಿಚಾರ ಹೊಳೆಯಿತು. ಸೆರಗನ್ನು ಹಾಗೆಯೆ ಇರಿಸಿಕೊಂಡು ಆಕೆ ಲಗುಬಗೆಯಿಂದ ನಡೆಯತೊಡಗಿದಳು.

ಪಡುವಣದಲ್ಲಿದ್ದ ಎತ್ತರವಾದ ಗುಡ್ಡದಾಚೆ ಸೂರ್ಯನಿಳಿದು ಹೋಗಿ ಎಷ್ಟೋ ಸಮಯವಾಗಿತ್ತು. ಇನ್ನೇನು ಕತ್ತಲೂ ಹರಡುವುದರಲ್ಲಿತ್ತು. ತಣ್ಣಗೆ ತೀಡುತ್ತಿದ್ದ ಗಾಳಿ ಇನ್ನಷ್ಟು ತಣ್ಣಗಾಗಿ ಕೊಂಚ ವೇಗವಾಗಿಯೆ ಓಡುತ್ತಾ ಬರುತ್ತಿತ್ತು. ಹಕ್ಕಿಗಳ ಕಿಲಬಿಲಾಟ ಒಮ್ಮೆ ಅತಿಯೆನಿಸುವಷ್ಟು ಹೆಚ್ಚುತ್ತಿತ್ತು, ಇನ್ನೊಮ್ಮೆ ಏನೂ ಇಲ್ಲವೆನ್ನುವಷ್ಟು ಕಡಮೆಯಾಗುತ್ತಿತ್ತು. ಕೊಂಚ ದೂರದಲ್ಲಿ ಪೊದೆಯೊಂದರ ಮರೆಯಲ್ಲಿ ಕುಳಿತು ಯಾವುದೋ ಕಾಡುಪ್ರಾಣಿಯೊಂದು ವ್ಯಥಿತ ಸ್ವರದಲ್ಲಿ ಊಳಿಡುತ್ತಿತ್ತು. ನದಿಯ ಕಡೆ ನಡೆದಿದ್ದ ಅತ್ತೆ ಸೊಸೆಯರ ಎದುರಿಗೇ ಗೂಬೆಗಳೂ ತೊಗಲು ಬಾವಲಿಗಳೂ ಹಾರುತ್ತ ಹೊರಟಿದ್ದುವು.

"ಅಂತ್ಯಕಾಲ ಸಮೀಪಿಸುತ್ತಾ ಬಂತು. ಇನ್ನು ವೆಂಕಟೇಶ್ವರನನ್ನು ಭಜಿಸುತ್ತಾ ಉಳಿದ ಹಾದಿ ನಡೆಯೋಣ," ಎಂದಳು ಅತ್ತೆ.

ವೆಂಕಟೇಶ್ವರನನ್ನು ಪ್ರಾರ್ಥಿಸುವ ಗೀತೆಯೊಂದನ್ನು ಅವರಿಬ್ಬರೂ ಮೆಲುದನಿಯಲ್ಲಿ ಹಾಡುತ್ತ ಹೊರಟರು. ಗೀತೆ ಮುಗಿಯುವ ವೇಳೆಗೆ ನದೀ ತೀರವೂ ಸಮೀಪಿಸಿತ್ತು.

ದಂಡೆಯ ಮೇಲೆ ನಿಂತು, ಆಗತಾನೆ ಪಸರಿಸತೊಡಗಿದ್ದ ನಸುಗತ್ತಲಲ್ಲಿ ರಹಸ್ಯಮಯಿಯಂತೆ ಹರಿದು ಹೊರಟಿದ್ದ ಮಲಪ್ರಭೆಯನ್ನು ದಿಟ್ಟಿಸುತ್ತ ಯಮುನಾಬಾಯಿಯೆಂದಳು :

"ಆತ್ಮಹತ್ಯೆ ಮಾಡಿಕೊಳ್ಳುವುದು ಪಾಪವೆಂಬುದನ್ನು ನಾವೂ ಬಲ್ಲೆವು. ಆದರೂ ಈಗ ಅದನ್ನು ಬಿಟ್ಟರೆ ಬೇರೆ ದಾರಿಯಿಲ್ಲ. ನಿರುಪಾಯವಾಗಿ ನಾವು ಈ ಪಾಪಕೃತ್ಯಕ್ಕೇ ತೊಡಗುತ್ತಿದೇವೆ. ನಮ್ಮ ಸ್ಥಿತಿಯನ್ನು ಗಮನಿಸಿ ನಮ್ಮನ್ನು ಕ್ಷಮಿಸು. ನಮಗೆ ನರಕವಾಸದ ಶಿಕ್ಷೆ ವಿಧಿಸದೆ ನಿನ್ನ ಚರಣಗಳ ಬಳಿ ಇಟ್ಟು ಕೊಂಡು ರಕ್ಷಿಸು. ವೆಂಕಟೇಶಾ, ಇದೇ ನನ್ನ ಕೊನೆಯ ಪ್ರಾರ್ಥನೆ."

ಅನಂತರ ಇಬ್ಬರೂ ನೀರಿಗಿಳಿದು ಮುಖ ತೊಳೆದುಕೊಂಡು, ಆಶ್ರಯ ದಾತೆಯಾದ ಹೊಳೆಯವ್ವನಿಗೆ ವಂದಿಸಿ, ಮೂಡಲಿದತ್ತ ಮುಖ ಮಾಡಿ ನಿಂತು ಕೈ ಜೋಡಿಸಿ ದೇವರನ್ನು ಪ್ರಾರ್ಥಿಸಿದರು. ಪ್ರಾರ್ಥನೆ ಮುಗಿಯುತ್ತಲೂ ಅತ್ತೆ ತನ್ನ ಸೆರಗನ್ನೂ ಸೊಸೆಯ ಸೆರಗನ್ನೂ ಕೂಡಿಸಿ ಗಟ್ಟಿಯಾಗಿ ಗಂಟು ಕಟ್ಟಿದಳು.

ಇಬ್ಬರೂ ಕೈ ಕೈ ಹಿಡಿದುಕೊಂಡು ನೀರಿನಲ್ಲಿಳಿಯುತ್ತ ಹೋದ ಹಾಗೆ ಆಯುಷ್ಯದ ಅನೇಕ ಮಧುರ ಸನ್ನಿವೇಶಗಳು ಮಿಂಚಿನ ವೇಗದಿಂದ ಅವರ ದೃಷ್ಟಿ ಯೆದುರು ಸುಳಿದುಹೋದುವು. ಅವರು ಮತ್ತೆ ಭಾಸ್ಕರರಾಯನನ್ನು ನೆನೆದರು, ನರಗುಂದವನ್ನು ನೆನೆದರು, ಅಲ್ಲಿನ ಅರಮನೆಯಲ್ಲಿ ತಾವು ಕಳೆದ ಕಾಲವನ್ನು ನೆನೆದರು. ಇನ್ನು ಒಂದೈದು ನಿಮಿಷ ಅಷ್ಟೆ. ಅಲ್ಲಿಗೆ ತಮ್ಮ ಆಯುಷ್ಯ ಅದೃಶ್ಯ ವಾಗುವುದು. ಈ ನೆನಪುಗಳು, ಭಾವನೆಗಳು ಸಂವೇದನೆಗಳು ಯಾವುವೂ ಉಳಿಯಲಾರವು.

"ಮಗಳೇ ಸಾವಿತ್ರಿ, ಬೆಳಗಿನಿಂದ ಒಂದೇ ಸಮನೆ ಚಿಂತೆಯಿಂದ ಕಷ್ಟ ಪಟ್ಟಿರುವ ನಾವು ಇನ್ನು ಒಂದೆರಡು ಕ್ಷಣಗಳಲ್ಲೇ ಅವುಗಳಿಂದ ಬಿಡುಗಡೆ ಹೊಂದಿ ತಾಯಿ ಮಲಾಪಹಾರಿಣಿಯ ತೊಡೆಮಡಿಲಿನಲ್ಲಿ ಆಶ್ರಯ ಪಡೆಯುವೆವು. ಇಲ್ಲಿ ನೀರೂ ಸಾಕಷ್ಟು ಆಳವಾಗಿದೆ. ನಮಗೆ ಹೆಚ್ಚು ತಾಪವೂ ಆಗಲಾರದು," ಎನ್ನುತ್ತಾ ಯಮುನಾಬಾಯಿ ಸೊಸೆಯನ್ನು ಬರಸೆಳೆದು ಅಪ್ಪಿಕೊಂಡು ಪ್ರವಾಹದ ಆಳಕ್ಕಿಳಿದಳು. ನದಿಯ ಮಧ್ಯಭಾಗಕ್ಕೆ ಬರುವುದರೊಳಗಾಗಿಯೆ, ಗಾಢಾಲಿಂಗನ ದಿಂದ ಒಂದಾಗಿದ್ದ ಆ ದೇಹಗಳೆರಡೂ ಪ್ರವಾಹದಲ್ಲಿ ಮುಳುಗುತ್ತ ಏಳುತ್ತ ತೇಲುತ್ತ ಹೊರಟುವು.

ಅಷ್ಟರಲ್ಲಿಯೆ ಅಂಧಕಾರ ಸೃಷ್ಟಿಯ ಮೇಲೆ ತನ್ನ ಅಧಿಕಾರವನ್ನು ಪೂರ್ತಿ ಯಾಗಿ ಸ್ಥಾಪಿಸಿತ್ತು.

## ೧೯

"ಎಂಥ ಕೆಟ್ಟ ಕನಸು!

ಮುಖದ ಮೇಲೆ ಹೊದ್ದುಕೊಂಡಿದ್ದ ಶಾಲನ್ನು ಸರಿಸಿ ಭಾಸ್ಕರರಾಯ ಎದ್ದು ಗೋಡೆಗೊರಗಿ ಕುಳಿತುಕೊಂಡ. ಇನ್ನೂ ಸರಿಯಾಗಿ ಬೆಳಕಾಗಿರಲಿಲ್ಲ. ಹೊರಗೆ ನಸುಗತ್ತಲು ಪಸರಿಸಿತ್ತು. ಬೆಳಗಿನ ತಂಗಾಳಿ ಮೆಲ್ಲಮೆಲ್ಲನೆ ದೇವಾಲಯದಲ್ಲಿ ಪ್ರವೇಶಿಸುತ್ತಿತ್ತು.

ಹತ್ತಿರದಲ್ಲಿಯೆ ಮಲಗಿಕೊಂಡಿದ್ದ ಜತೆಗಾರರತ್ತ ಭಾಸ್ಕರರಾಯನ ದೃಷ್ಟಿ ಹೋಯಿತು. ಮಧ್ಯರಾತ್ರಿಯವರೆಗೂ ನಡೆದು ನಡೆದು ಸೋತುಹೋಗಿ ಅವರೆಲ್ಲರೂ ಮಲಗಿಕೊಂಡಿದ್ದರು. ಮುನ್ನಾದಿನದ ಸಾಯಂಕಾಲ ಶತ್ರುಗಳ ಗೂಢ ಚಾರನೊಬ್ಬ ಅವರನ್ನು ಬೆನ್ನಟ್ಟಿ ಬಂದಂತೆ ಭಾಸವಾಗಿದ್ದುದರಿಂದ ಅವನ ಕಣ್ಣು ತಪ್ಪಿಸಿ ಪಾರಾಗಲೆಂದು ಸತತವಾಗಿ ಎಂಟು ತಾಸುಗಳವರೆಗೆ ಅವರು ನಡೆದು ಬಂದಿದ್ದರು. ಎರಡು ಹಳ್ಳಿಗಳ ಮಧ್ಯದಲ್ಲಿದ್ದ ಪಾಳು ಗುಡಿಯೊಂದು ಅವರಿಗೆ ಆಸರೆಯನ್ನೊದಗಿಸಿತ್ತು. ಉಂಡೆ-ಅವಲಕ್ಕಿಗಳಲ್ಲಿಯೆ ಸಮಾಧಾನ ಮಾಡಿಕೊಂಡು ನೆಲಕ್ಕೆ ದೇಹ ಅರ್ಪಿಸಿದ್ದರು.

ದಾರಿ ತುಳಿದ ದಣಿವು ನಿದ್ದೆಯನ್ನೂ ಬಲು ಬೇಗ ಬರಮಾಡಿಕೊಂಡಿತ್ತು. ಭಾಸ್ಕರರಾಯನಿಗೆ ಮಾತ್ರ ಅಂಥ ಸ್ಥಿತಿಯಲ್ಲಿಯೂ ನಿದ್ರಿಸಲು ಸಾಧ್ಯವಾಗಿರಲಿಲ್ಲ. ಮತ್ತೆ ಎರಡು ಗಂಟೆಗಳವರೆಗೂ ಆತ ಎಚ್ಚರವಾಗಿಯೆ ಇದ್ದ. ವೈರಿಗಳಿಗೆ ತಮ್ಮ ಸುಳುವು ಗೊತ್ತಾಗಿರಲೇಬೇಕು. ಒಬ್ಬ ಗೂಢಚಾರನಿಂದ ಇನ್ನೊಬ್ಬನಿಗೆ ಸುದ್ದಿ ತಿಳಿದಿರಬಹುದು, ಅವನಿಂದ ಮತ್ತೆ ಅನೇಕರಿಗೆ. ರಣಹದ್ದುಗಳ ಹಾಗೆ ಅವರೆಲ್ಲರೂ ತಮ್ಮ ವಾಸನೆ ಹಿಡಿಯಲೆಳೆಸುತ್ತಾ ಸುತ್ತಲೂ ತಿರುಗುತ್ತಿರಬಹುದು.

ಸಂಶಯವಿರಲಿಲ್ಲ ಭಾಸ್ಕರರಾಯನಿಗೆ ಆ ವಿಷಯದಲ್ಲಿ.

ಅಂಥ ಬಿಕ್ಕಟ್ಟಿನ ಸನ್ನಿವೇಶದಲ್ಲಿ ಬಾಗಿಲಿಲ್ಲದ ಪಾಳು ದೇವಾಲಯದಲ್ಲಿ ತಾವೆಲ್ಲರೂ ಮೈಮರೆತು ನಿದ್ರಿಸುವುದು ಜಾಣತನವಾಗದು. ಒಬ್ಬರಾದರೂ ಎಚ್ಚರವಾಗಿರಬೇಕಾದುದು ಅತ್ಯಗತ್ಯ. ಪಾಪ! ಇವರೆಲ್ಲರೂ ದಣಿದು ಹೆಣವಾಗಿ ನಿದ್ರಿಸುತ್ತಿದಾರೆ. ಮುಖ್ಯ ಜವಾಬ್ದಾರಿಯಿರುವುದು ತನ್ನ ಮೇಲೆಯೆ ಅಲ್ಲವೆ? ವೈರಿಗಳ ದೃಷ್ಟಿಯಲ್ಲಿ ಮುಖ್ಯ ಅಪರಾಧಿಯೂ ತಾನೇ. ತನ್ನಿಂದಾಗಿಯೆ ಇವರಿ

ಗೆಲ್ಲಾ ಇಂಥ ವನವಾಸ ಪ್ರಾಪ್ತವಾದದ್ದು. ಅಂತೆಯೆ, ತಾನೇ ಎಚ್ಚರವಾಗಿದ್ದು ತನ್ನನ್ನೂ ಇವರನ್ನೂ ರಕ್ಷಿಸಿಕೊಳ್ಳಬೇಕಾದ್ದು ಕರ್ತವ್ಯವೇ ಸರಿ.

ಹಾಗೆಂದುಕೊಂಡು ಬಹಳ ಹೊತ್ತಿನವರೆಗೂ ಜಾಗ್ರತನಾಗಿಯೆ ಇದ್ದ ಭಾಸ್ಕರರಾಯ. ಅಂಥ ಸಂದರ್ಭದಲ್ಲಿ ವಿಚಾರಗಳು ಹಿಂಡುಹಿಂಡಾಗಿ ಬಂದು ತಲೆಯಲ್ಲಿ ಸೇರುವುದು ಸ್ವಾಭಾವಿಕ. ಅಂದು ತಾವು ಓಡಿಬಂದು ಗುಡಿಯಲ್ಲಿ ಆಶ್ರಯ ಪಡೆದುದನ್ನು ಕುರಿತು ಯೋಚಿಸುತ್ತಿದ್ದಂತೆ ತನ್ನ ತಾಯಿ-ಪತ್ನಿಯರೂ ಹಾಗೆಯೆ ಓಡುತ್ತಲೇ ಇರಬೇಕಾದ ಪ್ರಸಂಗ ಬಂದಿರಬಹುದೇ ಎಂದು ಭಾಸ್ಕರ ರಾಯ ಚಿಂತಿಸತೊಡಗಿದ.

ಆ ಚಿಂತೆಯ ಅಮಲಿನಲ್ಲಿಯೆ ಆತ ನೈಮರೆತು ತನಗೆ ತಿಳಿಯದಂತೆಯೇ ನಿದ್ರಾಧೀನನಾದ. ಅದು ನಿದ್ದೆಯೆನ್ನುವುದಕ್ಕಿಂತ ಜೊಂಪು ಎಂದರೆ ಉಚಿತ ವಾದೀತು. ನಿದ್ರಾವಸ್ಥೆ-ಜಾಗ್ರತಾವಸ್ಥೆಗಳ ನಡುವಣ ಆ ವಿಚಿತ್ರ ಸ್ಥಿತಿಯಲ್ಲಿ ಆತನಿದ್ದಾಗ ಕಾಣಿಸಿತು ಆ ಕೆಟ್ಟ ಕನಸು....

"ಎಂಥ ಭಯಂಕರವಾದ ದುಸ್ವಪ್ನ!"

ಭಾಸ್ಕರರಾಯನ ಎದೆಯಿನ್ನೂ ಬಡಿದುಕೊಳ್ಳುತ್ತಲೇ ಇತ್ತು. ಕನಸಿನ ಗುಂಗು ಇನ್ನೂ ಇಳಿದಿರಲಿಲ್ಲ. ಅದರ ಕೊನೆಯ ದೃಶ್ಯವಂತೂ ಈಗಲೂ ಅವನ ಕಣ್ಣೆ ನೆದುರು ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತಲೇ ಇತ್ತು.

ಕಣ್ಣುಗಳುಜ್ಜಿಕೊಳ್ಳುತ್ತ ಭಾಸ್ಕರರಾಯ ತನ್ನನ್ನು ತಾನೆ ಕೇಳಿಕೊಂಡ.

"ಏನಿರಬಹುದು? ಏನಿರಬಹುದು ಇದರ ಅರ್ಥ? ಕನಸಿನಲ್ಲಿ ನಡೆದ ಹಾಗೆ ನಿಜವಾಗಿಯೂ ತನ್ನ ತಾಯಿ-ಪತ್ನಿಯರು...."

ಆ ಹಗಲಿನುದ್ದಕ್ಕೂ ಆ ಕನಸು ಅವನನ್ನು ಕಾಡುತ್ತಲೇ ಇತ್ತು. ಬೆಳ ಗಾಗುವುದರೊಳಗಾಗಿ ಅವರೆಲ್ಲ ಎದ್ದು ಅರಣ್ಯದ ಹಾದಿ ಹಿಡಿದರು. ಹಗಲು ಹೊತ್ತು ದೇವಾಲಯಗಳಲ್ಲಾಗಲಿ ಹಳ್ಳಿಗಳಲ್ಲಾಗಲಿ ಕಾಣಿಸಿಕೊಳ್ಳುವಂತಿರಲಿಲ್ಲ. ಭಾಸ್ಕರರಾಯನನ್ನು ಜೀವಂತವಾಗಿ ಹಿಡಿದುಕೊಟ್ಟವರಿಗೆ ಹತ್ತು ಸಾವಿರ ರೂಪಾಯಿ ಬಹುಮಾನ ಕೊಡುವುದಾಗಿ ಇಂಗ್ಲೀಷರು ಡಂಗುರ ಸಾರಿದ್ದರು. ರಾಘೋಬ, ರಾಮರಾಯ, ವಿಷ್ಣು ಮೊದಲಾದವರಿಗಾಗಿಯೂ ಐದೈದು ಸಾವಿರದ ಇನಾಮು ಗೊತ್ತಾಗಿತ್ತು. ಹಣದ ಆಸೆಗೊಳಗಾಗಿ ಅವರನ್ನು ಹಿಡಿದುಕೊಡಲು ಯತ್ನಿಸುವ ಜನರಿಗೂ ಅಭಾವವಿರಲಿಲ್ಲ. ಅಂತೆಯೇ ಅವರು ಅತ್ಯಂತ ಜಾಗರೂ ಕತೆಯಿಂದ ಪಯಣ ಮುಂದುವರಿಸಬೇಕಾಗಿತ್ತು.

ನರಗುಂದದಿಂದ ಬರುವಾಗ ಅವರು ಕಟ್ಟಿ ತಂದಿದ್ದ ಅಕ್ಕಿ ಬೇಳೆ ಹಿಟ್ಟು ಉಪ್ಪು ಮೊದಲಾದ ಆಹಾರಪದಾರ್ಥಗಳು ಆ ವೇಳೆಗಾಗಲೆ ತೀರಿಹೋಗಿದ್ದುವು. ಅಡುಗೆಯವರಲ್ಲಿ ಒಬ್ಬಿಬ್ಬರು ಆಗಾಗ ದಾರಿಯಲ್ಲಿ ಸಿಕ್ಕಿದ ಹಳ್ಳಿಗಳಲ್ಲಿ ಪ್ರವೇಶಿಸಿ, ತಾವು ಪಂಢರಪುರಕ್ಕೆ ಹೊರಟದ್ದ ಯಾತ್ರಿಕರೆಂದು ಹೇಳಿ ಅಗತ್ಯವಿದ್ದ ಸಾಮಗ್ರಿಗಳನ್ನು ಕೊಂಡು ತರುತ್ತಿದ್ದರು.

ಈ ದಿನ ಉಪ್ಪು ತೀರಿಹೋಗಿತ್ತು. ಅದನ್ನು ತರುವುದಕ್ಕೆಂದು ಹಳ್ಳಿಯೊಂದಕ್ಕೆ ಹೋಗಿದ್ದ ಸೇವಕನೊಬ್ಬ ಅಲ್ಲಿಂದ ಬರುವಾಗ ಅವನ ಕಣ್ಣು ಕಂಬನಿಗಳಿಂದ ತುಂಬಿಕೊಂಡಿದ್ದುದನ್ನು ಕಂಡು ಭಾಸ್ಕರರಾಯನ ಎದೆ ಮತ್ತೆ ಬಲವಾಗಿ ಬಡಿದುಕೊಂಡಿತು.

" ಏನಾಯ್ತು ರಾಮೂ? ಯಾಕೆ ಅಳುತ್ತೀ? ಹಳ್ಳಿಯಲ್ಲಿ ಯಾರಾದರೂ ಏನಾದರೂ ಅಂದರೆ?" ಎಂದ ವಿಷ್ಣು.

ಎಡಗೈಯ ಹಿಂಬದಿಯಿಂದ ಕಂಬನಿ ಮಿಡಿದುಕೊಳ್ಳುತ್ತ ರಾಮು ದುಃಖದಿಂದ ತಲೆಯಾಡಿಸಿದನೇ ವಿನಾ ಮಾತನಾಡಲಿಲ್ಲ.

" ಯಾಕೆ ರಾಮೂ? ಏನು ಸುದ್ದಿ? ಏನಿದ್ದರೂ ಧೈರ್ಯವಾಗಿ ಹೇಳು," ಎಂದ ಭಾಸ್ಕರರಾಯ, ಕಾತರದ ಸ್ವರದಲ್ಲಿ.

" ಹೇಗೆ ಹೇಳಲಿ ಮಹಾರಾಜ್? ಹೇಗೆ ಹೇಳಲಿ?" ಎನ್ನುತ್ತಾ ರಾಮು ನೆಲಕ್ಕೆ ಕುಸಿದು ಮುಖಕ್ಕೆ ಧೋತರ ಮುಚ್ಚಿಕೊಂಡು ಎಳೆಮಕ್ಕಳಂತೆ ರೋದಿಸತೊಡಗಿದ.

ಆಗ ಮಾತ್ರ ಭಾಸ್ಕರರಾಯನಿಗೆ ಸಂಶಯವೇ ಉಳಿಯಲಿಲ್ಲ. ಕನಸಿನಲ್ಲಿ ಕಂಡ ಹಾಗೆ ತನ್ನ ತಾಯಿ–ಪತ್ನಿಯರು ಆತ್ಮಹತ್ಯೆ ಮಾಡಿಕೊಂಡಿರಬೇಕು....

ರಾಮುವಿನ ಅಳುವಿನ ರಭಸವಿಳಿಯುವರೆಗೂ ಸುಮ್ಮನಿದ್ದು ಭಾಸ್ಕರರಾಯ ಮತ್ತೆ ವಿಚಾರಿಸಿದ:

" ನೀನು ಹೇಳುವುದು ದುಃಖದ ಸಂಗತಿಯೆಂಬುದೇನೊ ಗೊತ್ತಾಯಿತು. ಈಗ ನಮಗೆ ಸುಖವೂ ಒಂದೆ, ದುಃಖವೂ ಒಂದೆ. ಏನಿದ್ದರೂ ಅನುಮಾನ ಮಾಡದೆ ಹೇಳು."

" ಅಯ್ಯೋ ಸರಕಾರ್, ಯಾವ ಬಾಯಿಂದ ಹೇಳಲಿ? ಮಸಾಹೇಬರೂ ರಾಣೀಸಾಹೇಬರೂ ಮಲಪ್ರಭೆಯಲ್ಲಿ ಹಾರಿ ಸ್ವರ್ಗಕ್ಕೇರಿದರಂತೆ. ಬೂದಿಹಾಳ

ಹಳ್ಳಿಯಲ್ಲಿ ಅಂತ್ಯಸಂಸ್ಕಾರವೂ ನಡೆಯಿತಂತೆ. ಇದೇ ತಾನೆ ನಾನು ಉಪ್ಪು ತರಲು ಹೋದಾಗ ಹಳ್ಳಿಯಲ್ಲಿ ಮಾತಾಡುತ್ತಿದ್ದರು...."

ಬೆಳಗಿನಿಂದಲೂ ಅದೇ ಚಿಂತೆಯಲ್ಲಿ ಮುಳುಗಿದ್ದುದರಿಂದಾಗಿ ಭಾಸ್ಕರ ರಾಯನಿಗೆ ರಾಮು ತಿಳಿಸಿದ ಸಮಾಚಾರದಿಂದ ಅಂಥ ಆಘಾತವೇನೂ ಆಗಲಿಲ್ಲ. ತಾಯಿಯೂ ಪತ್ನಿಯೂ ಮರಣವನ್ನಪ್ಪಿಕೊಂಡುದುದು ಖಚಿತವಾಗುತ್ತಲೂ ದುಃಖವುಕ್ಕಿಬಂದಿತು. ಅಷ್ಟೆ. ಆದರೆ ಆ ದುಃಖದ ಜತೆಯಲ್ಲಿಯೆ ಒಂದು ತರದ ಸಮಾಧಾನವೂ ಅನಿಸಿತು.

"ಅಂತ್ಯಸಂಸ್ಕಾರವೂ ನಡೆಯಿತೆಂದ ಬಳಿಕ ಎಲ್ಲವೂ ಸರಿಯಾಗಿಯೆ ಮುಗಿದಂತಾಯಿತು. ಸಂಸ್ಕಾರ ಮಾಡಿದವರಾರೆಂದು ವಿಚಾರಿಸಿದಿಯಾ ರಾಮು?"

"ನಾನೇನು ಅವರನ್ನು ಕೇಳಲಿಲ್ಲ ಹುಜೂರ್. ಅವರೇ ಮಾತಾಡಿಕೊಳ್ಳು ತ್ತಿದ್ದರು. ಬೂದಿಹಾಳದಲ್ಲಿ ಇಂಗ್ಲೀಷರು ನೇಮಿಸಿದ ಹೊಸ ಅಧಿಕಾರಿಯೂ ನಮ್ಮ ಜಾತಿಯವನೇ ಇರುವನಂತೆ. ಶೂದ್ರರ ಸ್ಪರ್ಶವಾಗದಂತೆ ಅವನೇ ಸ್ವತಃ ಬ್ರಾಹ್ಮಣರಿಂದಲೇ ಸಂಸ್ಕಾರ ಮಾಡಿಸಿದನಂತೆ."

"ಅಂತೂ ಇಂಥ ಒಬ್ಬಿಬ್ಬರಾದರೂ ಜಾತ್ಯಾಭಿಮಾನಿಗಳು ಈ ದೇಶದಲ್ಲಿ ಇನ್ನೂ ಉಳಿದಿರುವರೆಂದಾಯಿತು. ಇದೂ ಒಂದು ಸಮಾಧಾನದ ಸಂಗತಿಯೇ ಅಲ್ಲವೇ ರಾಘೋಬಾ ?"

"ಎಲ್ಲರೂ ಆ ನೀಚ ಬನ್ಯಾಬಾಪು ಕೃಷ್ಣಾಜಿಯಂಥವರೇ ಇರ್ತಾರೆಯೆ ಸರಕಾರ್ ?" ಎಂದ ರಾಘೋಬ.

ಕೊಂಚ ಹೊತ್ತು ಸುಮ್ಮನಿದ್ದು ಅನಂತರ ಭಾಸ್ಕರರಾಯ ಮತ್ತೆ ಆಡಿದ:

"ಅರಮನೆಯಿಂದ ಹೊರಡುವಾಗಲೇ ನಾನು ಅವರಿಗೆ ಹೇಳಿ ಬಂದಿದ್ದೆ – ನಿಮಗೆ ಸರಿಯೆನಿಸಿದ ಮಾರ್ಗ ಸ್ವೀಕರಿಸಿರಿ ಅಂತ – ನಮ್ಮ ಧರ್ಮ, ನಮ್ಮ ಜಾತಿ, ನಮ್ಮ ಮನೆತನಗಳ ಮಾನಕ್ಕೆ ಕುಂದುಬರದಂತೆ ಆಚರಿಸಿರಿ ಅಂತ. ಅವರು ಅದೇ ಪ್ರಕಾರ ಸರಿಯಾದ ಮಾರ್ಗವನ್ನೇ ಹುಡುಕಿಕೊಂಡರು. ಈಗ ನನ್ನ ಮನಸ್ಸು ಕೊಂಚ ಹಗುರಾದಂತಾಗಿದೆ. ಇಷ್ಟು ದಿನ ಅವರ ಗತಿಯೇನಾ ಯಿತೋ ಎಂಬ ಚಿಂತೆಯೊಂದು ನನ್ನನ್ನು ಹಗಲಿರುಳೂ ಕಾಡುತ್ತಿತ್ತು. ವೈರಿಗಳ ಕೈಗೆ ಅವರು ಸಿಕ್ಕಿದ್ದರೆ ಎಂಥ ಅಪಮಾನ ಸಹಿಸಬೇಕಾಗುತ್ತಿತ್ತೋ ದೇವರಿಗೇ ಗೊತ್ತು. ಅಂಥ ಪ್ರಸಂಗ ಬರದೆ ಅವರು ನೆಮ್ಮದಿಯಿಂದ ಕಣ್ಣು ಮುಚ್ಚಿದ್ದು ಒಳ್ಳೆಯದೇ ಆಯಿತು. ಇನ್ನು ನನ್ನ ನಿಮ್ಮ ಚಿಂತೆಯಿಷ್ಟು ಉಳಿಯಿತು. ನನಗಾಗಿ

ನಾನಂತೂ ಅಂಜುವುದಿಲ್ಲ. ಭಗವಂತನ ಮನಸ್ಸಿನಲ್ಲಿದ್ದುದೆಲ್ಲಾ ಆಗಿಯೇ ಆಗು ತ್ತದೆ. ಆದರೆ, ನನ್ನಿಂದಾಗಿ ನೀವೂ ಗಂಡಾಂತರದಲ್ಲಿ ಸಿಕ್ಕಿ ಬೀಳಬೇಕಾಗಿಲ್ಲ. ನೀವೀಗ ಹೋಗಬಯಸಿದರೆ ನಾನು ಸಂತೋಷದಿಂದ ಅನುಮತಿ ಕೊಡುವೆ."

"ತಮ್ಮನ್ನು ಬಿಟ್ಟು ಹೊರಟರೆ ನಮ್ಮ ಜೀವ ತಡೆದೀತೇ ಸರಕಾರ್?" ಎಂದ ವಿಷ್ಣು.

ರಾಘೋಬ ಮಾತ್ರ ಬಹಳ ಹೊತ್ತಿನವರೆಗೆ ಏನನ್ನೂ ಆಡಲಿಲ್ಲ. ಅವನ ತಲೆಯಲ್ಲಿ ಹೊಸ ವಿಚಾರವೊಂದು ಗದ್ದಲವೆಬ್ಬಿಸಿತ್ತು.

ಹತ್ತು ಹದಿನೈದು ನಿಮಿಷಗಳ ತರುವಾಯ ಆತ ತಲೆಯೆತ್ತಿ ಮಾತನಾಡಿದ:

"ನಾವೆಲ್ಲರೂ ಹೀಗೆ ಗುಂಪಾಗಿ ಹೋಗುವುದೂ ಸುರಕ್ಷಿತತೆಯ ದೃಷ್ಟಿ ಯಿಂದ ಸರಿಯಲ್ಲವೆನಿಸುತ್ತೆ ಸರಕಾರ್."

"ಹೌದು ರಾಘೋಬಾ. ನೀವು ಅನ್ನುವದೂ ನಿಜ. ಅದಕ್ಕೇ ನಾನೆಂದದ್ದು– ನೀವು ನಿಮ್ಮ ನಿಮ್ಮ ಹಾದಿ ಹಿಡಿಯಿರಿ ಅಂತ. ನಾವೆಲ್ಲಾ ಒಟ್ಟಿಗೆ ವೈರಿಗಳ ಕೈಗೆ ಸಿಗುವ ಬದಲು ಕೆಲವರಾದರೂ ತಪ್ಪಿಸಿಕೊಳ್ಳುವುದು ಮೇಲಲ್ಲವೆ?"

"ಹೌದು ಸರಕಾರ್. ಹಾಗೇ ಮಾಡಬೇಕು. ಈಗ ನಾವು ಬೇರೆ ಬೇರೆ ಯಾಗಿ ಪ್ರವಾಸ ಮುಂದುವರಿಸಿ ಯಾವುದಾದರೊಂದು ಗುಪ್ತಸ್ಥಳದಲ್ಲಿ ಮತ್ತೆ ಒಟ್ಟುಗೂಡಬೇಕು."

"ಅಂಥಾ ಗುಪ್ತಸ್ಥಳ ಯಾವುದು?" ಎಂದು ವಿಷ್ಣು ವಿಚಾರಿಸಿದ.

"ಪುಣ್ಯನಗರಕ್ಕಂತೂ ನಾವು ಹೋಗುವಂತಿಲ್ಲ. ಅದೂ ನಮ್ಮ ವೈರಿಗಳ ವಶದಲ್ಲೇ ಇದೆ. ನಾವು ಸುರಕ್ಷಿತವಾಗಿ ಇರಬೇಕಾದರೆ ಉತ್ತರದಲ್ಲಿನ ನೇಪಾಳಕ್ಕೆ ಹೋಗಬೇಕು. ಅಲ್ಲಿ ತಾತ್ಯಾಟೋಪಿ ನಾನಾಸಾಹೇಬ್ ಇದ್ದಾರೆ. ಅವರು ನಮಗೆ ಆಶ್ರಯ ಕೊಡುವುದು ಖಂಡಿತ."

"ಅವರಲ್ಲಿ ಆಶ್ರಯ ಹೊಂದುವುದಕ್ಕಾಗಿಯೆ ನಾವು ಅಷ್ಟು ದೂರ ಹೋಗು ವುದೇ?" ಎಂದ ವಿಷ್ಣು, ಅಸಹನೆಯ ಧ್ವನಿಯಲ್ಲಿ.

"ಮತ್ತೇನು ಮಾಡುವುದು ಹಾಗಾದರೆ?" ಎಂದ ರಾಘೋಬ. ವಾಸ್ತವ ವಾಗಿ, ನೇಪಾಳಕ್ಕೆ ಹೋಗುವ ಇಷ್ಟವೂ ಅವನಿಗಿರಲಿಲ್ಲ. ಕೊಂಕಣತೀರದಲ್ಲಿನ ಯಾವುದೊಂದು ಚಿಕ್ಕ ಹಳ್ಳಿಗೆ ಹೋಗಿ ಕೆಲವು ಕಾಲ ತಲೆಮರೆಸಿಕೊಂಡಿದ್ದು, ಅನಂತರ ತನ್ನ ಕುಟುಂಬದವರನ್ನೂ ಅಲ್ಲಿಗೆ ಕರೆಯಿಸಿಕೊಂಡು ಹಾಯಾಗಿರ

ಬಹುದು ಎಂದೆಲ್ಲ ಯೋಚಿಸಿದ್ದ. ಆದರೆ, ಅಂಥ ಯೋಚನೆಯನ್ನು ದೊರೆಯು ಎದುರು ಬಹಿರಂಗವಾಗಿ ಹೇಳುವುದುಂಟೇ!

"ಅವರಿವರಲ್ಲಿ ಆಶ್ರಯ ಪಡೆಯಲು ಹೋಗುವ ಬದಲು ಇಲ್ಲೇ, ಮಲಪ್ರಭೆಯ ಉದರದಲ್ಲೇ ಆಶ್ರಯ ಪಡೆಯುವುದು ಮೇಲು!" ಎಂದ ವಿಷ್ಣು.

ಅವಮಾನವಾದಂತಾಯಿತು ರಾಘೋಬನಿಗೆ. ಭಾಸ್ಕರರಾಯನಿಗೆ ಗೊತ್ತಾಗದಂತೆ ಆತ ವಿಷ್ಣುವನ್ನು ಕೆಕ್ಕರಿಸಿನೋಡುತ್ತ ಹಲ್ಲು ಕಡಿದ, ಮನಸ್ಸಿನಲ್ಲಿಯೆ ಅವನಿಗೆ ಶಾಪ ಹಾಕಿದ.

"ಹೊಳೆಯಲ್ಲಿ ಬಿದ್ದು ಸಾಯಲು ನಾವೇನು ಬಳೆ ಇಟ್ಟಿರುವೆವೇ?" ಎಂದು, ಆತ ಪೌರುಷ ಪ್ರದರ್ಶಿಸುತ್ತ ಹೇಳಿದ.

"ಅದೊಂದು ಉಳಿದಿದೆಯಷ್ಟೆ," ಎಂದವನೇ ವಿಷ್ಣು ಮುಖ ತಿರುಗಿಸಿ ಕುಳಿತುಕೊಂಡ.

"ನಾವು ನಾವೇ ಹೀಗೆ ಜಗಳಾಡುತ್ತ ಕುಳಿತರೆ ಹೇಗೆ ವಿಷ್ಣು? ಈ ಚರ್ಚೆಯಿಂದ ಏನೇನೂ ಉಪಯೋಗವಿಲ್ಲ. ಅದರ ಬದಲು, ಪ್ರತಿಯೊಬ್ಬರೂ ಪಾರಾಗಿ ಹೋಗಿ ಸುರಕ್ಷಿತವಾದ ಕಡೆಯಲ್ಲಿ ಮತ್ತೆ ಸೇರುವ ಉಪಾಯ ಹುಡುಕಬೇಕು."

"ನೇಪಾಳ ಅಂದರೆ ಅಲ್ಪ ಸ್ವಲ್ಪ ದೂರವೇ ಮಹಾರಾಜ್? ಏನಿಲ್ಲ ಅಂದರೂ ಏಳೆಂಟು ನೂರು ಗಾವುದವಾದರೂ ಆದೀತು. ಅಲ್ಲಿಗೆ ಹೋಗಿ ಮುಟ್ಟಲಿಕ್ಕೇ ನಾಲ್ಕೈದು ತಿಂಗಳು ಹಿಡಿದೀತು. ಅಷ್ಟರವರೆಗೂ ನಾನಾಸಾಹೇಬರು ಅಲ್ಲೇ ಇರುವರೆಂಬ ಭರವಸೆಯಾದರೂ ಏನಿದೆ?"

"ಭರವಸೆಯಿಲ್ಲ. ನಿಜ. ಅದೇನೇ ಇದ್ದರೂ ನಮಗೀಗ ಬೇರೆ ದಾರಿಯಾದರೂ ಏನಿದೆ? ಹೇಳು. ನಾನಾಸಾಹೇಬರ ಭೆಟ್ಟಿಯಾದರೆ ಅವರು ನಮಗೆ ಸೈನ್ಯವನ್ನೂ ಮದ್ದು ಗುಂಡುಗಳನ್ನೂ ಕೊಟ್ಟು ಸಹಾಯ ಮಾಡಬಹುದು. ನಾವು ಮತ್ತೆ ನರಗುಂದಕ್ಕೆ ಬಂದು ನಮ್ಮ ರಾಜ್ಯವನ್ನು ಸಂಪಾದಿಸಬಹುದು."

ಬಂಡಾಯ ಯಶಸ್ವಿಯಾಗಿ ಕೈಗೊಂಡು ಹಿಂದೂದೇಶದಲ್ಲಿ ಪುನಃ ಪೇಶವೆಗಳ ಅಧಿಕಾರವೇ ನೆಲೆಗೊಳ್ಳಬಹುದೆಂದು ಆಗಲೂ ಭಾಸ್ಕರರಾಯನಿಗೆ ಅನಿಸುತಿತ್ತು. ಪುಣ್ಯಪಟ್ಟಣದ ಗಾದಿಯ ಮೇಲೆ ನಾನಾಸಾಹೇಬ್ ವಿರಾಜಮಾನನಾದರೆ ನರಗುಂದದ ಗಾದಿ ತನಗೆ ಸುಲಭವಾಗಿ ಸಿಕ್ಕುವುದು. ಅದೊಂದು ಆಸೆಯಿಟ್ಟುಕೊಂಡೇ ನೇಪಾಳದವರೆಗೂ ಪ್ರವಾಸ ಮಾಡಲು ಭಾಸ್ಕರರಾಯ ಸಿದ್ಧವಾಗಿದ್ದ.

ಆದರೆ, ನೇಪಾಳಕ್ಕೆ ಹೋಗಲು ಹಾದಿಯಾವುದೆಂಬುದು ಮಾತ್ರ ಅವನಿಗೆ ಗೊತ್ತಿರಲಿಲ್ಲ!

"ನೇಪಾಳದ ಹಾದಿ ನಿಮ್ಮಲ್ಲಿ ಯಾರಿಗಾದರೂ ಗೊತ್ತೇ ?"

ಇಲ್ಲ, ಯಾರಿಗೂ ಗೊತ್ತಿರಲಿಲ್ಲ.

ಆಗ ಮಾತ್ರ ಭಾಸ್ಕರರಾಯನಿಗೆ ಪೀಕಲಾಟಕ್ಕಿಟ್ಟುಕೊಂಡಿತು. ನೇಪಾಳಕ್ಕೆ ತಲುಪುವುದು, ನಾನಾಸಾಹೇಬನನ್ನು ಕಾಣುವುದು, ಅವನ ಸಹಾಯದಿಂದ ನರಗುಂದವನ್ನು ಮರಳಿ ಪಡೆಯುವುದು – ಎಲ್ಲವೂ ಕೇವಲ ಕನಸಿನ ವಿಚಾರಗಳೇ ಆಗುವುವೊ ಏನೊ.

"ಹಾದಿಯೇ ತಿಳಿಯದೆಂದ ಮೇಲೆ ಅಲ್ಲಿಯತನಕ ಹೋಗುವದಾದರೂ ಹ್ಯಾಗೆ ಮಹಾರಾಜ್ ?" ಎಂದ ರಾಘೋಬ.

"ನಮಗೆ ತಿಳಿಯದೇ ಇದ್ದರೆ ಜನರಿಗೂ ತಿಳಿಯದೇ? ಕೇಳುತ್ತಾ ಹೋದರಾಯಿತು," ಎಂದನೊಬ್ಬ ಆಳು.

"ಹಾಗೆ ಅವರಿವರನ್ನು ಕೇಳುತ್ತ ಹೋಗುವದೂ ಅಪಾಯಕಾರಿಯೆ. ದೇಶದಲ್ಲೆಲ್ಲಾ ಬಂಡಾಯದ ಬೆಂಕಿಯೆದ್ದಿರುವ ಈ ಕಾಲದಲ್ಲಿ ನಾವು ನೇಪಾಳದ ಕಡೆ ಹೊರಟಿರುವುದು ತಿಳಿದರೆ ಸಾಕು, ಇಂಗ್ಲೀಷರು ನಮ್ಮನ್ನು ಹಿಡಿಯಬಹುದು."

ಹಾಗಾಗುವುದೂ ಸಾಧ್ಯವಿತ್ತು. ಆದರೂ ಅದೊಂದೇ ಒಂದು ಉಪಾಯ ವಷ್ಟೆ ಅವರಿಗುಳಿದಿದ್ದುದು. ಎಂಥ ಅಪಾಯವಿದ್ದರೂ ಅದೇ ಹಾದಿಯಲ್ಲಿಯೆ ಮುಂದುವರಿಯುವುದು ಅಪರಿಹಾರ್ಯವಾಗಿತ್ತು.

"ರಾಮರಾಯರ ಗತಿಯಾದರೂ ಏನಾಯಿತೊ? ಕುಟುಂಬ ಕರೆದು ಕೊಂಡೇ ಹೊರಟವರು ಅವರು. ನಮಗಿಂತ ಹೆಚ್ಚು ತೊಂದರೆಯಾಗಿರಲು ಸಾಕು," ಎಂದ ವಿಷ್ಣು.

"ಕುಟುಂಬವನ್ನು ಎಲ್ಲಾದರೂ ಸುರಕ್ಷಿತ ಸ್ಥಳದಲ್ಲಿರಿಸಿ ಅವರೂ ನೇಪಾಳಕ್ಕೇ ಹೊರಟಿರಬಹುದು," ಎಂದ ಭಾಸ್ಕರರಾಯ.

"ನಾವು ನೇಪಾಳಕ್ಕೆ ಹೋಗುವ ವಿಚಾರ ದಿವಾಣಜಿಯವರಿಗೂ ಗೊತ್ತಿತ್ತೇ ಮಹಾರಾಜ್ ?"

"ಇಲ್ಲ. ನಾವೇನು ಈ ವಿಚಾರ ಪ್ರಸ್ತಾಪಿಸಿರಲಿಲ್ಲ. ಆದರೂ, ಅವರೂ ಮುತ್ಸದ್ದಿಗಳು. ನಾವು ಅಲ್ಲಿಗೇ ಹೋಗುವುದು ಖಂಡಿತವೆಂದು ತರ್ಕಿಸಿ ಅವರೂ ಅತ್ತಲೇ ಹೊರಡಬಹುದು."

ಆ ಸಾಯಂಕಾಲ ಅವರೆಲ್ಲರೂ ತಾತ್ಕಾಲಿಕವಾಗಿ ಪರಸ್ಪರರನ್ನು ಬೀಳ್ಕೊಂಡು ಬೇರೆ ಬೇರೆ ಹಾದಿ ಹಿಡಿದು ಹೊರಟರು. ವಿಷ್ಣು ಕುಲಕರ್ಣಿಯೊಬ್ಬ ಕೊನೆಯ ಗಳಿಗೆಯವರೆಗೂ ಭಾಸ್ಕರರಾಯನನ್ನು ಬಿಟ್ಟು ಹೊರಡಲು ಸಿದ್ಧನಾಗಿರಲಿಲ್ಲ.

"ಮಹರಾಜ್, ನನ್ನನ್ನು ದೂರ ಮಾಡಬೇಡಿರಿ. ನಿಮ್ಮನ್ನು ಅಗಲಿದರೆ ನಾನು ಬದುಕಲಾರೆ." ಎಂದು ಆತ ಅಂಗಲಾಚಿ ಕೇಳಿಕೊಳ್ಳುತ್ತಿದ್ದ.

"ಬೇಡ ವಿಷ್ಣು. ಹಟ ಮಾಡಬೇಡ ತಮ್ಮಾ. ನಮ್ಮೆಲ್ಲರ ಕ್ಷೇಮಕ್ಕಾಗಿಯೆ ನಾನೊಬ್ಬನೇ ಹೊರಡುತ್ತಿದ್ದೇನೆ. ನನ್ನನ್ನು ಬಿಟ್ಟುಹೋಗಲು ನಿನಗಾಗಲಿ ಇನ್ನಿತರರಿಗಾಗಲಿ ಮನಸ್ಸಿಲ್ಲವೆಂಬುದು ನನಗೇನು ತಿಳಿಯದೇ? ಆದರೂ ಪ್ರಸಂಗಕ್ಕೆ ತಕ್ಕಂತೆ ವರ್ತಿಸುವದರಲ್ಲೇ ಜಾಣತನನಿದೆ."

ದೊರೆಯ ಚರಣಗಳನ್ನು ಮುಟ್ಟಿ ನಮಸ್ಕರಿಸಿ ವಿಷ್ಣು ಕಂಬನಿಗರೆಯುತ್ತ ಹೊರಟುಹೋದ. ರಾಘೋಬನೂ ತನ್ನ ಪಾದಗಳಿಗೆರಗುತ್ತಿದ್ದ ಹಾಗೇ ಭಾಸ್ಕರ ರಾಯ ಅವನನ್ನೆತ್ತಿ ಸ್ನೇಹದಿಂದ ಎದೆಗೊತ್ತಿಕೊಂಡ. ಆಗ ಮಾತ್ರ, ಒಂದು ಕ್ಷಣದ ಮಟ್ಟಿಗಾದರೂ ರಾಘೋಬನಿಗೆ ನಿಜವಾಗಿಯೂ ದುಃಖವಾಯಿತು. ತನ್ನನ್ನು ಪೂರ್ತಿಯಾಗಿ ನಂಬಿ ಪ್ರೀತಿಸುವ ಭಾಸ್ಕರರಾಯನಿಗೆ ತಾನು ಮನಸ್ಸಿನಲ್ಲಾದರೂ ಕೃತಘ್ನನಾಗಿದ್ದುದನ್ನು ನೆನೆದು ಅವನಿಗೆ ನಾಚಿಕೆಯೂ ಅನಿಸಿತು.

ಎಲ್ಲರೂ ಬೀಳ್ಕೊಂಡು ಹೊರಟುಹೋದ ಬಳಿಕ ತಾನೊಬ್ಬನೇ ಉಳಿದುದನ್ನು ಗಮನಿಸಿದಾಗ ಭಾಸ್ಕರರಾಯನ ಹೃದಯ ಹೊಯ್ದಾಡತೊಡಗಿತು. ಜನ ಶೂನ್ಯವಾದ ಆ ತಾಣದಲ್ಲಿ ಹಣೆಗೆ ಕೈಯಿಟ್ಟು ಕುಳಿತುಕೊಂಡ ಆತ ಚಿಕ್ಕ ಬಾಲಕನಂತೆ ರೋದಿಸತೊಡಗಿದ. ತಾಯಿ-ಪತ್ನಿಯರಂತೂ ಮರಣವನ್ನಪ್ಪಿಕೊಂಡು ಮಾಯವಾಗಿದ್ದರು. ಒಡಹುಟ್ಟಿದ ಸಹೋದರನೊಬ್ಬ ಇದ್ದೂ ಇಲ್ಲದಂತಾಗಿತ್ತು. ರಾಜ್ಯ ಹೋಗಿತ್ತು, ಅಧಿಕಾರ ಹೋಗಿತ್ತು, ಎಲ್ಲವೂ ಹೋಗಿತ್ತು. ಇದೀಗ. ಮಿತ್ರರೂ ಹೋಗಿಬಿಟ್ಟಿದ್ದರು.

"ಈ ವಿಶಾಲವಾದ ಪ್ರಪಂಚದಲ್ಲಿ ಇನ್ನು-ನಾನೊಬ್ಬನೆ....ನಾನೊಬ್ಬನೇ... ಏಕಾಂಗಿ....ಏಕಾಂಗಿ...."

ಅವನ ಅಸಹಾಯತೆಯೆಲ್ಲವೂ ಅಶ್ರುಗಳ ರೂಪದಿಂದ ಹೊರಚಿಮ್ಮತೊಡಗಿತು.

# ೨೦

ನರಗುಂದ ನಗರ ಇಂಗ್ಲೀಷರ ಕೈವಶವಾದುದಕ್ಕೆ ಎಷ್ಟೋ ದಿನಗಳು ಕಳೆದು ಹೋಗಿದ್ದುವು. ಬಂಡಾಯದ ಸದ್ದು ಎಂದೋ ಅಡಗಿಹೋಗಿದ್ದರೂ ಅದರ ಪ್ರತಿ ಕ್ರಿಯೆ ಮಾತ್ರ ಇನ್ನೂ ನಡೆದೇ ಇತ್ತು. ಬಂಡಾಯದಲ್ಲಿ ಭಾಗವಹಿಸಿದವರೂ, ದೊರೆಗೆ ಸಹಾಯ ಮಾಡಿದವರೂ ಆದ ಜನರನ್ನು ಬಂಧಿಸಿ ತಂದು, ಅಂಥವರ ವಿಚಾರಣೆಗೆಂದೇ ತಾತ್ಪೂರ್ತಿಕವಾಗಿ ನೇಮಕವಾದ ವಿಶೇಷ ನ್ಯಾಯಾಸ್ಥಾನದಲ್ಲಿ ನಿಲ್ಲಿಸಿ, ಬನ್ಯಾಬಾಪು, ಕೃಷ್ಣಾಜಿಯವರ ಹೇಳಿಕೆಗಳ ಆಧಾರದ ಮೇಲೆ ಆ ಆಪಾದಿತರನ್ನು ಗಲ್ಲಿಗೇರಿಸುವುದು ನಡೆದಿತ್ತು.

ನಗರದ ಹೊರಭಾಗದಲ್ಲಿ ಈ ಜನರನ್ನು ಗಲ್ಲಿಗೇರಿಸುವುದಕ್ಕೆಂದೇ ಹತ್ತಿಪ್ಪತ್ತು ನೇಣುಗಂಬಗಳನ್ನು ನಿಲ್ಲಿಸಲಾಗಿತ್ತು. ಎಂಟು ಹತ್ತು ಹೆಣಗಳಾದರೂ ಆ ಕಂಬ ಗಳ ಮೇಲೆ ಯಾವಾಗಲೂ ನೇತಾಡುವಂತೆ ದಕ್ಷತೆ ವಹಿಸಲಾಗಿತ್ತು. ಎರಡು ಮೂರು ದಿನಗಳವರೆಗೂ ಆ ಹೆಣಗಳನ್ನು ಅಲ್ಲಿಯೆ ಉದ್ದೇಶಪೂರ್ವಕವಾಗಿ ಇರಿಸ ಲಾಗುತ್ತಿತ್ತು.

"ಈ ಹೆಣಗಳನ್ನು ಕಂಡವರಾರೂ ಮತ್ತೊಮ್ಮೆ ಬಂಡಾಯದ ಉಪ ದ್ವ್ಯಾಪಕ್ಕೆ ಬೀಳಲಾರರು," ಎನ್ನುತ್ತಿದ್ದ ಬನ್ಯಾಬಾಪು.

ಆಂಗ್ಲ ಅಧಿಕಾರಿಗಳು ಅವನ ಮಾತಿಗೆ ತಲೆದೂಗುತ್ತಿದ್ದರಾದರೂ ಪ್ರಮುಖ ಅಪರಾಧಿಗಳಿನ್ನೂ ತಲೆ ತಪ್ಪಿಸಿಕೊಂಡೇ ಇದ್ದುದರಿಂದ, ಸಾಮಾನ್ಯ ಜನರನ್ನು ಗಲ್ಲಿಗೇರಿಸುವ ವಿಷಯದಲ್ಲಿ ಅವರಿಗೆ ಅಷ್ಟು ಉತ್ಸಾಹವೇನೂ ಇರಲಿಲ್ಲ.

"ಮೊದಲು ರಾಜಾಸಾಹೇಬ್ ಸಿಗಬೇಕು ಬಾಪೂಜೀ."

"ಹೌದು. ಹೌದು. ಅವರನ್ನೆ ಮೊದಲು ಹಿಡಿದು ತರಬೇಕು. ಅವರೊಡ ನೆಯೇ ಆ ರಾಘೋಬ, ರಾಮರಾವ್, ವಿಷ್ಣು, ಮುಂತಾದವರನ್ನೂ,"

"ಅವರನ್ನು ಹಿಡಿದುಕೊಟ್ಟವರಿಗೆ ಸಾವಿರಾರು ರೂಪಾಯಿ ಇನಾಮು ಸಾರಿ ದರೂ ಏನೂ ಉಪಯೋಗವಾಗಲಿಲ್ಲವಲ್ಲ ಬಾಪೂಜಿ? ಜನರು ಅವರ ಮೇಲೆ ಬಹಳ ಭಕ್ತಿ ಇಟ್ಟಿರುವರೋ ಹೇಗೆ?"

"ಎಲ್ಲಿಯ ಭಕ್ತಿ ಬಿಡಿರೀ ಸಾಹೇಬರೆ. ಇವರಿಗೆ ಕಂದಾಯ ಕೊಟ್ಟು ಕೊಟ್ಟು ಜನರೆಲ್ಲಾ ಬೇಸತ್ತು ಹೋಗಿದ್ದರು."

"ಹಾಗಿದ್ದರೆ...."

"ಗುಡ್ಡ ಬೆಟ್ಟ ಬಿಟ್ಟು ಜನ ವಸತಿ ಇದ್ದ ಕಡೆ ಅವರು ಮುಖ ತೋರಿಸು ತ್ತಿರಲಿಕ್ಕಿಲ್ಲ. ಅಂದಮೇಲೆ ಜನರು ಅವರನ್ನು ಹಿಡಿದುಕೊಡುವುದಾದರೂ ಹೇಗೆ?"

"ಜನರೆಲ್ಲ ಅವರನ್ನು ದ್ವೇಷಿಸುತ್ತಿರಬಹುದೆಂದು ನನಗೇನು ಅನಿಸುವುದಿಲ್ಲ."

ಆಂಗ್ಲ ಅಧಿಕಾರಿ ಹಾಗೆ ಭಾವಿಸಲು ಬಲವಾದ ಕಾರಣಗಳೂ ಇದ್ದುವು.

ಮೊನ್ನೆ ಮೊನ್ನೆ ಬೂದಿಹಾಳದಲ್ಲಿ ನಡೆದ ಘಟನೆಯನ್ನು ಆತ ಮರೆತಿರಲಿಲ್ಲ.

ಅದನ್ನು ಕುರಿತು ಬಾಪುವಿನೊಡನೆ ಮಾತನಾಡುತ್ತಾ ಅಧಿಕಾರಿಯೆಂದ:

"ನಿಮ್ಮ ರಾಜಾಸಾಹೇಬರ ಬಗೆಗೂ ಅವರ ಮನೆತನದ ಬಗೆಗೂ ಕೆಲವು ಜನರಲ್ಲಾದರೂ ನಿಷ್ಠೆಯಿರಲೇಬೇಕು. ಇಲ್ಲದಿದ್ದರೆ ಬೂದಿಹಾಳದಲ್ಲಿ ಹಾಗೆ ನಡೆಯುತ್ತಿತ್ತೇ?"

ರಾಜಮಾತೆ-ರಾಜಪತ್ನಿಯರು ಮಲಪ್ರಭೆಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿ ಕೊಂಡರೆಂಬ ವಾರ್ತೆಯನ್ನೂ ಅವರ ದೇಹಗಳನ್ನು ಬೂದಿಹಾಳ ಗ್ರಾಮದಲ್ಲಿ ದಹನ ಮಾಡಿದ ವಾರ್ತೆಯನ್ನೂ ಬನ್ಯಾಬಾಪು-ಕೃಷ್ಣಾಜಿ ಇಬ್ಬರೂ ಕೇಳಿದ್ದರು. ಆತ್ಮಹತ್ಯೆ ಮಾಡಿಕೊಂಡವರು ರಾಜಮಾತೆ-ರಾಜಪತ್ನಿಯರೇ ಆಗಿದ್ದರೆಂಬುದಕ್ಕೆ ಪ್ರಬಲವಾದ ಪುರಾವೆಗಳೇನೂ ಇರಲಿಲ್ಲ. ಅಂತೆಯೆ, ಬನ್ಯಾಬಾಪು-ಕೃಷ್ಣಾಜಿ ಯರು ಆ ವಾರ್ತೆಗಳನ್ನು ಪೂರ್ತಿಯಾಗಿ ನಂಬಿರಲಿಲ್ಲ. ಸನಿಯದಲ್ಲಿಯೆ ಇದ್ದ ಊರುಗಳಲ್ಲಿ ನರಗುಂದ ರಾಜಮನೆತನದ ಆಪ್ತೇಷ್ಟರೂ ಕೆಲವರಿದ್ದರು. ಯಮುನಾ ಬಾಯಿಯೂ ಸಾವಿತ್ರಿಬಾಯಿಯೂ ಅಂಥದೊಂದು ಕಡೆಯಲ್ಲಿ ಆಶ್ರಯ ಪಡೆದಿರ ಬಹುದೆಂದೇ ಬನ್ಯಾಬಾಪು ಭಾವಿಸಿಕೊಂಡಿದ್ದ.

ಅಂತೆಯೇ, ಆಂಗ್ಲ ಅಧಿಕಾರಿಯ ಮಾತನ್ನು ಅಲ್ಲಗಳೆಯುತ್ತಾ ಆತನೆಂದ:

"ಅವರು ರಾಜಮನೆತನದ ಸ್ತ್ರೀಯರೇ ಎನ್ನುವುದಕ್ಕೆ ಆಧಾರವೇನಾದರೂ ಸಿಕ್ಕಿದೆಯೇ ಸಾಹೇಬರೆ?"

"ಅವರಿಬ್ಬರನ್ನೂ ಇಲ್ಲಿ ನೋಡಿದ್ದ ನಮ್ಮ ಗೂಢಚಾರನೊಬ್ಬ ಅವರ ಶವ ಗಳನ್ನು ನೋಡಿದ್ದಾನೆ."

"ನಿಮ್ಮಿಂದ ಇನಾಮು ಸಂಪಾದಿಸಲು ಇಲ್ಲದ್ದೊಂದು ಹೇಳಿರಬೇಕು ಆತ. ಅವರು ಇಲ್ಲಿದ್ದಾಗ ಅಂತಃಪುರದಿಂದ ಹೆಚ್ಚಾಗಿ ಹೊರಗೇ ಬರುತ್ತಿರಲಿಲ್ಲ. ದೇವತಾ ದರ್ಶನಕ್ಕೆ ಹೋಗುವಾಗ ಕೂಡಾ ಪರದೆಯ ಮೇನೆಯಲ್ಲಿ ಹೋಗುತ್ತಿದ್ದರು. ಪ್ರತಿಷ್ಠೆ ಪಡೆದಿದ್ದ ನಮ್ಮಂಥ ಕೆಲವರನ್ನು ಬಿಟ್ಟರೆ ಬೇರೆ ಯಾರೂ ಅವರನ್ನು ಕಂಡಿಲ್ಲ."

"ಏನೋ ಅಪ್ಪ. ಅಂತೂ ಆತ ಹಾಗೆ ಹೇಳುವುದು ನಿಜ. ಜನಿವಾರ ಮುಟ್ಟಿ ದೇವರಾಣೆ ಮಾಡಿ ಅದು ಸತ್ಯ ಅನ್ನುತ್ತಾನೆ. ಅವನ ಮಾತು ಕೇಳಿಯೇ ಶವಸಂಸ್ಕಾರವನ್ನು ತಡೆಹಿಡಿಯಬೇಕೆಂದು ನಾವು ಹುಕುಂ ಕೊಟ್ಟಿದ್ದೆವು. ಆದರೆ ನಮ್ಮ ಹುಕುಂ ಅಲ್ಲಿಗೆ ಮುಟ್ಟುವುದರೊಳಗಾಗಿ ದಹನಕ್ರಿಯೆ ಮುಗಿದು ಹೋಗಿತ್ತು."

ಆ ದೇಹಗಳು ರಾಜಮಾತೆ-ರಾಜಪತ್ನಿಯವರದೇ ಆಗಿದ್ದರೂ ಇರಬಹುದೆಂದು ಆಗ ಬನ್ಯಾಬಾಪುವಿಗೆನಿಸಿತ್ತು. ಬೂದಿಹಾಳ ಗ್ರಾಮದಲ್ಲಿ ಹೊಸದಾಗಿ ನೇಮಕವಾಗಿದ್ದ ಸ್ಥಳೀಯ ಅಧಿಕಾರಿ ಬ್ರಾಹ್ಮಣನೇ ಆಗಿದ್ದುದನ್ನು ಜ್ಞಾಪಿಸಿಕೊಂಡು ಬಾಪುವೆಂದ:

"ಅವರು ರಾಜಮನೆತನದವರಾಗಿದ್ದರೂ ಇರಬಹುದು. ಆದರೆ, ತಾವು ತಿಳಿದಿರುವಂತೆ ಅಲ್ಲಿನ ಜನರು ರಾಜನಿಷ್ಠೆಯಿಂದಾಗಿ ಅವರ ಅಂತ್ಯಕ್ರಿಯೆ ಜರುಗಿಸಿದರೆಂದು ಹೇಳಲಾರೆ."

"ಮತ್ತೆ?"

"ಜೀವ ಹೋದ ಮೇಲೆ ರಾಜ-ಪ್ರಜೆ ಎನ್ನುವ ಭೇದವಾದರೂ ಎಲ್ಲಿ ಉಳಿಯುತ್ತೆ ಸಾಹೇಬರೆ? ನದಿಯಲ್ಲಿ ತೇಲುತ್ತ ಬಂದ ಶವಗಳನ್ನು ನೋಡಿ ಜನರಿಗೆ ಮರುಕ ಹುಟ್ಟಿ ಅಂತ್ಯಕ್ರಿಯೆ ನಡೆಸಿರಲು ಸಾಕು."

"ಹೋಗಲಿ ಬಿಡಿರಿ. ಆ ಹೆಣ್ಣುಮಕ್ಕಳೊಡನೆ ನಮಗಾದರೂ ಏನು ವೈರ? ನಮಗೆ ಮುಖ್ಯವಾಗಿ ಸಿಕ್ಕಬೇಕಾದವನು ಭಾಸ್ಕರರಾಯ. ಅವನ ಮಂತ್ರಿ, ಅವನ ಸೇನಾಪತಿ. ನೂರಾರು ಮಂದಿ ಗೂಢಚಾರರನ್ನು ಅಟ್ಟಿದರೂ ಇನ್ನೂ ಅವರು ಸಿಕ್ಕಲಿಲ್ಲ. ನೀವಾದರೂ ಒಮ್ಮೆ ಹೋಗಿ ಸುತ್ತಾಡಿಕೊಂಡು ಬರಬಾರದೇ?"

ತನ್ನಂಥವನು ಅಂಥ ಕೆಲಸಕ್ಕೆ ಹೊರಡುವುದೆಂದರೆ ಅವಮಾನಕಾರಕವೆಂದೇ ಬಾಪುವಿಗೆನ್ನಿಸಿತ್ತು. ತನ್ನನ್ನೂ ಒಬ್ಬ ಸಾಧಾರಣ ಗೂಢಚಾರನಂತೆಯೇ ನೋಡುತ್ತಿರುವರೇನೋ ಈ ಕೆಂಪು ಮೋರೆಯ ಜನರು!

ಬಾಪುವಿನ ಮುಖ ಕಪ್ಪಿಟ್ಟಿತು. ಉಗುಳು ನುಂಗಿ ಆತನೆಂದ:

"ಕ್ಷಮಿಸಿ ಸಾಹೇಬರೆ. ಅಂಥಾ ಕೆಲಸವೆಲ್ಲಾ ನನ್ನಿಂದಾಗದು. ಸರ್ ಫ್ರಾಂಕ್ ಸೂಟರ್‌ರಂಥ ಕುಶಲ ಅಧಿಕಾರಿಗಳು ಈ ಶೋಧನೆಯಲ್ಲಿ ತೊಡಗಿರುವಾಗ ನಮ್ಮಂಥವರ ಅಗತ್ಯವೂ ಇಲ್ಲ."

ಇದೊಂದು ಚಿಲ್ಲರೆ ಕೆಲಸವೆಂದು ಬನ್ಯಾಬಾಪು ಭಾವಿಸಿಕೊಂಡುದುದು ಆಂಗ್ಲ ಅಧಿಕಾರಿಗೂ ತಿಳಿಯಿತು. ದೇಶದ್ರೋಹದಂಥ ಹೇಸಿ ಕೆಲಸಕ್ಕೂ ಹೇಸಿ ಕೊಳ್ಳದಿರುವ ಇವನ ಬಡಿವಾರವೆ! ಎಂದು ಮನಸ್ಸಿನಲ್ಲಿಯೆ ಅಂದುಕೊಳ್ಳುತ್ತಾ ಆ ಅಧಿಕಾರಿಯೆಂದ:

"ಸರ್ ಪ್ರಾಂಕರ ಜತೆಗೆ ಇನ್ನೂ ಕೆಲವು ಗೂಢಚಾರರನ್ನು ,ಕೊಡೋಣ ವಂತೆ. ನೀವು ಇಲ್ಲೇ ಇರುವುದೂ ಒಳ್ಳೆಯದೇ. ಸೈನಿಕರು ಬಂಧಿಸಿರುವ ಜನರಲ್ಲಿ ಅಪರಾಧಿಗಳಾರೆಂಬುದನ್ನು ಕಂಡುಹಿಡಿಯುವುದಕ್ಕಂತೂ ನೀವು ಬೇಕೇಬೇಕಲ್ಲ?"

ನಿಜವಾಗಿ, ಆ ಕೆಲಸವೂ ಬನ್ಯಾಬಾಪು ಮತ್ತು ಕೃಷ್ಣಾಜಿಯವರಿಗೆ ಬೇಡ ವಾಗಿತ್ತು. ನ್ಯಾಯಾಲಯದಲ್ಲಿ, ನ್ಯಾಯಾಧೀಶನ ಪಕ್ಕದಲ್ಲಿ ಕುಳಿತು, ಅಪರಾಧಿ ಗಳನ್ನು ಬೆರಳೆತ್ತಿ ತೋರಿಸಿ ಅವರನ್ನು ನೇಣುಗಂಬಕ್ಕಾಗಲಿ ತೋಫಿನ ಬಾಯಿ ಗಾಗಲಿ ರವಾನಿಸುವುದು ಸಾಧಾರಣ ಸಂಗತಿಯೆ? ಇವರ ಸಾಕ್ಷಿಗಳಿಂದ ಪ್ರಾಣ ತ್ಯಜಿಸುತ್ತಿದ್ದ ಜನರು ಸ್ವಾಭಾವಿಕವಾಗಿಯೆ ಇವರಿಗೆ ಹಿಡಿಶಾಪ ಹಾಕುತ್ತಾ ಸಾಯುತ್ತಿದ್ದರು. ಸತ್ತವರ ಸಂಬಂಧಿಕರೂ ಸುಮ್ಮನಿರುತ್ತಿರಲಿಲ್ಲ. ನಗರದಲ್ಲೆಲ್ಲ ಈ ಇಬ್ಬರು ದ್ರೋಹಿಗಳ ಹೆಸರಲ್ಲಿ ಶಂಖವಾದ್ಯ ನಡೆಯುತ್ತಿತ್ತು. ಅವರು ಊರಿನ ಬೀದಿಗಳಲ್ಲಿ ಹಾದು ಹೊರಟಿದ್ದಾಗ ಅವರನ್ನು ಕಂಡೊಡನೆಯೆ ಗೃಹಿಣಿ ಯರು ಬಾಗಿಲು ಬಡಿಯುತ್ತಿದ್ದರು. ನಾಗರಿಕರು ಮುಖ ತಿರುವಿ ಹೊರಟು ಹೋಗುತ್ತಿದ್ದರು. ಅವರೊಡನೆ ಮಾತನಾಡುವುದಕ್ಕೆ ಕೂಡಾ ಯಾರೂ ನಿಂತು ಕೊಳ್ಳುತ್ತಿರಲಿಲ್ಲ.

ಬಂಡಾಯದಲ್ಲಿ ಭಾಗ ವಹಿಸಿದ್ದವರೆಲ್ಲರೂ ನಗರಕ್ಕೆ ಬಂದು ನೆಲಸಿ ತಮ್ಮ ತಮ್ಮ ವ್ಯವಸಾಯಗಳನ್ನು ಎಂದಿನಂತೆಯೆ ನಡಸಿಕೊಂಡು ಹೋಗಬಹುದೆಂದು ಆಂಗ್ಲರು ಡಂಗುರ ಹೊಯಿಸಿದ್ದರಾದರೂ ಇನ್ನೂ ಅರ್ಧದಷ್ಟು ಜನರು ಮರಳಿ ಬಂದಿರಲಿಲ್ಲ. ತಿಂಗಳೊಂದರ ಹಿಂದೆಯಷ್ಟೆ ಜನರಿಂದ ತುಂಬಿಕೊಂಡಿರುತ್ತಿದ್ದ ನಗರದ ಪೇಟೆಗಳು ಈಗ ಹಾಳುಸುರಿಯುತ್ತಿದ್ದುವು. ಬೀದಿಗಳಲ್ಲಿ ಹೆಚ್ಚಾಗಿ ಓಡಾಡುತ್ತಿದ್ದವರೆಂದರೆ ಸೈನಿಕರೆ. ಹೆಣ್ಣುಮಕ್ಕಳಂತೂ ಹೊರಗಡೆ ಅಡಿಯಿಡು ತ್ತಲೇ ಇರಲಿಲ್ಲ. ನಗರದ ಹೊರಗಿದ್ದ ಕೆರೆಗಳಿಂದ ನೀರು ಹೊತ್ತು ತರುವ ಕೆಲಸವೂ ಗಂಡಸರ ಪಾಲಿಗೇ ಬಂದಿತ್ತು. ನೋಡಿಕೊಳ್ಳುವ ರೈತರಿಲ್ಲದೆ ಸುತ್ತ ಲಿನ ಹೊಲಗಳು ಬಿಕೋ ಎನ್ನುತ್ತಿದ್ದುವು. ದೇವಾಲಯಗಳಲ್ಲಿ ಪೂಜಾದಿಗಳೂ ನಡೆಯುತ್ತಿರಲಿಲ್ಲ. ಕೆಲವೇ ದಿನಗಳ ಹಿಂದೆ ವೈಭವದಿಂದ ವಿಜೃಂಭಿಸುತ್ತಿದ್ದ

ವೆಂಕಟೇಶ್ವರ ದೇವಾಲಯಕ್ಕೂ ಕೂಡ ಈಗ ಶ್ಮಶಾನದ ಕಳೆ ಬಂದಿತ್ತು. ಬ್ರಾಹ್ಮಣರ ಬೀದಿಯಲ್ಲಿ ಅರ್ಧದಷ್ಟು ಮನೆಗಳು ಬರಿಯವಾಗಿದ್ದುವು. ರಾಘೋಬ, ರಾಮರಾಯ ಮೊದಲಾದವರ ಮನೆಯ ಜನರು ಅಲ್ಲಿಯೆ ಇದ್ದರಾದರೂ ಅವರಿಗೆ ಹೊರಬರುವ ಸ್ವಾತಂತ್ರ್ಯವುಳಿದಿರಲಿಲ್ಲ. ಅಲ್ಲಿ ಹಗಲಿರುಳೂ ಸೈನಿಕರ ಕಾವಲು ನಡೆದಿತ್ತು. ಆ ಬೀದಿಯಲ್ಲಿ ಹಾಯ್ದಾಡುವ ಜನರನ್ನೆಲ್ಲ ಚಿಕಿತ್ಸಕ ದೃಷ್ಟಿಯಿಂದ ವೀಕ್ಷಿಸಲು ಗೂಢಚಾರರ ಪಡೆಯೂ ಕಾದಿತ್ತು. ರಾಘೋಬ ರಾಮರಾಯ ಮೊದಲಾದವರು ಅಡವಿಯಲ್ಲಿ ಅಲೆದು ಅಲೆದು ಬೇಸರಗೊಂಡು ಮನೆಯವರನ್ನು ನೋಡುವ ತವಕದಿಂದ ಇಂದಿಲ್ಲ ನಾಳೆಯಾದರೂ ಬಂದೇಬರುವರೆಂದು ಅಧಿಕಾರಿಗಳು ಭಾವಿಸಿದ್ದರು.

ಆದರೆ, ಹತ್ತು ಹದಿನೈದು ದಿನ ಕಳೆದುಹೋದರೂ ಅವರಾರೂ ಇತ್ತ ಸುಳಿಯಲಿಲ್ಲ. ಇಲ್ಲಿ ಕಟ್ಟುಸಿಟ್ಟಿನ ಪಹರೆಯಿರುವ ಸಂಗತಿ ಅವರಿಗೂ ಗೊತ್ತಾಗಿದೆಯೊ ಏನೊ, ಅದಕ್ಕಾಗಿಯೆ ಅವರು ಇಲ್ಲಿಗೆ ಬಾರದೆ ಅಲ್ಲಿಯೆ ಎಲ್ಲಾದರೂ ಅವಿತುಕೊಂಡಿರಬಹುದೆಂದು ಅಧಿಕಾರಿಗಳು ಮಾತನಾಡಿಕೊಂಡರು.

ಅಡವಿಗಳಲ್ಲೂ ಗ್ರಾಮಾಂತರ ಸೀಮೆಯಲ್ಲೂ ಸುತ್ತುತ್ತ ಬಂಡುಗಾರರನ್ನು ಕಂಡುಹಿಡಿಯಲೆತ್ನಿಸುತ್ತಿದ್ದ ಸರ್ ಫ್ರಾಂಕ್ ಸೂಟರ್ ಅತ್ಯಂತ ದಕ್ಷನಾದ ಅಧಿಕಾರಿ. ದಿನಕ್ಕೊಂದು ಬಗೆಯ ವೇಷ ಧರಿಸಿ ಯಾರಿಗೂ ಸಂಶಯ ಬಾರದಂತೆ ಪ್ರವಾಸ ಮಾಡುವುದರಲ್ಲಿ ಅವನೂ ಅವನ ಜತೆಗಿದ್ದ ಇತರರೂ ಅತ್ಯಂತ ನುರಿತವರಾಗಿದ್ದರು. ಸೂಟರ್ ಸಾಹೇಬ ಹಿಂದೂಸ್ತಾನಿ ಭಾಷೆಯಲ್ಲಿ ಮಾತನಾಡುವುದನ್ನೂ ಕಲಿತುಕೊಂಡಿದ್ದ. ಮರಾಠಿ ಭಾಷೆಯೂ ಅವನಿಗೆ ಅಲ್ಪ ಸ್ವಲ್ಪ ತಿಳಿಯುತ್ತಿತ್ತು. ಆದರೆ ಈ ಭಾಗದ ಜನರ ಮಾತೃಭಾಷೆಯಾದ ಕನ್ನಡ ಮಾತ್ರ ಅವನ ಪಾಲಿಗೆ ಗ್ರೀಕ್ ಭಾಷೆಯೆ ಆಗಿತ್ತು. ಕನ್ನಡ, ಹಿಂದೂಸ್ತಾನಿ ಎರಡನ್ನೂ ಚೆನ್ನಾಗಿ ಆಡಬಲ್ಲ ದುಭಾಷಿಗಳನ್ನು ಜತೆಯಲ್ಲಿ ಕರೆದುಕೊಂಡೇ ಆತ ಸಂಚಾರ ಹೊರಟಿದ್ದ.

ಅದೊಂದು ದಿನ ಆತ ಬೈರಾಗಿಯ ವೇಷ ಧರಿಸಿ ತನ್ನ ಹಿಂಬಾಲಕರಿಗೆ ಶಿಷ್ಯರ ವೇಷ ತೊಡಿಸಿ ಒಂದು ಹಳ್ಳಿಯ ಧರ್ಮಶಾಲೆಯಲ್ಲಿ ವಸತಿ ಮಾಡಿದ್ದಾಗ ಅದೇ ಸಂಜೆ ಆ ಹಳ್ಳಿಗೆ ಬಂದಿಳಿದಿದ್ದ ರಾಘೋಬ ಆಕಸ್ಮಾತ್ತಾಗಿ ಅವರ ಕೈಗೆ ಸಿಕ್ಕಿಬಿದ್ದ.

ತಾನು ಒಂದು ಮಾತನ್ನೂ ಆಡದೆ ಬಾಯಿ ಹೊಲಿದುಕೊಂಡು ಸುಮ್ಮನಿದ್ದು ಬಿಟ್ಟಿದ್ದರೆ ಅವರ ಕೈಗೆ ಸಿಗುವ ಪ್ರಸಂಗ ಬರುತ್ತಿರಲಿಲ್ಲವೆಂದೇ ಆಮೇಲೆ ಅನ್ನಿಸಿತು ರಾಘೋಬನಿಗೆ.

ಹರಕು ಧೋತರವೊಂದನ್ನುಟ್ಟುಕೊಂಡು ಕಂಬಳಿಯ ಮೇಲೆ ಒರಗಿಕೊಂಡಿದ್ದ, ಸಪ್ಪೆ ಮುಖದ ರಾಘೋಬನನ್ನು ನೋಡುತ್ತಲೂ ಸೂಟರ್ ಸಾಹೇಬನಿಗೆ ಅನುಮಾನವುಂಟಾಯಿತು. ಅವರಿಗಿಂತ ಮೊದಲೇ ಬಂದು ಧರ್ಮಶಾಲೆಯಲ್ಲಿಳಿದುಕೊಂಡಿದ್ದ ರಾಘೋಬ ಹೊಸದಾಗಿ ಬಂದ ಈ 'ಬೈರಾಗಿಗಳ ತಂಡ'ದ ಕಡೆಗೆ ಗಮನವನ್ನೇ ಹೊರಳಿಸದೆ ತನ್ನ ಪಾಡಿಗೆ ತಾನು ಮಲಗಿಕೊಂಡುಬಿಟ್ಟಿದ್ದರೆ ಇವರೂ ಅವನತ್ತ ಲಕ್ಷ್ಯ ಹೊರಳಿಸುತ್ತಿರಲಿಲ್ಲ.

ಆದರೆ, ಸ್ವಭಾವತಃ ಪುಕ್ಕನಾಗಿದ್ದ ರಾಘೋಬ, ಜತೆಗಾರರನ್ನು ಬಿಟ್ಟು ಏಕಾಂಗಿಯಾಗಿ ಸಂಚರಿಸತೊಡಗಿದಂದಿನಿಂದ ಮತ್ತಷ್ಟೂ ಅಂಜುಗುಳಿಯಾಗಿದ್ದ. ಅಪರಿಚಿತ ಮುಖಗಳನ್ನು ಕಂಡಾಗಲೆಲ್ಲಾ ಅವರು ಗೂಢಚಾರರೇ ಆಗಿರಬೇಕೆಂದು ಭಾವಿಸಿ ಆತ ಅಧೀರನಾಗುತ್ತಿದ್ದ. ಅವರೊಡನೆ ಮಾತನಾಡುವ ಪ್ರಸಂಗ ಬರುತ್ತಲೂ ಅವನ ಮೈಯೆಲ್ಲ ಬೆವರುತ್ತಿತ್ತು, ಸ್ವರ ಕಂಪಿಸುತ್ತಿತ್ತು, ಮುಖ ಬಿಳಿಚಿಕೊಳ್ಳುತ್ತಿತ್ತು. ಅಲ್ಲಿ ಹೆಚ್ಚು ಸಮಯ ನಿಲ್ಲದೆ ಆತ ಗಡಿಬಿಡಿಯಿಂದ ಹೊರಟುಬಿಡುತ್ತಿದ್ದ.

ಆದರೆ, ಈಗ, ಮಲಗಿದಲ್ಲಿಂದೆದ್ದು ಅವಸರದಿಂದ ಓಡಿಹೋಗುವಂತೆಯೂ ಇರಲಿಲ್ಲ. ಹಾಗೆ ಅವನು ಓಡಿದುದೇ ಆದರೆ ಅವರು ಅವನನ್ನು ಖಂಡಿತವಾಗಿಯೂ ಹಿಡಿದುಕೊಳ್ಳುತ್ತಿದ್ದರು. ಎಂತಲೇ, ರಾಘೋಬ ಗೋಡೆಯ ಕಡೆ ಮಗ್ಗಲು ಮಾಡಿ ಉಸಿರು ಬಿಗಿಹಿಡಿದು ಬಿದ್ದುಕೊಂಡ.

ಸೂಟರ್ ಸಾಹೇಬನೂ ಅವನ ಪರಿವಾರದವರೂ ಧರ್ಮಶಾಲೆಯಲ್ಲಿ ಬಿಡಾರ ಹೂಡಿದ ಬಳಿಕ ಅವರಲ್ಲಿ ಕೆಲವರು ರಾತ್ರಿಯೂಟದ ಸಿದ್ಧತೆಗಾರಂಭಿಸಿದರು. ಇನ್ನಿತರರು ಹೊರಗೆ ಹೋಗಿ ಕೊಳದಲ್ಲಿ ಮುಖ ತೊಳೆದುಕೊಂಡು ಬಂದು ಧೂಮ್ರಪಾನ ಮಾಡುತ್ತಾ ಹರಟೆಗಾರಂಭಿಸಿದರು. 'ಶಿಷ್ಯ'ನೊಬ್ಬ ಸಿದ್ಧಗೊಳಿಸಿ ತಂದಿರಿಸಿದ ಗುಡುಗುಡಿಯಿಂದ ಹೊಗೆಯೆಳೆಯುತ್ತಾ 'ಬೈರಾಗಿ ಸಾಹೇಬ' ಅತ್ತಿತ್ತ ದೃಷ್ಟಿ ತಿರುಗಿಸಿದಾಗ ದಕ್ಷಿಣದ ಗೋಡೆಗೆ ಹೊಂದಿಕೊಂಡು ಕೊರಡಿನಂತೆ ಬಿದ್ದುಕೊಂಡಿದ್ದ ರಾಘೋಬನ ದೇಹ ಅವನ ಗಮನ ಸೆಳೆಯಿತು.

ಗೋಡೆಯತ್ತ ಮುಖ ಮಾಡಿ ಮಲಗಿಕೊಂಡಿದ್ದಾಗಲೂ ರಾಘೋಬ ನಿರ್ಭೀತನಾಗಿರಲಿಲ್ಲ. ಅವನ ಕಾಲುಗಳೂ ಕೈಗಳೂ ಭುಜಗಳೂ ವಿಚಿತ್ರ ರೀತಿಯಲ್ಲಿ ಚಲನವಲನ ಮಾಡುತ್ತಲೇ ಇದ್ದುವು. ಆ ಆಸಾಮಿಗೆ ನಿದ್ದೆ ಬಂದಿರಲಿಲ್ಲವೆಂಬುದೂ ಆತ ಯಾವುದೋ ಕಾರಣದಿಂದಾಗಿ ಬೇಕಂತಲೇ ತಮಗೆ ಮುಖ ತೋರಿಸದೆ ಹೊರಳಿ ಮಲಗಿರುವನೆಂಬುದೂ, ಅವನ ವಿಲಕ್ಷಣ ಚಲನವಲನಗಳಿಗೆ ಅವನ ಮಾನಸಿಕ ಸ್ಥಿತಿಯೇ ಕಾರಣವೆಂಬುದೂ ಚಾಣಾಕ್ಷನಾದ ಸಾಹೇಬನಿಗೆ ತಿಳಿಯಲು ತಡವಾಗಲಿಲ್ಲ.

ಹತ್ತಿರವೇ ಇದ್ದ ತನ್ನ ಕೈಕೆಳಗಿನ ಅಧಿಕಾರಿಯೊಬ್ಬನನ್ನು ಕುರಿತು ಪಿಸು ದನಿಯಲ್ಲಿ ಹೇಳಿದ ಸಾಹೇಬ :

"ಅಲ್ಲೊಂದು ಇಸಮು ಬಿದ್ದಿದೆ ನೋಡಿದೆಯಾ ?"

ಚಿಕ್ಕ ಅಧಿಕಾರಿಯಿನ್ನೂ ಅವನನ್ನು ನೋಡಿರಲಿಲ್ಲ.

"ನೋಡು. ಅವನನ್ನು ಮಾತಾಡಿಸು. ಅವನಾರೆಂದು ಕೇಳು."

"ಸಾಹೇಬನ ಅಪ್ಪಣೆಯಾಗುತ್ತಲೂ ಚಿಕ್ಕ ಅಧಿಕಾರಿ ಎದ್ದು ಹೋಗಿ ರಾಘೋಬನ ಹತ್ತಿರ ಕುಳಿತುಕೊಂಡು,

"ಅಹೋ ಮಹಾರಾಜ್, ಮಹಾರಾಜ್," ಎಂದು ಕೂಗಿ ಕರೆದ.

ಮಲಗಿದ್ದಲ್ಲಿಯೇ ರಾಘೋಬನ ಶರೀರ, ಚಳಿಜ್ವರದ ಬಾಧೆಗೊಳಗಾದಂತೆ ನಡುಗತೊಡಗಿತು. ನಾಲಗೆಯೊಣಗಿ ಹೋಯಿತು. ಕಣ್ಣೆದುರು ಚಿಕ್ಕೆಗಳು ಕಾಣಿಸಿದಂತಾಯಿತು. ಆತ ಹೊರಳಲೂ ಇಲ್ಲ, ಮಾತನಾಡಲೂ ಇಲ್ಲ.

"ಅಹೋ ಪಂತಜೀ, ಏಳಿರಿ, ಏಳಿರಿ. ಊಟ ಮಾಡೀರಂತೆ!" ಎಂದು ಅಧಿಕಾರಿ ಮತ್ತೆ ಹೇಳಿದ, ಮರಾಠಿಯಲ್ಲಿ. ಆಗಲೂ ರಾಘೋಬ ಏಳದಿರಲು ಅವನ ಭುಜ ಹಿಡಿದು ಬಲವಂತದಿಂದಲೇ ತನ್ನತ್ತ ತಿರುಗಿಸಿದ ಅಧಿಕಾರಿ.

"ನನ್ನನ್ನು ಯಾಕೆ ಪೀಡಿಸ್ತೀರಿ ಮಹಾರಾಯರೆ? ನನ್ನ ಮೈಯಲ್ಲಿ ಸೆಟ್ಟಗಿಲ್ಲ. ನಾಲ್ಕು ದಿನದಿಂದ ಥಂಡೀಜ್ವರ ಕಾಡುತ್ತಾ ಇದೆ," ಎಂದು ಹೇಳುತ್ತಾ ರಾಘೋಬ ಒಂದು ಬಾರಿ ಕೆಮ್ಮಿದ. ಅವನ ಶರೀರವಂತೂ ಒಂದೇಸಮನೆ ನಡುಗುತ್ತಲೇ ಇತ್ತು.

"ನಮ್ಮ ಗುರುಮಹಾರಾಜರ ಹತ್ತಿರ ಎಲ್ಲಾ ರೋಗಗಳಿಗೂ ಮೂಲಿಕೆಗಳಿವೆ. ನಿಮ್ಮ ಜ್ವರವನ್ನೂ ಅವರು ಗುಣಪಡಿಸುತ್ತಾರೆ. ಬನ್ನಿ ಅವರ ಹತ್ತಿರ," ಎಂದ ಅಧಿಕಾರಿ.

"ಆರ್ವ್‌ಜಿ, ಆರ್, ಹಂ ದವಾ ಕರೇಂಗೇ!" ಎಂದು ಸಾಹೇಬನೂ ಕೂಗಿ ಹೇಳಿದ.

ಆ ಧ್ವನಿಯಲ್ಲಿ ಮಾರ್ದವತೆಯಿತ್ತು, ವಿನಯವೂ ಇತ್ತು.

"ಇವರು ಗೂಢಚಾರರೇ ಇರಬೇಕೆಂದು ನಾನಾದರೂ ಯಾಕೆ ತಿಳಿಯ ಬೇಕು? ಬೈರಾಗಿಯಂತೂ ವೇಷಧಾರಿ ಗೂಢಚಾರನಂತೆ ಕಾಣುವುದಿಲ್ಲ-ಉತ್ತರ ಹಿಂದೂಸ್ಥಾನದಿಂದ ಬಂದ ಗೋಸಾವಿಯಂತೆಯೆ ಆತ ಕಾಣುತ್ತಾನೆ. ಪರೀಕ್ಷೆ ಮಾಡದೆ ವ್ಯರ್ಥವಾಗಿ ಅಂಜುವುದು ಮೂಢತನ!" ಎಂದು ಮನಸ್ಸಿನಲ್ಲಿಯೆ ಅಂದುಕೊಂಡು ರಾಘೋಬ ಬಹಿರಂಗವಾಗಿ ಹೇಳಿದ:

"ಎದ್ದು ಬರಲು ಕೂಡಾ ತ್ರಾಣವಿಲ್ಲ ನನ್ನ ಮೈಯಲ್ಲಿ. ಸಾಧೂ ಮಹಾ ರಾಜರು ಕ್ಷಮಿಸಬೇಕು."

"ಒಳ್ಳೆಯದು. ಒಳ್ಳೆಯದು. ಅಲ್ಲೇ ಇರಿ. ನಾನೇ ಬಂದು ನಿಮ್ಮನ್ನು ಪರೀಕ್ಷಿಸಿ ಔಷಧ ಕೊಡುವೆ," ಎಂದ ಸಾಹೇಬ.

"ಛೆ. ಛೆ. ತಮಗೇಕೆ ತೊಂದರೆ? ಬೇಡ ಬೇಡ. ಔಷಧ ಕಳಿಸಿದರೆ ಸಾಕು."

"ಎಲ್ಲಿಂದ ಬಂದಿರಿ ಪಂತಜಿ?" ಎಂದು ಚಿಕ್ಕ ಅಧಿಕಾರಿ ಕೇಳಿದ.

"ನಾನೇ? ನಾನು ಕೊಂಕಣದಿಂದ ಬಂದೆ."

"ಎಲ್ಲಿಗೆ ಹೊರಟಿದ್ದಿರಿ?"

"ರಾಮದುರ್ಗಕ್ಕೆ ಹೋಗಿ ಅಲ್ಲಿಯ ರಾಜಾಸಾಹೇಬರ ಹತ್ತಿರ ಏನಾದರೂ ಕೆಲಸ ಸಿಕ್ಕಿದರೆ ಹಿಡಿಯಬೇಕೆಂದು ಹೊರಟಿದ್ದೆ. ಹಾದಿಯಲ್ಲಿ ಕಳ್ಳರು ಗಂಟು ಬಿದ್ದು ನನ್ನ ಹತ್ತಿರ ಇದ್ದ ಹಣವನ್ನೂ ಸಾಮಾನುಗಳನ್ನೂ ಕಸಿದುಕೊಂಡು ಹೋದರು. ಹೀಗಾಗಿ ಇದೊಂದು ಧೋತರ, ಒಂದು ಕಂಬಳಿ ಮಾತ್ರ ನನ್ನ ಬಳಿ ಉಳಿದವು. ನನ್ನ ದೈವವನ್ನು ಹಳಿದುಕೊಳ್ಳುತ್ತಾ ಮತ್ತೆ ಹಾದಿ ನಡೆಯುತ್ತಿ ದ್ದಂತೆಯೇ ಈ ಚಳಿಜ್ವರ ಬೇರೆ ಹಿಡಿದುಕೊಂಡಿತು-ಏನು ಮಾಡುವದು ಹೇಳಿರಿ ಎಲ್ಲಾ ಭಗವಂತನ ಆಟ...." ಎನ್ನುತ್ತಾ ರಾಘೋಬ ಮತ್ತೆ ಮುಖ ತಿರುಗಿ ಮಲಗಿಕೊಳ್ಳಲು ಯತ್ನಿಸಿದ.

ಆದರೆ ಆ ಅಧಿಕಾರಿ ಅವನನ್ನು ಬಿಡಲಿಲ್ಲ.

"ಏಳಿರಿ ಪಂತಜಿ, ಬೈರಾಗಿಗಳಾದ ನಮಗೆ ತಮ್ಮಂಥ ಪ್ರವಾಸಿಗ ಸೇವೆಯೇ ಕರ್ತವ್ಯ. ಎದ್ದು ಕೈಕಾಲು ಮೋರೆ ತೊಳೆದುಕೊಳ್ಳಿರಿ. ಅಷ್ಟರ

ಅನ್ನವೂ ತಯಾರಾಗುತ್ತದೆ. ಸ್ವಲ್ಪ ಉಂಡು, ನಮ್ಮ ಗುರುಮಹಾರಾಜರು ಕೊಡುವ ಮದ್ದು ಸೇವಿಸಿ ಮಲಗಿಕೊಳ್ಳುವಿರಂತೆ. ಮುಂಜಾನೆಯೊಳಗಾಗಿ ನಿಮ್ಮ ಜ್ವರ ಇದ್ದರೆ ಹೇಳಿರಿ."

"ಊಟದ ಆಮಂತ್ರಣ ದೊರೆಯುತ್ತಲೂ ರಾಘೋಬನ ಬಾಯಿಯಲ್ಲಿ ಮತ್ತೆ ನೀರೊಡೆಯಿತು. ಬೆಳಗಿನಿಂದ ಅವನಿಗೆ ಆಹಾರವೂ ಸಿಕ್ಕಿರಲಿಲ್ಲ. ಇತ್ತೀಚೆಗೆ ಎಂಟು ಹತ್ತು ದಿನಗಳಿಂದ ಅರೆಹೊಟ್ಟೆಯ ಮೇಲೆಯೇ ಕಾಲ ಕಳೆದುದಾಗಿತ್ತು. ಈ ದಿನವೂ ಉಪವಾಸವೇ ಗತಿಯೆಂದು ಬಿದ್ದುಕೊಂಡಿದ್ದಾಗ ಊಟದ ಆಮಂತ್ರಣ....!

ಧರ್ಮಶಾಲೆಯ ಕೆಳಗಿನ ಭಾಗದಲ್ಲಿದ್ದ ಕಲ್ಲಿನೊಲೆಗಳ ಮೇಲೆ ಅಕ್ಕಿ ಬೇಳೆಗಳು ಬೇಯುತ್ತಿದ್ದುವು. ಕುದಿಯುತ್ತಿದ್ದ ಅನ್ನದಿಂದೆದ್ದ ಮಧುರಕಂಪ ಧರ್ಮಶಾಲೆಯನ್ನೆಲ್ಲಾ ಆವರಿಸಿಕೊಂಡಿತ್ತು. ಬೆಳಗಾವಿ ಭಾಗದಿಂದ ತಂದ ಸಣ್ಣಕ್ಕಿಯೇ ಇರಬೇಕು!

ರಾಘೋಬನ ಬಾಯಿಯಲ್ಲೆಲ್ಲ ನೀರು ತುಂಬಿತು. ಅನ್ನದ ತುತ್ತು ಬಾಯಿಯಲ್ಲಿ ಸೇರುವವರೆಗೂ ಹಾಗೆಯೇ ಒಸರುವ ನೀರು.

ಊಟದ ವಿಚಾರವೊಂದನ್ನುಳಿದು ಇನ್ನೆಲ್ಲವೂ ಮರೆತುಹೋಯಿತು. ಚಳಿಜ್ವರದ ನಾಟಕವನ್ನು ಮರೆತು ಆತ ಥಟ್ಟನೆದ್ದು, ಆರೋಗ್ಯವಾಗಿರುವವರ ಹಾಗೆಯೆ ನಡೆದು ಹೋಗಿ ಬಾಯಲ್ಲಿನ ನೀರನ್ನುಗುಳಿ ಮುಖ ತೊಳೆದುಕೊಂಡು ಬಂದ. ಮತ್ತೆ ಕ್ಷಣಮಾತ್ರದಲ್ಲಿಯೆ ಅವನ ಬಾಯಲ್ಲಿ ನೀರು ತುಂಬಿತು.

ಸೂಟರ್ ಸಾಹೇಬನಿಗೆ ಸಂಶಯವೇ ಉಳಿಯಲಿಲ್ಲ.

"ಏನು ಪಂತಜಿ, ಇಷ್ಟು ಬೇಗ ನಿಮ್ಮ ಕಾಹಿಲೆ ಹೋಯಿತೇ? ಎಂಥ ಆಶ್ಚರ್ಯ! ನಾನಿನ್ನೂ ಔಷಧವನ್ನೂ ಕೊಟ್ಟಿಲ್ಲ – ಈಗಲೇ...."

ರಾಘೋಬನಿಗೆ ಆಗ ತನ್ನ 'ಜ್ವರ'ದ ನೆನಪಾಯಿತು. ಎಲಾ! ಎಂಥ ಅವಿವೇಕ!

ತನ್ನನ್ನು ತಾನೇ ಹಳಿದುಕೊಳ್ಳುತ್ತ ಆತ ಮತ್ತೆ ಎದ್ದು ಹೋಗಿ ನೀರನ್ನು ಉಗುಳಿ ಬಂದ.

"ಮತ್ತೆಂಥ ರೋಗ ಪಂತಜೀ? ನೀವು ನೀರೇ ಕುಡಿಯದಿದ್ದರೂ ಇಷ್ಟು ನೀರು ಎಲ್ಲಿಂದ ಬರುತ್ತಿದೆ?"

"ಬಾಯಿ ಕೆಟ್ಟುಹೋಗಿದೆ ಸಾಧೂಮಹಾರಾಜ್. ಉಗುಳು ಬರುತ್ತಿದೆ."

"ಓ! ಹೀಗೋ? ಇದ್ದರೂ ಇರಬಹುದು. ಇರಲಿ. ನಾನು ಅದಕ್ಕೂ ಔಷಧ ಕೊಡುವೆ – ಹೂಂ. ತಮ್ಮ ಹೆಸರು ಕೇಳುವುದನ್ನೇ ಮರೆತಿದ್ದೆ. ಏನು ತಮ್ಮ ನಾಮಧೇಯ?"

"ವಿಠ್ಠಲಪಂತ."

"ರಾಮದುರ್ಗಕ್ಕೆ ಹೋಗುವವರಲ್ಲವೆ? ಅಲ್ಲಿ ಯಾರಾದರೂ ಪರಿಚಯದವರಿದಾರೆಯೆ?"

"ಇಲ್ಲ. ನಾನೇ ಹೋಗಿ ಪರಿಚಯ ಮಾಡಿಕೊಳ್ಳಬೇಕು."

"ನೀವು ಇಂಥ ಸ್ಥಿತಿಯಲ್ಲಿ ಹೋದರೆ ನಿಮ್ಮನ್ನು ಯಾರೂ ಮಾತಾಡಿಸಲಿಕ್ಕಿಲ್ಲ ಅಲ್ಲವೆ?"

"ಅದೂ ನಿಜ."

"ಇರಲಿರಲಿ. ನೀವು ಚಿಂತಿಸಬೇಡಿರಿ. ನಾವೂ ರಾಮದುರ್ಗ ನೋಡಬೇಕಾಗಿದೆ. ನಮ್ಮ ಜತೆಗೇ ಬಂದೀರಂತೆ. ಹಾದಿಯಲ್ಲಿ ನಾವು ನಿಮಗೆ ಬಟ್ಟೆ ಬರೆಗಳನ್ನೂ ಕೊಡಿಸುವೆವು."

ಆಗ ಮಾತ್ರ ರಾಘೋಬನಿಗೆ ಮತ್ತೆ ಮೈ ನಡುಕವೆದ್ದಿತು. ಬೈರಾಗಿಗಳು ಇಷ್ಟರಮಟ್ಟಿಗೂ ಪರೋಪಕಾರಿಗಳಾಗಿರಲು ಸಾಧ್ಯವೆ? ತನ್ನಲ್ಲಿ ಇವರು ಆಸಕ್ತಿಯನ್ನೇಕೆ ವಹಿಸಬೇಕು? ಇವರು ನಿಜವಾದ ಸಾಧುಗಳು ಅಹುದೋ ಅಲ್ಲವೊ?

ಊಟ ಮುಗಿಯುವವರೆಗೂ 'ಬೈರಾಗಿಗಳು' ವಿಶೇಷ ಮಾತನಾಡಲಿಲ್ಲ. ಅನ್ನಕ್ಕಾಗಿ ಜೊಲ್ಲು ಸುರಿಸುತ್ತಿದ್ದ ಆ ಬಡಪಾಯಿಯ ಬಗೆಗೆ ಸೂಟರ್ ಸಾಹೇಬನಿಗೂ ಕನಿಕರವೂ ಉತ್ಪನ್ನವಾಗಿತ್ತು.

ಹೊಟ್ಟೆ ತುಂಬುವವರೆಗೂ ಊಟ ಮಾಡಿ ರಾಘೋಬ ತೃಪ್ತಿಯಿಂದ ತೇಗುತ್ತ ಮೇಲಕ್ಕೇಳುತ್ತಲೂ ಸಾಹೇಬ ನಗುನಗುತ್ತಾ ವಿಚಾರಿಸಿದ.

"ನಾವು ಬೈರಾಗಿಗಳು ಯಾವ ಜಾತಿಯವರೆನ್ನುವದನ್ನೂ ತಿಳಿದುಕೊಳ್ಳದೆ ಊಟ ಮಾಡಿದಿರಿ. ನಿಮ್ಮ ಜಾತಿಯೇನೂ ಕೆಟ್ಟುಹೋಗಲಿಲ್ಲವಷ್ಟೆ?"

"ಬೈರಾಗಿಗಳಿಗೆ ಜಾತಿಯೇ ಇರುವುದಿಲ್ಲವಲ್ಲ ಸಾಧೂಮಹಾರಾಜ್?" ಎಂದು ರಾಘೋಬನೂ ನಗುತ್ತಾ ಹೇಳಿದ.

ಎಲ್ಲರ ಊಟವೂ ಮುಗಿದು ಮತ್ತೆ ಗುಡುಗುಡಿಗಳ ಗದ್ದಲಕ್ಕಾರಂಭವಾದ ಮೇಲೆ ಸಾಹೇಬ ರಾಘೋಬನನ್ನು ಕೇಳಿದ:

"ಮಿಸ್ಟರ್ ವಿಠಲ್‌ಪಂತ್, ಈಗ ಹೇಳಿರಿ. ನಿಮ್ಮ ನಿಜವಾದ ನಾಮ ಧೇಯವೇನು?"

ರಾಘೋಬನ 'ಚಳಿಜ್ವರ' ಮತ್ತೆ ಮರುಕಳಿಸಿತು. ಉಂಡ ಅನ್ನವೆಲ್ಲಾ ಹೊಟ್ಟೆಯಿಂದ ಹಾರಿ ಬೀಳುವಂತಾಯಿತು.

"ತಾ....ತಾವು....ಅ....ಅನ್ನುವುದಾದರೂ ಏನು ಸಾಧೂಮಹಾರಾಜ್?" ಆತ ತಬ್ಬಿಬ್ಬಾಗಿ ಕೇಳಿದ.

"ನಾನು ಸಾಧೂಮಹಾರಾಜನೂ ಅಲ್ಲ. ನೀವು ವಿಠಲಪಂತರೂ ಅಲ್ಲ. ನಿಮ್ಮ ಹೆಸರೇನೆಂಬುದನ್ನು ನೀವೇ ಹೇಳಿದರೊಳ್ಳೆಯದು. ನರಗುಂದದ ರಾಜನ ಆಪ್ತಪರಿವಾರದವರಲ್ಲಿ ನೀವೂ ಒಬ್ಬರೆಂಬುದು ಮಾತ್ರ ನಮಗೆ ಆಗಲೇ ಗೊತ್ತಾ ಯಿತು...." ಎಂದು ಸೂಟರ್ ಸಾಹೇಬ ಹೇಳುತ್ತಿದ್ದಂತೆಯೆ ಅಧಿಕಾರಿಗಳಿಬ್ಬರು ರಾಘೋಬನನ್ನು ಹಿಡಿದುಕೊಂಡು ಅವನ ಕೈಗಳಿಗೆ ಕೋಳ ತೊಡಿಸಿದರು.

## ೨೧

ರಾಘೋಬನನ್ನು ಬಂಧಿಸಿ ತಂದ ಸಮಾಚಾರ ನಗರದಲ್ಲೆಲ್ಲ ಹರಡಿದಾಗ 'ಅಯ್ಯೋ ಪಾಪ!' ಎಂದವರು ವಿರಳವೆ. ಅವನನ್ನು ತಿರಸ್ಕಾರದಿಂದ ಕಾಣುತ್ತಿದ್ದ ಪ್ರಜರ ಸಂಖ್ಯೆಯೇ ಅಲ್ಲಿ ವಿಶೇಷವಾಗಿತ್ತು. ಕೋಟೆಯಿಂದಿಳಿದು ಬಂದು ವೈರಿಗಳಿಗಿದಿರಾಗಿ ಯುದ್ಧವನ್ನೂ ಮಾಡದೆ ಹೇಡಿಯಂತೆ ಓಡಿಹೋದ ಆ ಸೇನಾಪತಿಯ ಬಗೆಗೆ ಯಾರಿಗೂ ಸದಭಿಪ್ರಾಯವಿರುವುದು ಸಾಧ್ಯವಿರಲಿಲ್ಲ.

"ಇಂಥ ಒಬ್ಬಿಬ್ಬರು ಮಾಡಿದ ಹುಡುಗಾಟದಿಂದಾಗಿ ನೂರಾರು ನಿರಪ ರಾಧಿಗಳು ಶೂಲಕ್ಕೇರುವಂತಾಯಿತು. ಈಗ ನಿಜವಾದ ಅಪರಾಧಿಗಳೇ ಸಿಗತೊಡಗಿದರು. ಒಳ್ಳೆಯದೇ ಆಯ್ತು," ಎಂದು ಜನರು.

"ಅಯ್ಯೋ! ಈ ಕೆಂಪುಮೋರೆಯವರಿಗೂ ಬುದ್ಧಿಯಿಲ್ಲ. ರಾಘೋಬನನ್ನು ಇವರು ಏನೆಂದು ಪಂಜರದಲ್ಲಿರಿಸಿರುವರೋ? ಅವನೇನು ಹುಲಿಯೆ? ಸಿಂಹವೆ? ಲಢಾಯಿ ಸುರುವಾಗುತ್ತಲೂ ನರಗುಂದಿದವನಾಗಿ ಕಾಲಿಗೆ ಬುದ್ಧಿ ಹೇಳಿಸುವ ಈ ರಣ ಹೇಡಿಗೆ ಇಷ್ಟೆಲ್ಲಾ ಮರ್ಯಾದೆಯೆ!"

ರಾಘೋಬನ ಶೌರ್ಯವೆಷ್ಟೆಂಬುದು ಇಂಗ್ಲೀಷರಿಗೂ ಚೆನ್ನಾಗಿ ತಿಳಿದಿತ್ತು. ಅಂಥ ವಿಷಯಗಳೆಲ್ಲವನ್ನೂ ತಿಳಿಸಲು ಬನ್ಯಾಬಾಪು ಕೃಷ್ಣಾಜಿಯವರಿದ್ದೇ

ಇದ್ದರಲ್ಲ! ಆದರೂ ರಾಘೋಬನನ್ನು ಪಂಜರದಲ್ಲಿಟ್ಟು ಪ್ರದರ್ಶಿಸುವಲ್ಲಿ ಇಂಗ್ಲೀಷರದೊಂದು ಉದ್ದೇಶವಿತ್ತು. ಅದೇನೆಂದು ಅವರು ಬಹಿರಂಗವಾಗಿ ಸ್ಪಷ್ಟಪಡಿಸಲಿಲ್ಲ—ಚಾಣಾಕ್ಷನಾದ ಬನ್ಯಾಬಾಪುವಿಗೆ ಮಾತ್ರ ಇಂಗ್ಲೀಷರ ಒಳ ಉದ್ದೇಶ ಹೊಳೆಯದಿರಲಿಲ್ಲ.

ಪಂಜರದಲ್ಲಿ ಬಂಧಿತನಾದ ರಾಘೋಬನನ್ನು ನೋಡಲು ನಾಗರಿಕರು ನೆರೆಯತೊಡಗಿದರು. ಸಂದರ್ಶಕರನ್ನೆಲ್ಲಾ ದೂರದಲ್ಲಿಯೆ ಇರಿಸಲೆಂದು ನೇಮಕ ರಾಗಿದ್ದ ಸೈನಿಕರು ಯಾರೊಬ್ಬರನ್ನೂ ಸಮೀಪಕ್ಕೆ ಬರಲು ಬಿಡುತ್ತಿರಲಿಲ್ಲ. ಅವನೊಡನೆ ಮಾತನಾಡುವುದಕ್ಕೂ ಯಾರಿಗೂ ಆಸ್ಪದವಿರಲಿಲ್ಲ.

ರಾಘೋಬನ ಮನೆಯವರಿಗೆ ಮಾತ್ರ ಅವನೊಡನೆ ಮಾತನಾಡಲು ಅನುಮತಿ ದೊರೆಯಿತು. ತನ್ನ ಮಕ್ಕಳನ್ನು ಜತೆಗೂಡಿ ರಾಧಾಬಾಯಿ ಪತಿಯ ಭೆಟ್ಟಿಗೆ ಬಂದಾಗ ಅವನನ್ನು ಪಂಜರದಿಂದ ಹೊರಗೆ ತಂದು ಒಂದು ಕೊಟಡಿಯಲ್ಲಿ ಮಾತು ಕತೆ ನಡೆಯಲು ಅನುಕೂಲ ಮಾಡಿಕೊಡಲಾಯಿತು.

ಕೈಗಳಿಗೂ ಕಾಲುಗಳಿಗೂ ಕಬ್ಬಿಣದ ಸಂಕೋಲೆಗಳು. ಚಿಂತೆಯಿಂದ ಕೃಶವಾದ ದೇಹ. ಹತ್ತು ಹದಿನೈದು ದಿನಗಳಿಂದ ಯಥೇಚ್ಛವಾಗಿ ಬೆಳೆದಿದ್ದ ಗಡ್ಡ. ತೇಜೋಹೀನವಾಗಿದ್ದ ದೃಷ್ಟಿ. ಹೆಂಡತಿಯೂ ಮಕ್ಕಳೂ ಅಳುತ್ತಳುತ್ತಾ ಅವನನ್ನು ಅಪ್ಪಿಕೊಂಡರು. ಚಿಕ್ಕ ಚಿಕ್ಕ ಮಕ್ಕಳನ್ನು ಮತ್ತೆ ಮತ್ತೆ ಎದೆಗೊತ್ತಿ ಕೊಳ್ಳುತ್ತ ಅವನೂ ಬಿಕ್ಕಿ ಬಿಕ್ಕಿ ಅತ್ತ. ರಾಧಾಬಾಯಿಯೂ ಹಿರಿಯ ಕನ್ಯೆಯೂ ನೆಲಕ್ಕೆ ಹಣೆ ಬಡಿದು ಬಡಿದು ರೋದಿಸಿದರು. ಆ ದೃಶ್ಯವನ್ನು ಕಂಡು ಪಹರೆಯ ಸಿಪಾಯಿಗಳ ಕಣ್ಣುಗಳೂ ತೇವಗೊಂಡುವು.

ಅಳುವಿನ ರಭಸ ಕೊಂಚ ಇಳಿಯುತ್ತಲೂ ರಾಧಾಬಾಯಿಯೆಂದಳು :

"ಅಯ್ಯೋ, ಏನು ನಿಮ್ಮ ಅವಸ್ಥೆ! ಇದನ್ನು ನೋಡಲೆಂದೇ ದೇವರು ನನ್ನನ್ನು ಜೀವದಿಂದಿಟ್ಟಿರುವನೇನೊ! ನಾನು ನಿಮಗೆ ನೂರಾರು ಬಾರಿ ಹೇಳಿದ್ದೆ—ಈ ಬಂಡಾಯದ ಗದ್ದಲ ಬೇಡವೆಂದು. ಈ ನೌಕರಿಯನ್ನು ಬಿಟ್ಟು ಆಗಲೇ ನಮ್ಮೂರಿಗೆ ಹೊರಟುಹೋಗಿದ್ದರೆ ನಿಮಗೆ ಈ ಪರಿಸ್ಥಿತಿಯೇಕೆ ಬರುತ್ತಿತ್ತು ? ಅಯ್ಯೋ, ಇನ್ನೇನು ಮಾಡಲಿ ?"

"ಆದದ್ದು ಆಗಿಹೋಯಿತು ಬಿಡೇ. ಈಗ ಹಿಂದಿನದನ್ನು ನೆನೆದು ಅಳುತ್ತಾ ಕೂತರೆ ಏನು ಬರುವಂತಿದೆ ?"

"ಬಂಡಾಯ ಹೂಡಿದವರು ರಾಜಾಸಾಹೇಬರು. ನೀವು ನೌಕರರಾದುದ

ರಿಂದ ಅವರ ಅಪ್ಪಣೆಯಂತೆ ನಡಕೊಳ್ಳಬೇಕಾಯಿತು. ಅಷ್ಟೆ. ಇಂಗ್ಲೀಷ ಸರಕಾರದವರು ನಿಮ್ಮನ್ನಾದರೂ ಯಾಕೆ ಹಿಡಿಯಬೇಕು? ನಿಮ್ಮದೇನು ತಪ್ಪು?"

"ನಾನು ಮುಖ್ಯ ಸೇನಾಪತಿಯಾಗಿದ್ದದ್ದೇ ನನ್ನ ತಪ್ಪಾಯಿತು ನೋಡೇ!"

"ನಿಮಗಾದರೂ ಅಂಥಾ ದೊಡ್ಡಿಸ್ತನ ಯಾಕೆ ಬೇಕಾಗಿತ್ತೊ ಏನೊ. ಕತ್ತಿಯನ್ನು ಕಂಡರೆ ಗಡಗಡ ನಡುಗುವ ನೀವು ಆ ಅಧಿಕಾರಕ್ಕೆ ಆಸೆ ಮಾಡಿ ಇಂಥಾ ಪ್ರಸಂಗ ತಂದುಕೊಂಡಿರಿ. ಈಗ ಏನಾದರೂ ಯುಕ್ತಿಯಿಂದ ಇದರಿಂದ ಪಾರಾಗುವ ಹಾದಿ ಹುಡುಕಿರಿ."

"ಏನು ಯುಕ್ತಿಯೋ! ನನಗಂತೂ ಏನೂ ತೋಚದಂತಾಗಿದೆ ನೋಡೇ!"

"ಏನಾದರೂ ಉಪಾಯ ಮಾಡಿ ಜೀವ ಉಳಿಸಿಕೊಳ್ಳಲು ಪ್ರಯತ್ನ ಮಾಡಿರಿ. ಇಲ್ಲದಿದ್ದರೆ ನಾವೆಲ್ಲಾ ಅನಾಥರಾಗುವೆವು. ಮಗಳ ಮದುವೆಯೂ ನಿಂತು ಹೋಯ್ತು ಈ ಹಾಳು ಯುದ್ಧದಿಂದ. ಆ ವ್ಯಾನ್‌ಸನ್ ಸಾಹೇಬನನ್ನು ಕೊಲ್ಲುವ ದುರ್ಬುದ್ಧಿ ನಿಮಗೆ ಯಾವ ಗಳಿಗೆಯಲ್ಲಿ ಬಂತೋ ಏನೊ...."

"ಸಾವಕಾಶ ಮಾತಾಡೇ....ಸಾವಕಾಶ....ಅದೇ ಆರೋಪದ ಮೇಲೆ ನನ್ನನ್ನು ನೇಣು ಹಾಕಿಬಿಟ್ಟರು. ಅವನನ್ನು ಕೊಂದವರು ರಾಜಾಸಾಹೇಬರು. ಸಹಾಯ ಮಾಡಿದವನು ವಿಷ್ಣು. ನಾನೂ ದೂರ ನಿಂತಿದ್ದೆನಷ್ಟೆ."

"ಆಗಲೇ ಊರು ಬಿಟ್ಟು ಹೊರಟಿದ್ದರೆ ನಮಗೆಲ್ಲಾ ಇಂಥ ಸ್ಥಿತಿ ಬರ್ತಿರಲಿಲ್ಲ. ಈಗ ನಿಮಗೆ...." ಎನ್ನುತ್ತಾ ರಾಧಾಬಾಯಿ ಮತ್ತೆ ಬೋರಾಡಿ ಅಳತೊಡಗಿದಳು.

ಆಗ ಮಾತ್ರ ರಾಘೋಬ ತಾನೂ ಅಳುವಿಗಾರಂಭಿಸದೆ ಕೊಂಚ ಧೈರ್ಯ ತಂದುಕೊಂಡು ತನ್ನ ಹಿರಿಯ ಮಗನನ್ನು ಕುರಿತು ಹೇಳಿದ:

"ಬಹಳ ಮಾಡಿ ಅವರು ನನ್ನನ್ನು ಜೀವಂತವಾಗಿ ಬಿಡುವುದಿಲ್ಲವೆಂದೇ ಕಾಣುತ್ತದೆ. ಹಣೆಯಲ್ಲಿ ವಿಧಿ ಬರೆದದ್ದು ಯಾರು ತಪ್ಪಿಸಲಿಕ್ಕಾದೀತು? ಆದರೆ, ಇಷ್ಟು ಮಾತ್ರ ಮಾಡು. ನನ್ನನ್ನವರು ಫಾಸಿ ಹಾಕಿದ ಬಳಿಕ ನನ್ನ ಶವವನ್ನು ಶೂದ್ರರಿಗೆ ಮುಟ್ಟಗೊಡದೆ ನೀನೇ ಸ್ವತಃ ನಿಂತು ಪವಿತ್ರವಾದ ರೀತಿಯಲ್ಲಿ ಕೊಂಡೊಯ್ದು ಅಂತ್ಯ ಸಂಸ್ಕಾರ ಮಾಡು."

ಆತ ಅಷ್ಟು ಹೇಳಿ ಮುಗಿಸುತ್ತಿದ್ದಂತೆಯೆ, ಸಂದರ್ಶನಕ್ಕಾಗಿ ಕೊಟ್ಟ ಸಮಯ ಮುಗಿಯಿತೆಂದು ಅಧಿಕಾರಿ ಸೂಚಿಸಿದ. ಮತ್ತೆ ತಾಯಿ ಮಕ್ಕಳು ರಾಘೋಬನನ್ನು ಅಪ್ಪಿಕೊಂಡು ಆಕ್ರೋಶ ಮಾಡತೊಡಗಿದರು. ಅವರನ್ನು ಬೀಳ್ಕೊಟ್ಟು ಪಂಜರದತ್ತ ನಡೆದಾಗ ರಾಘೋಬನ ಹೃದಯ ಒಡೆದು ಹೋದಂತಾಗಿತ್ತು.

ಅಂದಿನಿಂದ ಅವನಿಗೆ ಊಟವೂ ಬೇಡವಾಯಿತು. ದಯಾಳುಗಳಾದ ಪಹರೆಯವರ ಬಲವಂತದಿಂದ ಒಂದೆರಡು ತುತ್ತು ನುಂಗಿ ನೀರು ಕುಡಿಯುತ್ತಿದ್ದ, ಅಷ್ಟೆ. ಇಂಗ್ಲೀಷರು ಅವನ ಜೀವ ತೆಗೆದುಕೊಳ್ಳುವ ಪೂರ್ವದಲ್ಲಿಯೆ ಅವನು ಜೀವನ್ಮೃತನ ಹಾಗಾಗಿ ಹೋಗಿದ್ದ.

ಗೊತ್ತು ಪಡಿಸಿದ ದಿನದಂದು ನ್ಯಾಯಾಲಯದಲ್ಲಿ ಅವನ ವಿಚಾರಣೆ ನಡೆಯಿತು. ಮ್ಯಾನ್‌ಸನ್ ಸಾಹೇಬನನ್ನು ಕೊಂದ ಆರೋಪ, ಬಂಡು ಹೂಡಲು ರಾಜನೊಡನೆ ಸಹಕರಿಸಿದ ಆರೋಪ. ಆ ಎರಡು ಆರೋಪಗಳನ್ನೂ ಆತ ಅಲ್ಲಗಳೆದನಾದರೂ ಕೃಷ್ಣಾಜಿ ಮತ್ತು ಬನ್ಯಾಬಾಪು ಇಬ್ಬರೂ ಅವನೊಬ್ಬ ಪ್ರಮುಖ ಅಪರಾಧಿಯೆಂದು ಸಾಕ್ಷಿ ನುಡಿದರಾದುರಿಂದ ನ್ಯಾಯಾಧೀಶರು ಅವನಿಗೆ ದೇಹಾಂತಶಾಸನ ವಿಧಿಸಲೇಬೇಕಾಯಿತು.

ಶಿಕ್ಷೆಯನ್ನು ಓದಿಹೇಳುವ ಮೊದಲು ನ್ಯಾಯಾಧೀಶರು ರಾಘೋಬನನ್ನು ಕುರಿತು ಕೇಳಿದರು.

"ನೀವೇನಾದರೂ ಹೇಳುವುದು ಉಳಿದಿದ್ದರೆ ಹೇಳುವಿರಾ ಸೇನಾಪತಿಗಳೆ?"

"ನಾನು ನಿರಪರಾಧಿ—ಪೂರಾ ನಿರಪರಾಧಿ ಎಂಬುದನ್ನಂತೂ ಆಗಲೇ ಅರಿಕೆ ಮಾಡಿಕೊಂಡಿದೇನೆ ಸಾಹೇಬರೆ. ನನ್ನ ಮೇಲೆ ದಯದೋರಿ ನನ್ನನ್ನು ಬಿಡುಗಡೆ ಮಾಡಿದರೆ ಹಳ್ಳಿಗೆ ಹೋಗಿ ದೇವರ ಧ್ಯಾನ ಮಾಡುತ್ತ ಶೇಷಾಯುಷ್ಯ ಕಳೆಯುತ್ತೇನೆ. ನನ್ನ ಮಕ್ಕಳ ಮೋರೆ ನೋಡಿಯಾದರೂ ನನ್ನನ್ನು ಬಿಟ್ಟು ಬಿಡಿರಿ, ಸಾಹೇಬರೆ."

"ಉಹೂಂ. ಮುಖ್ಯ ಅಪರಾಧಿಗಳಲ್ಲೊಬ್ಬರಾದ ನಿಮ್ಮನ್ನು ಹಾಗೆ ಬಿಡಲು ಬರುವುದಿಲ್ಲ. ಆದರೂ ಕಡೆಯದಾಗಿ ನಿಮಗೊಂದು ಮಾತು ಕೇಳುತ್ತವೆ. ಬಾಬಾಸಾಹೇಬರು, ರಾಮರಾಯರು, ವಿಷ್ಣು ಈ ಮೂವರು ಅಪರಾಧಿಗಳೆಲ್ಲಿರುವ ರೆಂಬುದನ್ನು ನೀವು ತಿಳಿಸಿ ಅವರನ್ನು ಹುಡುಕಿಕೊಟ್ಟರೆ ನಿಮಗೆ ಕ್ಷಮಾದಾನ ಮಾಡಿ ಬಿಡುಗಡೆ ಮಾಡಲು ಸರಕಾರಕ್ಕೆ ಶಿಫಾರಸು ಮಾಡುವೆವು. ಅವರನ್ನು

ಹಿಡಿದು ಕೊಟ್ಟವರಿಗೆಂದು ಜಾಹೀರು ಪಡಿಸಿದ ಇನಾಮುಗಳೂ ನಿಮಗೇ ಸಿಕ್ಕ ಬಹುದು."

"ಅವರೂ ನಾನೂ ಒಟ್ಟಿಗೇ ಇಲ್ಲಿಂದ ಹೊರಟದ್ದೇನೋ ನಿಜ. ಆದರೆ ಎಂಟು ಹತ್ತು ದಿನಗಳ ಕೆಳಗೆ ಪ್ರತಿಯೊಬ್ಬರೂ ಬೇರೆ ಬೇರೆ ಹಾದಿ ಹಿಡಿದು ಹೊರಟೆವು. ಈಗ ಅವರೆತ್ತ ಹೋಗಿರುವರೆಂಬುದು ನಿಜವಾಗಿ ನನಗೆ ಗೊತ್ತಿಲ್ಲ," ಎಂದು ಸತ್ಯಸಂಗತಿಯನ್ನೇ ಹೇಳಿದ ರಾಘೋಬ. ಆಂಗ್ಲ ನ್ಯಾಯಾಧೀಶರು ಮಾತ್ರ ಅವನ ಮಾತನ್ನು ನಂಬಲಿಲ್ಲ. ತನ್ನ ಒಡೆಯನಿಗೂ, ಜತೆಗಾರರಿಗೂ ದ್ರೋಹ ಬಗೆಯುವ ಇಷ್ಟ ಅವನಿಗಿಲ್ಲವೆಂದೇ ಆತ ಹೀಗೆ ಮಾತನಾಡುತ್ತಿರ ಬೇಕೆಂದು ನ್ಯಾಯಾಧೀಶರಿಗೆನಿಸಿತು.

"ಶಾಬಾಸ್! ರಾಘೋಪಂತ! ನಿಮ್ಮ ಸ್ವಾಮಿನಿಷ್ಠೆಯೂ ದೇಶನಿಷ್ಠೆಯೂ ಪ್ರಶಂಸಾರ್ಹವಾದುವು. ಕೃಷ್ಣಾಜಿ, ಬನ್ಯಾಬಾಪುರವರಂಥ ಸ್ವಾರ್ಥಿಗಳ ಜಾತಿ ಯವರಲ್ಲ ನೀವು!" ಎಂದು ಮನಸ್ಸಿನಲ್ಲಿಯೆ ರಾಘೋಬನನ್ನು ಕೊಂಡಾಡುತ್ತ ನ್ಯಾಯಾಧೀಶರು ತೀರ್ಪನ್ನು ಓದತೊಡಗಿದರು.

## ೨೨

"ಗೌಡನಿದ್ದಾನೋ ಇಲ್ಲೋ?" ಎಂದು ಮೆಲುದನಿಯಲ್ಲಿ ಪ್ರಶ್ನಿಸಿದ ಭಾಸ್ಕರರಾಯ.

ಅಂಗಳದಲ್ಲಿ ಆಟವಾಡುತ್ತ ಕುಳಿತಿದ್ದ ಹುಡುಗರು ಆಟವನ್ನು ಮರೆತು ಈ ಆಗಂತುಕನ ವಿಚಿತ್ರ ವೇಷವನ್ನು ಕುತೂಹಲದಿಂದ ದಿಟ್ಟಿಸುತ್ತ ನಿಂತರು. ಭಾಸ್ಕರರಾಯನ ವೇಷ ವಿಚಿತ್ರವಾಗಿ ತೋರುತ್ತಿದ್ದುದೂ ನಿಜವೆ. ಹತ್ತು ಹದಿನೈದು ದಿನಗಳಿಂದ ನಿರಾತಂಕವಾಗಿ ಬೆಳೆದ ಗಡ್ಡಮೀಸೆಗಳು, ಗಿಡಗಂಟಿಗಳಿಗೆ ಸಿಕ್ಕು ಹರಿದುಹೋದ ಬಟ್ಟೆಗಳು, ಸ್ನಾನವಿಲ್ಲದೆ ಮಲಿನವಾದ ದೇಹ, ಸಮಯಕ್ಕೆ ಸರಿಯಾಗಿ ಊಟವಿಲ್ಲದೆ ತೇಜೋಹೀನವಾಗಿದ್ದ ಮುಖಮುದ್ರೆ; ನಾಲ್ಕು ದಿನಗಳಿಂದ ಪೀಡಿಸುತ್ತಿದ್ದ ಜ್ವರದ ಪರಿಣಾಮ ಬೇರೆಯೆ.

ಅಂತೆಯೆ, ಆಗ ಭಾಸ್ಕರರಾಯ, ದೂರ ದೇಶದಿಂದ ಬಂದ ವಿಚಿತ್ರ ಬೈರಾಗಿ ಯಂತೆ ಆ ಹುಡುಗರಿಗೆ ಕಾಣಿಸಿಕೊಂಡದರಲ್ಲಿ ಅಚ್ಚರಿಯೇನೂ ಇರಲಿಲ್ಲ.

"ಗೌಡ ಅದಾನಿಲ್ಲಪಾ ?" ಭಾಸ್ಕರರಾಯ ಮತ್ತೆ ಪ್ರಶ್ನಿಸಿದ.

ಅವನು ಕನ್ನಡ ಮಾತನಾಡುವ ಧಾಟಿಯೂ ವಿಚಿತ್ರವೇ ಆಗಿತ್ತು!

ಗೌಡರ ಮಗ, ಹತ್ತು ವರ್ಷದ ಹುಡುಗ ಶಂಕರ ಓಡುತ್ತೋಡುತ್ತ ಒಳಗೆ ಹೋಗಿ ತನ್ನ ತಂದೆಯನ್ನು ಕರೆದುಕೊಂಡು ಬಂದ.

ಈ ಅವಸ್ಥೆಯಲ್ಲಿ ಗೌಡ ತನ್ನನ್ನು ಗುರುತಿಸುವನೊ ಇಲ್ಲವೊ ಎಂದೂ ಭಾಸ್ಕರರಾಯನಿಗೆ ಅನುಮಾನವುಂಟಾಗಿತ್ತು. ಆದರೆ ಹಾಗೇನೂ ಆಗ ಗೌಡ ಅವನನ್ನು ಕೂಡಲೇ ಗುರುತಿಸಿ, ಮೂರು ಬಾರಿ ತಲೆ ಬಾಗಿಸಿ ಮುಜುರೆ ಮಾಡಿ, ಸಂಭ್ರಮದಿಂದ ಹೇಳಿದ:

"ಬರ್ರಿ ಮಹಾರಾಜ್, ಒಳಗೆ ಬರ್ರಿ. ದೇವರೇ ಬಂದಂಗಾಯ್ತು ಬಡವರ ಮನೆಗೆ."

"ಈಗ ನಮಗೆ ಮಹಾರಾಜ್ ಸರಕಾರ್ ಅಂತ ಕರೆಯಬೇಡ ಗೌಡಾ. ನಮ್ಮ ಹಿಂದೆಯೇ ಗುಪ್ತಚಾರರಿದ್ದಾರೆ," ಎಂದವನೆ ಭಾಸ್ಕರರಾಯ ಒಂದು ಬಾರಿ ಅತ್ತಿತ್ತ ದೃಷ್ಟಿ ಹೊರಳಿಸಿ ಒಳಗಡೆ ಪ್ರವೇಶಿಸಿದ.

ಭಾಸ್ಕರರಾಯನನ್ನು ಮಹಡಿಯ ಮೇಲಿನ ಕೊಟಡಿಗೆ ಕರೆದೊಯ್ದು ಮಂಚದ ಮೇಲೆ ಕೂಡ್ರಿಸಿ ಗೌಡ ಕೇಳಿದ:

"ತಮ್ಮ ಹಿಂದೆ ಗುಪ್ತಚಾರರಿರುವುದು ನಿಜವೇ ಮಹಾರಾಜ್? ಅವರನ್ನು ತಾವು ನೋಡಿದೀರಾ?"

"ನೋಡಿದ್ದು ಅಷ್ಟೇ ಅಲ್ಲ ಮಹಾರಾಯಾ. ಇದೇ ಈಗ ಅವರ ಕೈಯಲ್ಲಿ ಸಿಕ್ಕಿದ್ದವನು ದೇವರ ದಯದಿಂದ ತಪ್ಪಿಸಿಕೊಂಡು ಬಂದೆ."

"ಅವರೂ ಹಿಂದೆಯೇ ಬಂದರೇ ಮಹಾರಾಜ್?"

"ಹೌದು. ಬಂದಿರಲಿಕ್ಕೇ ಬೇಕು. ಈ ಜಾಗ ಅಷ್ಟು ಸುರಕ್ಷಿತವಲ್ಲದಿದ್ದರೆ ಬೇರೆ ಗುಪ್ತಜಾಗಾ ತೋರಿಸು ಗೌಡಾ."

ಮಧ್ಯ ವಯಸ್ಸಿನ ಆ ಗೌಡ ಹಳ್ಳಿಯ ಹುಂಬನೇ ಆಗಿದ್ದನಾದರೂ ಹೇಡಿಯಾಗಿರಲಿಲ್ಲ; ಗಂಡಾಂತರದ ಪ್ರಸಂಗಗಳಲ್ಲಿ ಕೈಕಾಲು ಕಳೆದುಕೊಂಡು ಕೂಡ್ರುವ ಅಳ್ಳೆದೆಯವನೂ ಆಗಿರಲಿಲ್ಲ. ನರಗುಂದದ ರಾಜಮನೆತನದ ಬಗೆಗೆ ಅವನಿಗಿದ್ದ ಪ್ರೀತಿ ಅಷ್ಟಕ್ಕಷ್ಟೆ ಇದ್ದಿತಾದರೂ, ಸಹಾಯವನ್ನಾಶಿಸಿ ಮನೆ ಬಾಗಿಲಿಗೆ ಬಂದ ಭಾಸ್ಕರರಾಯನನ್ನು ಹಾಗೆಯೇ ಅಟ್ಟಬಿಡುವಂಥ ಹೀನ ಮನಸ್ಸೂ ಅವನದಾಗಿರಲಿಲ್ಲ. ಭಾಸ್ಕರರಾಯನನ್ನು ಇಂಗ್ಲೀಷರು ಬೇಟೆಯಾಡುತ್ತಿದ್ದ ವಿಚಾರ ಗೌಡನಿಗೂ ಚೆನ್ನಾಗಿ ತಿಳಿದಿತ್ತು. ಇಂಗ್ಲೀಷರ ದೃಷ್ಟಿಯಲ್ಲಿ

ಮಹಾಪರಾಧಿಯಾಗಿದ್ದ ಭಾಸ್ಕರರಾಯನಿಗೆ ಆಶ್ರಯವೀಯುವುದೆಂದರೆ ಅವರ ರೋಷವನ್ನು ಆಹ್ವಾನಿಸಿದಂತೆಯೆ ಆಗುತ್ತಿತ್ತು. ತಾನು ಭಾಸ್ಕರರಾಯನನ್ನು ಅಡಗಿಸಿಟ್ಟ ಸಂಗತಿ ಇಂಗ್ಲೀಷರಿಗೆ ಗೊತ್ತಾದರೆ ಅವರು ತನ್ನನ್ನು ಹಾಗೆಯೆ ಬಿಡಲಾರರು. ನರಗುಂದದ ರಾಜ ಹೂಡಿದ್ದ ಬಂಡಾಯಕ್ಕೆ ಆರಂಭದಿಂದಲೂ ತನ್ನ ಸಹಾಯವಿದ್ದಿತೆಂದು ಭಾವಿಸಿ, ಭಾಸ್ಕರರಾಯನ ಜತೆಯಲ್ಲಿಯೆ ಅವರು ತನ್ನನ್ನೂ ಗಲ್ಲಿಗೇರಿಸುವ ಸಂಭವವುಂಟು....

ಗೌಡನಿಗೆ ಅದೆಲ್ಲವೂ ಗೊತ್ತಿತ್ತು. ಆದರೂ ಆತ ಆ ಸಮಯದಲ್ಲಿ ಹಿಂಜರಿಯಲಿಲ್ಲ, ಹೆದರಿಕೊಳ್ಳಲಿಲ್ಲ.

"ಮನೆ ಬಾಗಿಲಿಗೆ ಬಂದವರನ್ನು ಬೇಡ ಅಂತ ಹ್ಯಾಗೆ ಕಳಿಸೂದು? ನನ್ನ ತಲೆ ಹೋದರೂ ಚಿಂತೆಯಿಲ್ಲ. ಬಂದದ್ದೆಲ್ಲಾ ಬರಲಿ," ಎಂದು ಮನಸ್ಸಿನಲ್ಲಿಯೆ ಹೇಳಿಕೊಂಡು, ತನ್ನ ಮನೆಯ ಹಿಂಭಾಗದಲ್ಲಿದ್ದ, ಮೇವು ಒಟ್ಟುವ ಮನೆಯಲ್ಲಿ ಭಾಸ್ಕರರಾಯನನ್ನು ಅಡಗಿಸಿಟ್ಟ ಗೌಡ. ಅಲ್ಲಿಯೇ ಸ್ನಾನದ ವ್ಯವಸ್ಥೆಯೂ ಆಯಿತು.

ಊಟದ ವಿಚಾರವಾಗಿ ಮಾತ್ರ ಗೌಡನಿಗೆ ಯೋಚನೆಗಿಟ್ಟುಕೊಂಡಿತು. ರಾಜಾಸಾಹೇಬರು ಬ್ರಾಹ್ಮಣರು. ಬ್ರಾಹ್ಮಣೇತರರ ಹಸ್ತಸ್ಪರ್ಶವಾದ ನೀರನ್ನು ಕೂಡ ಅವರು ಸೇವಿಸುವುದಿಲ್ಲವೆಂಬುದು ಗೌಡನಿಗೂ ಗೊತ್ತಿತ್ತು. ಇನ್ನು ಊಟ?

"ಊರಲ್ಲಿ ಒಂದೆರಡು ಬ್ರಾಹ್ಮಣರ ಮನೆಗಳೂ ಇವೆ. ಅವರನ್ನು ಕರೆಸಿ ಅಡಿಗೆ ಮಾಡಿಸಲೇ ಮಹಾರಾಜ್?" ಎಂದು ಆತ ವಿಚಾರಿಸಿದ.

ವಾಸ್ತವವಾಗಿ ಆಗ ಭಾಸ್ಕರರಾಯನಿಗೆ ಊಟ ಅಗತ್ಯವಾಗಿ ಬೇಕಿದ್ದಿತು. ನಾಲ್ಕು ದಿನಗಳ ಜ್ವರದಿಂದೆದ್ದ ಬಳಿಕ ಅವನಿಗೆ ಅನ್ನವೂ ದೊರಕಿರಲಿಲ್ಲ. ಬರಿ ಹೊಟ್ಟೆಯಿಂದಲೇ ನಾಲ್ಕು ಹರದಾರಿ ನಡೆದು ಬಂದುದಾಗಿತ್ತು, ಹಣ್ಣು ಹಂಪಲುಗಳಿಂದ ತಣಿಯುವಂತಿರಲಿಲ್ಲ ಹಸಿವು, ಅನ್ನ ಅಗತ್ಯವಾಗಿತ್ತು.

ಆದರೆ—

ಅಡುಗೆ ಮಾಡಲೆಂದು ಬ್ರಾಹ್ಮಣರನ್ನು ಕರೆಯ ಹೋದರೆ ಖಂಡಿತವಾಗಿಯೂ ಸಂದೇಹಕ್ಕಾಸ್ಪದವಾಗುವುದು....

"ಏನೂ ಬೇಡ ಬಿಡು ಗೌಡಾ-ಫರಾಳ ಆದರೆ ಸಾಕು," ಎಂದ ಭಾಸ್ಕರರಾಯ.

"ಈಗ ನಾ ಹೋಗಿ ಕರೆದರೆ ಅವರಿಗೆ ಸಂಶಯು ಬರಬಹುದಲ್ರೀ ಮಹಾರಾಜ್? ಯಾರು ಬಂದಾರೆ, ಏನು ಅಂತ ಕೇಳಬಹುದು...."

"ಹೌದು. ಕೇಳಿಯೆ ಕೇಳುವರು."

"ತಮ್ಮ ಹೆಸರು ಹೇಳಿದರೆ ಅವರೇನು ಮಾಡಬಹುದು ಮಹಾರಾಜ್? ಯಾರಿಗೂ ಹೇಳದೆ ಗಪ್ ಚುಪ್ ಬಂದು ಅಡಿಗೆ ಮಾಡಿಕೊಡಬಹುದಲ್ಲ?"

"ಹ್ಯಾಗೆ ಹೇಳಲಿಕ್ಕೆ ಬಂದೀತು ಗೌಡಾ? ನನ್ನನ್ನು ಹಿಡಿದುಕೊಟ್ಟವರಿಗೆ ಇನಾಮು ಕೊಡುವುದಾಗಿ ಇಂಗ್ಲೀಷರು ಡಂಗುರ ಹೋಯಿಸಿದ್ದಾರಲ್ಲ! ಅನಾಯಾಸವಾಗಿ ಹತ್ತಿಪ್ಪತ್ತು ಸಾವಿರ ರೂಪಾಯಿ ಸಿಕ್ಕರೆ ಯಾರು ಬಿಟ್ಟಾರು?"

"ತಮ್ಮ ಜಾತಿಯವರೇ ತಮ್ಮನ್ನು ಹಿಡಿದುಕೊಡಬಹುದು ಅಂತೀರಾ ಮಹಾರಾಜ್?"

"ಜಾತಿ! ಜಾತಿ! ಎಲ್ಲಿಯ ಜಾತಿ! ಏನು ಕಥೆ! ಸ್ವಾರ್ಥದ ಪ್ರಶ್ನೆ ಬಂದಾಗ ಮನುಷ್ಯ ಜಾತಿ ಧರ್ಮ ಕುಲ ಎಲ್ಲಾ ಮರೆತು ಬಿಡ್ತಾನೆ ಗೌಡಾ," ಎಂದ ಭಾಸ್ಕರರಾಯ. "ನರಗುಂದದಲ್ಲಿ ಪಿತೂರಾದವರೂ ನಮ್ಮ ಜಾತಿಯವರೇ. ನನ್ನ ನಂಬುಗೆಯ ಆಳುಗಳೇ. ನಿಮ್ಮಂಥ ಬೇರೆ ಜಾತಿಯವರೇ ಮೇಲು. ವಿಶ್ವಾಸಘಾತ ಅಂತೂ ಮಾಡುವದಿಲ್ಲ."

"ಹಾಗಾದರೆ ಈಗ ಬ್ರಾಹ್ಮಣರನ್ನು ಕರೆಯುವದು ಬೇಡವೇ ಮಹಾರಾಜ್?"

"ಬೇಡ ಬಿಡು. ಹಾಲು ಹಣ್ಣು ಇಷ್ಟರಮೇಲೇ ಸಾಗಿಸಿದರಾಯಿತು."

ಗೌಡನ ಮನೆಯಲ್ಲಿ ಹಾಲಿಗೇನೂ ಕೊರತೆಯಿರಲಿಲ್ಲ. ತೋಟದಿಂದ ಬಾಳೆಯಹಣ್ಣು, ಪಪಯಿಹಣ್ಣು, ಪೇರಲಹಣ್ಣು ಮೊದಲಾದುವುಗಳನ್ನು ತರಿಸಲಾಯಿತು. ಅವನ್ನು ತಿಂದು, ಹಾಲು ಸಕ್ಕರೆ ಸೇವಿಸಿ, ಅಷ್ಟರಿಂದಲೇ ತೃಪ್ತನಾಗಿ ಭಾಸ್ಕರರಾಯ ಮಲಗಿಕೊಂಡ. ನಿದ್ದೆ ಮಾತ್ರ ಬರಲಿಲ್ಲ, ಅಂಥ ಸಂದರ್ಭದಲ್ಲಿ ಅದು ಬರುವುದೂ ಶಕ್ಯವಿರಲಿಲ್ಲ.

ಗೌಡನೂ ಊಟ ಮುಗಿಸಿಕೊಂಡು ಬಂದು, ಹಾಸುಗೆಯ ಮೇಲೆ ಅಡ್ಡವಾಗಿದ್ದ ದೊರೆಗೆ ಗಾಳಿ ಬೀಸುತ್ತಾ ಕುಳಿತುಕೊಂಡ.

"ಊರಲ್ಲಿ ಹೊಸಬರಾರೂ ಬಂದಿಲ್ಲ ಅಲ್ಲವೇ ಗೌಡಾ?"

"ಇಲ್ಲ ಮಹಾರಾಜ್."

"ಅತ್ಯಂತ ನಂಬಿಕೆಯ ಜನರನ್ನು ಊರ ಹೊರಗೆ ಕಾವಲಿಟ್ಟು, ಯಾರಾದರೂ ಅಪರಿಚಿತರು ಬಂದರೆ ಕೂಡಲೇ ಬಂದು ಸುದ್ದಿ ತಿಳಿಸಲು ಹೇಳು."

"ಆಗಲೇ ಇಬ್ಬರು ಹಳಬರನ್ನು ನೇಮಿಸಿ ಬಂದೆ, ಮಹಾರಾಜ್."

"ಆ ಹಳಬರನ್ನು ನಂಬಬಹುದೇ ?"

"ಆ ಮಂದಿ ಹಾಗೆಲ್ಲಾ ಘಾತ ಮಾಡುವವರಲ್ಲ ಮಹಾರಾಜ್. ಅಲ್ಲದೆ, ತಾವು ಇಲ್ಲಿರುವದು ಅವರಿಗೆ ಗೊತ್ತೂ ಇಲ್ಲ."

"ಬೇರೆ ಯಾರಿಗೂ ಗೊತ್ತಿಲ್ಲವೇ ಗೌಡಾ ?"

"ಗೊತ್ತಿರುವದೆಂದರೆ ನಮ್ಮ ಮನೆಯಾಕೆಗೆ. ಅಷ್ಟೆ."

ತಾನು ಗೌಡನ ಮನೆಗೆ ಬಂದಾಗ ಅಂಗಳದಲ್ಲಿ ಹುಡುಗರಿದ್ದುದನ್ನು ಜ್ಞಾಪಿಸಿಕೊಂಡು ಭಾಸ್ಕರರಾಯ ಕೇಳಿದ :

"ನಾನು ಬಂದಾಗ ನಿಮ್ಮ ಮನೆಯೆದುರು ಆಟವಾಡುತ್ತಿದ್ದ ಹುಡುಗರು ನನ್ನನ್ನು ನೋಡಿದಾರೆ ಗೌಡಾ."

"ನೋಡಲಿ ಬಿಡಿರಿ. ಅವರಿಗೇನು ತಿಳಿದೀತು ? ಯಾರೋ ಸಾಧು ಬಂದಾರೆ ಅಂತ ಅನಿಸಬಹುದು. ಸಾಧುಗಳೂ ಬೈರಾಗಿಗಳೂ ದಿನವೂ ಬರುತ್ತಲೇ ಇರ್ತಾರೆ–ನಮ್ಮ ಮನೆಗೆ."

ಆಗ ಮಾತ್ರ ಭಾಸ್ಕರರಾಯ ನಿಶ್ಚಿಂತನಾಗಿ ವಿಶ್ರಾಂತಿ ಪಡೆಯತೊಡಗಿದ.

"ನಿನ್ನೆ ರಾತ್ರಿ ಎಲ್ಲಿ ಮಲಗಿದ್ದಿರಿ ಮಹಾರಾಜ್ ?"

"ನಿನ್ನೆಯೇ ? ನಿನ್ನೆ, ಮೊನ್ನೆ, ಆಚೆ ಮೊನ್ನೆ ಮೂರು ರಾತ್ರಿಯೂ ಒಂದು ಹಾಳು ದೇವಸ್ಥಾನದಲ್ಲಿ ಬಿದ್ದುಕೊಂಡಿರಬೇಕಾಗಿತ್ತು. ಮೈಯಲ್ಲೂ ಸರಿಯಿರಲಿಲ್ಲ. ಭಯಂಕರ ಜ್ವರ ಬಂದಿತ್ತು."

"ಜ್ವರವೆ ? ಹಾಗಾದರೆ ಬಹಳ ತ್ರಾಸು ಆಗಿರಬೇಕಲ್ಲ ಮಹಾರಾಜ್ ? ಸಂಗಡ ಆಳುಗಳೂ ಇರಲಿಲ್ಲ, ಅಲ್ರೀ ?"

"ಇಲ್ಲ. ನರಗುಂದದಿಂದ ಹೊರಟಾಗ ಎಲ್ಲರೂ ಇದ್ದರು. ನಾನೇ ಬೇಡ ಅಂತ ಕಳಿಸಿ ಬಿಟ್ಟೆ. ಎಂಟು ಹತ್ತು ದಿನದಿಂದ ಹೀಗೆ ಒಬ್ಬನೇ ತಿರುಗಾಡುತ್ತಿದ್ದೇನೆ."

"ತಮ್ಮಂಥ ಮಹಾರಾಜರಿಗೆ ದೇವರು ಎಂಥಾ ಹೊತ್ತು ತಂದಿಟ್ಟನಲ್ಲ !" ಎನ್ನುತ್ತಾ ಗೌಡ ನಿಟ್ಟುಸಿರು ಬಿಟ್ಟ.

"ಇದೂ ಒಂದೂ ಕಾಲ ಗೌಡಾ. ಈ ಭೂಮಿಯ ಮೇಲೆ ಹುಟ್ಟಿ ಬಂದ

ಬಳಿಕ ಸುಖವನ್ನೂ ಅನುಭವಿಸಬೇಕು, ಕಷ್ಟವನ್ನೂ ಅನುಭವಿಸಬೇಕು. ಬರೀ ಸುಖವೇ ಬೇಕು ಅಂತ ಬಯಸುವುದೂ ಹುಚ್ಚುತನವೇ," ಎಂದು ನುಡಿದು ಭಾಸ್ಕರರಾಯ ಒಂದು ನಿಮಿಷ ಮೌನವಾಗಿದ್ದ. ಅನಂತರ ಹಾಸಿಗೆಯಲ್ಲಿ ಮಗ್ಗುಲು ಬದಲಿಸಿ ಜಂತಿಯನ್ನು ದಿಟ್ಟಿಸುತ್ತ ಹೇಳತೊಡಗಿದ :

"ಕಷ್ಟ ಅಂದರೂ ಅದೆರದೂ ಒಂದೂ ಮೋಜೇ ಇರ್ತದೆ ಗೌಡಾ. ನೋಡು. ನಾಲ್ಕು ಹಗಲು ನಾಲ್ಕು ರಾತ್ರಿ ಬಿಟ್ಟು ಬಿಡದೆ ಜ್ವರ ಕಾಡಿಸಿತು. ತಾಪದಿಂದ ನೀರಡಿಕೆಯಾದರೆ ಬಾಯಲ್ಲಿ ಹನಿ ನೀರು ಬಿಡುವವರೂ ಇರಲಿಲ್ಲ— ಇನ್ನು ಅನ್ನದ ಮಾತಂತೂ ದೂರ ಉಳಿಯಿತು. ಯಾರೋ ಒಬ್ಬ ಪುಣ್ಯಾತ್ಮ ದನಕಾಯುವ ಹುಡುಗ ಒಂದು ದಿನ ಬಂದು ನೀರು ಕುಡಿಸಿ ಹೋದನಲ್ಲದೆ ಅಡವಿ ಯಿಂದ ಒಂದು ವನಸ್ಪತಿಯನ್ನೂ ತಂದುಕೊಟ್ಟ. ಅದರಿಂದ ಸ್ವಲ್ಪ ಜ್ವರ ಇಳಿಯಿತು. ನಿನ್ನೆ ರಾತ್ರಿಯೆಲ್ಲಾ ಬೆವರು ಬಿಟ್ಟು ಹಗುರಾಗುತ್ತಿದ್ದ ಹಾಗೇ ನಾನು ಬಿದ್ದುಕೊಂಡಿದ್ದ ದೇವಾಲಯಕ್ಕೆ ನನ್ನನ್ನೇ ಹುಡುಕುತ್ತಿದ್ದ ವೈರಿಗಳು ಬರಬೇಕೇ!"

"ಸೂಟರ್ ಸಾಹೇಬನೇ ಬಂದಿದ್ದನೇ ಮಹಾರಾಜ್?"

"ಇರಬಹುದು. ಇಂಗ್ಲೀಷರ ಹಾಗೆ ಕಾಣುವ ನಾಲ್ಕೈದು ಮಂದಿ ಇದ್ದರು. ಅವರ ಸಂಗಡ ಹತ್ತಿಪ್ಪತ್ತು ಮಂದಿ ನಮ್ಮ ದೇಶೀಯರು. ನಾನೂ ಸಾಧುವಿನ ವೇಷದಲ್ಲಿದ್ದವನು. ಅವರೂ ಸಂನ್ಯಾಸಿಗಳ ಸೋಗು ಹಾಕಿದ್ದರು. ಜ್ವರದಿಂದ ಬಣ್ಣಗೆಟ್ಟಿದ್ದ ನನ್ನನ್ನು ಅವರು ಒಮ್ಮೆಲೇ ಗುರುತಿಸಲಿಲ್ಲ. ನನಗೆ ಮಾತ್ರ ಅವರಾರೆಂಬುದು ಆಗಿಂದಾಗಲೇ ಗೊತ್ತಾಯಿತು. ಆದರೂ, ಅವರು ಬಂದ ಕೂಡಲೇ ಅಲ್ಲಿಂದೆದ್ದು ಹೊರಡುವಂತೆಯೂ ಇರಲಿಲ್ಲ. ಅವರಿಗೇನೂ ಸಂಶಯ ಬರದಂತೆ ಎಚ್ಚರಿಕೆಯಿಂದಿದ್ದು, ಅವರ ಕಣ್ಣು ತಪ್ಪಿಸಿ ಪಾರಾಗ ಬೇಕಾಗಿತ್ತು...."

"ಅವರಿಗೇನು ಸಂಶಯ ಬರಲಿಲ್ಲವೇ ಮಹಾರಾಜ್?"

"ಮೊದಮೊದಲು ಸಂಶಯ ಬರಲಿಲ್ಲ. ಅವರೂ ಅಲ್ಲಿ ಇಲ್ಲಿ ತಿರುಗಿ ಬಹಳ ದಣಿದು ಬಂದಂತಿತ್ತು. ಗುಡಿಗೆ ಬಂದ ಕೂಡಲೇ ಮೊದಲು ಊಟದ ತಯಾರಿ ನಡಸಿದರು. ಊಟ ಸುರು ಆದಾಗ ನನ್ನ ಕಡೆ ಲಕ್ಷ್ಯ ಹೊರಳಿತು. ನನ್ನನ್ನು ಎಬ್ಬಿಸಿ ಊಟ ಮಾಡಿಸಬೇಕೆಂದು ಪ್ರಯತ್ನಪಟ್ಟರು. ನನ್ನ ಮೈಯಲ್ಲಿ ನೆಟ್ಟಗಿಲ್ಲ ದಿದ್ದದ್ದೂ ಒಳ್ಳೆಯದೇ ಆಯಿತು. ಎಚ್ಚರವಿದ್ದರೂ ಇಲ್ಲದಂತೆ ನಟಿಸುತ್ತಾ

ನಾನು ಮಲಗಿಕೊಂಡಿದ್ದೆ. ಅವರು ನನ್ನನ್ನು ಎಬ್ಬಿಸಲು ಯತ್ನಿಸಿ ಉಪಯೋಗ ವಾಗದಿರಲು ನನ್ನ ಪಾಡಿಗೆ ನನ್ನನ್ನು ಬಿಟ್ಟು ಉಂಡು ಮಲಗಿದರು. ಅವರಿಗೆ ಚೆನ್ನಾಗಿ ನಿದ್ದೆ ಹತ್ತಿದ ಸಂಧಿ ಸಾಧಿಸಿ ಸಾನಿತ್ತ ಬಂದು ಬಿಟ್ಟೆ."

"ನೀವು ಅಲ್ಲಿಂದ ಹೊರಟು ಎಷ್ಟು ಹೊತ್ತಾಗಿರಬಹುದು?"

"ಮೂರು ನಾಲ್ಕು ತಾಸಾಗಿರಬಹುದು. ನಾಲ್ಕು ದಿನದಿಂದ ಜ್ವರ ಬಂದು ಹಾಸಿಗೆ ಹಿಡಿದು ಬಿದ್ದಿದ್ದವನು. ಮೈಯಲ್ಲಿ ತ್ರಾಣವೂ ಇರಲಿಲ್ಲ. ಅಂಥಾದ್ದರಲ್ಲೂ ಇಲ್ಲಿಯವರೆಗೆ ಹ್ಯಾಗೆ ನಡೆಯುತ್ತ ಬಂದೆನೋ ದೇವರಿಗೇ ಗೊತ್ತು. ಪರದೇಶೀಯರ ಕೈಗೆ ನನ್ನನ್ನು ಬೀಳಗೊಡಬಾರದೆಂದೇ ಪರಮಾತ್ಮನ....ಊರಾದ ಈ ತೊರಗಲ್ಲಿಗೆ ಬಂದು ಮುಟ್ಟದೆ. ನಮ್ಮ ನಂಬುಗೆಯ ಗೌಡನಾದ ನೀನೂ ಭೆಟ್ಟಿಯಾದಿ. ಚಲೋ ಆಯಿತು."

"ಇಂಥಾ ವೇಳೆಯಲ್ಲಿ ತಮ್ಮ ಸೇವೆ ಮಾಡುವ ಪುಣ್ಯವಿತ್ತು ನನಗೂ. ಅದಿರಲಿ. ನೀವು ಇತ್ತ ಕಡೆಗೇಬಂದದ್ದು ವೈರಿಗಳಿಗೆ ಗೊತ್ತಾಗಬಹುದು ಅಂತೀರಾ?"

"ಅವರು ಹಾದಿಯಲ್ಲಿಯ ಹಳ್ಳಿಯ ಜನರನ್ನು ವಿಚಾರಿಸುತ್ತ ಬರಬಹುದು. ಒಬ್ಬ ಸಾಧು ಇತ್ತಕಡೆಗೇ ಹೋದನೆಂದು ಯಾರಾದರೂ ಹೇಳಿದರೆ ಮುಗಿದೇ ಹೋಯಿತು. ಇದಕ್ಕಿಂತ ಸುರಕ್ಷಿತವಾದ ಬೇರೆ ಗುಪ್ತ ಸ್ಥಳವಿಲ್ಲಿ ಇಲ್ಲವೇ ಗೌಡಾ?"

"ಇಲ್ಲ ಮಹಾರಾಜ್. ತೋಟದಲ್ಲಿಯ ಗುಡಿಸಲಲ್ಲಿ ತಮ್ಮನ್ನು ಅಡಗಿಸ ಬಹುದು. ಆದರೆ, ಅದೂ ಸುರಕ್ಷಿತವಲ್ಲ. ಜನರಿಗೆ ಗೊತ್ತಾಗೂದು ಖಂಡಿತ. ಇಲ್ಲಾದರೆ ಮನೆಯ ಹಿಂಭಾಗ. ಇತ್ತ ಯಾರೂ ಹಾಯುವದಿಲ್ಲ."

"ಹಾಗಿದ್ದರೆ ಚಿಂತೆಯಿಲ್ಲ ಗೌಡಾ. ಇಂಥಾ ವೇಳೆಯಲ್ಲಿ ನಮಗೆ ಸಹಾಯ ಮಾಡಿ ನೀನು ಬಹಳ ಉಪಕಾರ ಮಾಡಿದಿ. ನಿನ್ನ ಈ ಋಣವನ್ನು ಜನ್ಮ ಜನ್ಮಾಂತರದಲ್ಲೂ ಮರೆಯುವದಿಲ್ಲ."

ನರಗುಂದದ ದೊರೆಯ ಮುಖದಿಂದ ಅಷ್ಟು ಮಾತು ಬಂದದ್ದೇ ತಡ, ಆ ಹಳ್ಳಿಯ ಗೌಡನ ಎದೆ ಹಿಗ್ಗಿ ಅಗಲವಾಯಿತು. ಭಾಸ್ಕರರಾಯನನ್ನು ಇನ್ನಷ್ಟು ಸಂತುಷ್ಟನನ್ನಾಗಿ ಮಾಡಿ ಅವನಿಂದ ಮತ್ತಷ್ಟು ಪ್ರಶಂಸೆ ಪಡೆಯುವ ಹಂಬಲ ದಿಂದ ಆತ ತನ್ನ ಮಗ ಶಂಕರನನ್ನು ಕೂಗಿ, ತೋಟದಲ್ಲಿ ಮುಚ್ಚಿ ಇರಿಸಿದ್ದ ರುಚಿಕರವಾದ ಮಾವಿನ ಹಣ್ಣು ತೆಗೆದುಕೊಂಡು ಬರುವಂತೆ ಹೇಳಿ ಕಳಿಸಿದ.

“ಈಗೇಕಪ್ಪಾ ಮಾವಿನ ಹಣ್ಣು? ಅಮಾಸಿಯು ದಿವಸ ಸೀಕರಣಿ ಮಾಡೂಣು ಅಂತ ಹೇಳಿದ್ದಿಯಲ್ಲ?” ಎಂದ ಶಂಕರ.

“ಎಲ್ಲಿಯ ಸೀಕರಣಿ ಹೋಗೋ. ನಮ್ಮ ಮಹಾರಾಜರ ಬಂದಾರ. ಮಾವಿನಹಣ್ಣು ತಗೊಂಡು ಬಾ,” ಎಂದ ಗೌಡ.

“ಯಾವ ಮಹಾರಾಜರು ಅಪ್ಪಾ? ನರಗುಂದದ ಬಾಬಾಸಾಹೇಬರೇ? ಬಂಡು ಮಾಡಿ ಓಡಿ ಹೋಗಿರುವರಂತಲ್ಲ. ಅವರೇ?” ಬಾಲಕರಿಗೆ ಸ್ವಾಭಾವಿಕ ವಾದ ಕುತೂಹಲದಿಂದ ಶಂಕರ ಪ್ರಶ್ನಿಸಿದ.

“ಹೌದು. ಬಾಬಾಸಾಹೇಬರೇ ಬಂದಾರ,” ಎಂದ ಗೌಡ. ಅಂಥ ಗುಟ್ಟಿನ ಮಾತನ್ನು ಹುಡುಗನೆದುರು ಹೇಳುವುದು ಉಚಿತವಲ್ಲವೆಂಬುದರ ಪರಿಜ್ಞಾನ ಅವನಿಗಿರಲಿಲ್ಲ.

ಮಾವಿನ ಹಣ್ಣು ಬಂದುದೂ ಆಯಿತು.

ಭಾಸ್ಕರರಾಯ ಎದ್ದು ಮುಖ ತೊಳೆದುಕೊಂಡು, ಗೌಡ ಹೆಚ್ಚಿಕೊಡುತ್ತಿದ್ದ ಮಾವಿನ ಹಣ್ಣಿನ ತುಂಡುಗಳನ್ನು ಬಾಯಿಗಿಟ್ಟುಕೊಳ್ಳುತ್ತಿದ್ದ ಹಾಗೆಯೇ ಅವನಿಗೆ ಏನೋ ಅನುಮಾನ ಬಂದಿತು.

“ಈ ಹಣ್ಣು ಯಾರು ತಂದರು ಗೌಡಾ?”

“ನನ್ನ ಮಗನನ್ನೇ ಕಳಿಸಿದ್ದೆ ತರಲಿಕ್ಕೆ. ಯಾಕ್ರೀ ಮಹಾರಾಜ್?”

“ನಿಮ್ಮ ಮಗನ ವಯಸ್ಸೆಷ್ಟು?”

“ಹತ್ತು ಹನ್ನೊಂದು ಇರಬಹುದು. ಯಾಕೆ? ಏನಾಯಿತು?”

“ನಾನಿಲ್ಲಿ ಇರುವದು ಅವನಿಗೆ ಗೊತ್ತಿದೆಯೇನು?”

“ಹೌದು. ಗೊತ್ತು. ಯಾಕೆ? ಗೊತ್ತಾದರೇನಾಯಿತು?”

“ಛೆ. ಛೆ. ಅವನಿಗೆ ಗೊತ್ತಾದದ್ದು ನೆಟ್ಟಗಾಗಲಿಲ್ಲ. ಸಣ್ಣ ಹುಡುಗ. ತಿಳಿಯದೇ ಯಾರೆದುರಿಗಾದರೂ ಹೇಳಿ ಬಿಡುವ ಸಂಭವವುಂಟು,” ಎಂದವನೇ ಭಾಸ್ಕರರಾಯ ಮಾವಿನ ಹೋಳುಗಳನ್ನು ಎಲೆಯ ಮೇಲೆಯೇ ಇಟ್ಟು ಮುಂದೇನು ಮಾಡುವುದೆಂದು ಯೋಚಿಸತೊಡಗಿದ.

“ಏನೂ ಆಗುವುದಿಲ್ಲ ಬಿಡಿರಿ ಮಹಾರಾಜ್. ಹಣ್ಣು ತಿನ್ನಿರಿ,” ಎಂದು ಗೌಡ ಆಗ್ರಹಪಡಿಸುತ್ತಲೇ ಇದ್ದ.

ಅದೇ ಸಮಯದಲ್ಲಿ ಗೌಡನ ಮನೆಯ ಅಂಗಳದಲ್ಲಿ, ಭಾಸ್ಕರರಾಯನನ್ನು

ಸುಡುಕುತ್ತ ತೊರಗಲ್ಲಿಗೆ ಬಂದಿದ್ದ ಸರ್ ಫ್ರಾಂಕ್ ಸೂಟರ್ ಗೌಡನ ಮಗನನ್ನು ಕರೆದು ಪ್ರಶ್ನಿಸುತ್ತಿದ್ದ :

"ಪಾಟೀಲರೆಲ್ಲಿದ್ದಾರೆ ತಮ್ಮಾ ?"

ಗೌಡನ ಪತ್ನಿ ಅಡುಗೆಯ ಮನೆಯಿಂದೆದ್ದು ಬರುವುದರೊಳಗಾಗಿಯೆ ಶಂಕರ ತನಗೆ ಗೊತ್ತಿದ್ದ ಸಂಗತಿಯನ್ನು ಹೇಳಿ ಬಿಟ್ಟಿದ್ದ.

"ಬಾಬಾಸಾಹೇಬ ನರಗುಂದಕರರು ಬಂದಾರೆ. ಅಪ್ಪ ಅವರಿಗೆ ಮಾವಿನ ಹಣ್ಣು ತಿನಿಸುತ್ತಿದಾನೆ."

ಭಾಸ್ಕರರಾಯನನ್ನು ಹಿಡಿಯಬೇಕಾದರೆ ಇನ್ನೂ ಎಷ್ಟು ಶ್ರಮಪಡ ಬೇಕಾಗುವುದೋ ಏನೋ ಎಂದು ಪರಿತಪಿಸುತ್ತಿದ್ದ ಸೂಟರ್ ಸಾಹೇಬನಿಗೆ ಮೈ ಮೇಲಿನ ಭಾರವಿಳಿದಂತಾಗಿ ಹರ್ಷವಾಯಿತು.

"ಅವರಿಬ್ಬರೂ ಎಲ್ಲಿದಾರೆ ಮಗೂ ?" ಎಂದು ಸೂಟರ್ ಸಾಹೇಬ ಕೇಳುತ್ತಲೂ ಶಂಕರ, ಮನೆಯ ಎಡ ಬದಿಯಿಂದ ಅವರನ್ನು ಕರೆದೊಯ್ದು, ಹಿಂಭಾಗದಲ್ಲಿನ ಮೇವಿನ ಮನೆಗೆ ಕರೆದುಕೊಂಡು ಬಂದ.

ಆ ಮೇವಿನ ಮನೆಗಿದ್ದುದು ಒಂದೇ ಒಂದು ಬಾಗಿಲು. ಅದೊಂದು ಬಾಗಿಲನ್ನು ಹೊರತು ಪಡಿಸಿದರೆ ಬೇರಾವ ದ್ವಾರವೂ ಇರಲಿಲ್ಲ, ಕಿಟಕಿಯೂ ಇರಲಿಲ್ಲ. ಅರ್ಧ ತೆರೆದಿದ್ದ ಬಾಗಿಲಲ್ಲಿ ಸೂಟರ್ ಸಾಹೇಬ ಬಂದು ನಿಲ್ಲುತ್ತಲೂ ಗೌಡನೂ ಭಾಸ್ಕರರಾಯನೂ ಥಟ್ಟನೆದ್ದು ನಿಂತರು. ಭಾಸ್ಕರರಾಯನ ಚಪಲ ದೃಷ್ಟಿ ಅತ್ತಿತ್ತ ಸಂಚರಿಸಿ ಪಾರಾಗಲು ದಾರಿ ಹುಡುಕತೊಡಗಿತು.

ಗುಂಡು ತುಂಬಿದ ಪಿಸ್ತೂಲನ್ನು ಎಡಗೈಯಲ್ಲಿ ಹಿಡಿದು ಸೂಟರ್ ಸಾಹೇಬ ಸೈನಿಕನಂತೆ ಸೆಟೆದು ನಿಂತು, ಬಲಗೈಯಿಂದ ಭಾಸ್ಕರರಾಯನಿಗೆ ಸಲಾಮು ಹೊಡೆದು ಮಾತನಾಡಿದ :

"ಇಲ್ಲಿಂದ ಪಾರಾಗಲು ಹಾದಿಯಿಲ್ಲ ಬಾಬಾಸಾಹೇಬ್. ಚಲೋ ಸರಕಾರ್, ಅಬ್ ಹಂ ಬೆಲಗಾಂ ಜಾಯಂಗೆ !"

ಇನ್ನು ಓಡಿಹೋಗಲು ಯತ್ನಿಸುವುದು ವ್ಯರ್ಥವೆಂದು ಭಾಸ್ಕರರಾಯನಿಗೂ ಗೊತ್ತಾಯಿತು. ಆತ ಪಿಟ್ಟೆಂದು ಮಾತನಾಡದೆ ವೈರಿಗಳ ಬಂದಿಯಾದ.

ಭಾಸ್ಕರರಾಯನ ಜತೆಯಲ್ಲಿ ಗೌಡನನ್ನೂ ಹಿಡಿದೊಯ್ಯಬೇಕೆಂದು ಸೂಟರ್ ಯೋಚಿಸಿದ್ದ.

"ನಿಜವಾಗಿ ಈ ಗೌಡನದೇನೂ ಅಪರಾಧವಿಲ್ಲ. ಹಸಿದು ಬಂದ ಬ್ರಾಹ್ಮಣ

ನನ್ನ ಹಾಗೇ ಆಟ್ಟಲಾಗದೆ ಹಣ್ಣು ಹಂಪಲು ಕೊಟ್ಟು ಉಪಚರಿಸಿದ್ದಾನೆ, ಅಷ್ಟೆ. ನನ್ನ ಬದಲು ಇನ್ನಾರೇ ಬಂದಿದ್ದರೂ ಈಗ ಹೀಗೇ ಉಪಚರಿಸುತ್ತಿದ್ದ. ಪಾಪ, ಇವನನ್ನೇಕೆ ಸುಮ್ಮನೆ ಪೀಡಿಸುತ್ತೀರಿ? ಬಿಟ್ಟು ಬಿಡಿ," ಎಂದು ಭಾಸ್ಕರರಾಯ ಹೇಳುತ್ತಲೂ ಸಾಹೇಬ ಅವನ ಮಾತಿಗೆ ಮನ್ನಣೆಯಿತ್ತು ಗೌಡನನ್ನು ಬಿಟ್ಟುಕೊಟ್ಟ.

ಭಾಸ್ಕರರಾಯನನ್ನು ನರಗುಂದದಲ್ಲಿ ಗಲ್ಲಿಗೇರಿಸಿದರೆ ಜನರು ಗದ್ದಲ ಮಾಡಬಹುದೆಂದು ಹೆದರಿದ ಅಧಿಕಾರಿಗಳು ಅವನನ್ನು ಬೆಳಗಾವಿಯಲ್ಲಿಯೆ ಗಲ್ಲಿಗೇರಿಸುವ ನಿಶ್ಚಯ ಮಾಡಿದರು. ಅವನ ಅಪರಾಧಗಳ ಬಗೆಗೆ ನ್ಯಾಯಾಸ್ಥಾನದಲ್ಲಿ ವಿಚಾರಣೆಯಾಗುವ ಮುನ್ನವೇ ಅವನಿಗೆ ವಿಧಿಸುವ ಶಿಕ್ಷೆಯೂ ನಿಶ್ಚಯಿಸಲ್ಪಟ್ಟಿತ್ತು!

ಅನಂತರ ನಡೆದುದು ಕೆಲವು ದಿನಗಳ ನಾಟಕ, ಅಷ್ಟೆ.

ನ್ಯಾಯ ವಿಚಾರಣೆಗಾರಂಭವಾದ ದಿನ ನ್ಯಾಯಾಧೀಶರು ಕೇಳಿದರು:

"ಈ ಬಂಡಾಯವನ್ನು ನೀವೊಬ್ಬರೇ ಆರಂಭಿಸಿಲ್ಲವೆಂಬುದು ನಮಗೂ ಗೊತ್ತಿದೆ ಭಾಸ್ಕರರಾವ್. ನಿಮಗೆ ಮೊದಲಿಂದಲೂ ಸಹಾಯ ಮಾಡುತ್ತಿದ್ದ ಸಂಸ್ಥಾನಿಕರಾರು ಎಂಬುದನ್ನು ಹೇಳಿರಿ."

"ನನಗೆ ಯಾರೂ ಸಹಾಯ ಮಾಡಲಿಲ್ಲ. ನಾನು ಯಾರನ್ನೂ ಕೇಳಲೂ ಇಲ್ಲ."

"ದೇವರನ್ನು ಸ್ಮರಿಸಿ ಸತ್ಯ ಹೇಳಿರಿ. ಅವರನ್ನುಳಿಸುವ ಸದುದ್ದೇಶದಿಂದ ಇರುವ ವಿಷಯ ಬಚ್ಚಿಡಬೇಡಿರಿ. ಬಂಡಾಯಕ್ಕೆ ಸಹಾನುಭೂತಿ ತೋರಿಸಿದವರಾರೆಂಬುದನ್ನು ನೀವು ಹೇಳಿದರೆ ನಿಮಗೇನೂ ಶಿಕ್ಷೆ ವಿಧಿಸದೆ ನಿಮ್ಮನ್ನು ಬಿಟ್ಟು ಬಿಡುವೆವು. ಅಷ್ಟೇ ಅಲ್ಲ, ನಿಮ್ಮ ರಾಜ್ಯವನ್ನೂ ನಿಮಗೆ ಮರಳಿಕೊಡುವೆವು."

ಬಿಡುಗಡೆ....ಪುನಃ ರಾಜ್ಯ! ಭಾಸ್ಕರರಾಯನ ತುಟಿಗಳ ಮೇಲೆ ಮುಗುಳ್ನಗು ಆಟವಾಡತೊಡಗಿತು. ಮಲಪ್ರಭೆಯಲ್ಲಿ ಮುಳುಗಿ ಪ್ರಾಣತ್ಯಜಿಸಿದ ತಾಯಿ–ಪತ್ನಿಯರ ಮುಖಗಳು ಅವನ ಬಗೆಗಣ್ಣಿನಿದಿರು ಕಾಣಿಸಿಕೊಂಡವು. ಫಾಸೀ ಕಂಬವನ್ನೇರಿ ಮೃತಿಹೊಂದಿದ ರಾಘೋಬನ ದೀನಮುಖವೂ ಕಾಣಿಸಿದಂತಾಯಿತು. ಇನ್ನೂ ಎಷ್ಟು ಮಂದಿ ನಿರಪರಾಧಿಗಳು ನೇಣುಗಂಬವೇರಬೇಕಾಯಿತೊ! ಎಷ್ಟು ಕುಟುಂಬಗಳು ಅನಾಥವಾಗಿವೆಯೊ! ಇದೆಲ್ಲದಕ್ಕೂ ಕಾರಣನಾದ ತಾನು, ಮುಖ್ಯ ಅಪರಾಧಿಯಾದ ತಾನು ಜೀವವುಳಿಸಿಕೊಳ್ಳಲು

ಆಶಿಸುವುದೇ ? ಈ ಹಾಳುಮೋರೆಯನ್ನು ಮತ್ತೆ ಪ್ರಜರಿಗೆ ಹೇಗೆ ತೋರಿಸುವುದು? ನರಗುಂದದ ಗಾದಿಯ ಮೇಲೆ ಮತ್ತೆ ಹೇಗೆ ಕೂತಿರುವುದು ? ತಾಯಿಯಿಲ್ಲದ, ಪತ್ನಿಯಿಲ್ಲದ ಆ ಅರಮನೆಯಲ್ಲಿ ಮತ್ತೆ ಹೇಗೆ ಅಡಿಯಿರಿಸುವುದು ? ಸಂಸ್ಥಾನಿಕ ಮಿತ್ರರು ತನ್ನ ಸಹಾಯಕ್ಕೆ ಬರುವುದಾಗಿ ಮಾತು ಕೊಟ್ಟದ್ದುದೇನೊ ನಿಜ. ಕಡೆಯ ಗಳಿಗೆಯಲ್ಲಿ ಅವರು ಅಂಜಿಕೊಂಡು ತನಗೆ ಕೈ ಕೊಟ್ಟುದುದೂ ನಿಜ. ಅದೇನೇ ಇದ್ದರೂ ಈಗ ತಾನು ಅವರನ್ನು ಬೆನ್ನಲ್ಲಿ ಇರಿಯಬಾರದು. ಈ ಕ್ಷುಲ್ಲಕ ಜೀವದ ಆಸೆಗಾಗಿ ದ್ರೋಹ ಬಗೆಯಬಾರದು.

"ನೋಡಿರಿ ಭಾಸ್ಕರರಾವ್. ಬೇಕಾದರೆ ಒಂದೆರಡು ದಿನ ವಿಚಾರ ಮಾಡಿ ಹೇಳಿರಿ. ಅಂತೂ, ನಿಮಗೆ ಸಹಾಯ ಮಾಡುತ್ತಿದ್ದ ಸಂಸ್ಥಾನಿಕರ ಹೆಸರು ಹೇಳಿದರೆ ನಿಮ್ಮನ್ನು ಬಿಟ್ಟು ಬಿಡುವೆವು!" ನ್ಯಾಯಾಧೀಶರು ಮತ್ತೆ ಹೇಳಿದರು.

ಭಾಸ್ಕರರಾಯ ತಲೆಯೆತ್ತಿ ನ್ಯಾಯಾಧೀಶರನ್ನು ದಿಟ್ಟಿಸುತ್ತ ಧೃಡ ನಿಶ್ಚಯದ ಧ್ವನಿಯಲ್ಲಿ ಹೇಳಿದ :

"ನ್ಯಾಯಾಧೀಶರು ಮನ್ನಿಸಬೇಕು. ನನ್ನ ಪ್ರಾಣ ಉಳಿಸಿಕೊಳ್ಳಲಿಕ್ಕಾಗಿ ಬೇರೆಯವರನ್ನು ಬಲಿಕೊಡುವಂಥ ನೀಚ ಮನುಷ್ಯ ನಾನಲ್ಲ. ಇಂಗ್ಲೀಷರ ವಿರುದ್ಧ ನಾನು ಬಂಡು ಹೂಡಿದ್ದು ನನ್ನ ಇಚ್ಛೆಯಿಂದಲೇ. ಯಾರ ಸಲಹೆ ಯನ್ನೂ ನಾನು ಕೇಳಲಿಲ್ಲ. ಸಹಾಯವನ್ನೂ ಕೋರಲಿಲ್ಲ."

"ರಾಮದುರ್ಗಕರರನ್ನು ಕೇಳಿದ್ದಾದರೂ ನಿಜವೋ ಅಲ್ಲವೋ ?"

"ನಿಜ. ಅವನನ್ನೊಬ್ಬನನ್ನು ಕೇಳಿದ್ದುಂಟು. ಆತ ನನ್ನ ಸ್ವಂತ ಸಹೋದರ ನಾದ್ದರಿಂದ ಕೇಳಿದೆನಷ್ಟೆ. ಆದರಾತ ಸಹಾಯ ಮಾಡಲೊಪ್ಪಲಿಲ್ಲ. ಆ ಮೇಲೆ ನಾನು ಮತ್ತೆ ಅವನಿಗೆ ಒತ್ತಾಯ ಮಾಡಲಿಲ್ಲ."

"ಕರ್ನಲ್ ಮ್ಯಾನ್‌ಸನ್ ಸಾಹೇಬರ ಕೊಲೆಯಲ್ಲಿ ಬೇರೆ ಯಾರ್ಯಾರ ಅಂಗವಿದೆ ?"

"ಅವರನ್ನು ಕೊಂದವನೂ ನಾನೇ."

"ಆಗ ನಿಮ್ಮ ಸಂಗಡ. ಯಾರ್ಯಾರು ಇದ್ದರು ?"

"ನನ್ನ ಸಂಗಡ ಯಾವಾಗಲೂ ಇರುವ ಜನರೆಲ್ಲಾ ಆಗಲೂ ಇದ್ದರು."

"ರಾಜಶೇಖರ ಎಂಬ ದಳವಾಯಿ ಆಗಲೂ ಇದ್ದನೇ ?"

ಆ ಪ್ರಶ್ನೆಗೆ ಭಾಸ್ಕರರಾಯ ಕೂಡಲೇ ಉತ್ತರವೀಯಲಿಲ್ಲ. ನ್ಯಾಯಾ ಧೀಶರು ರಾಜಶೇಖರನ ಹೆಸರನ್ನು ಪ್ರಸ್ತಾಪಿಸಲು ಏನು ಕಾರಣವಿರಬಹುದೆಂಬುದು

ಅವನಿಗೆ ಹೊಳೆಯಲಿಲ್ಲ. ಆ ಸಂದರ್ಭದಲ್ಲಿ ಮ್ಯಾನ್‌ಸನ್ನನನ್ನು ಕೊಲೆ ಮಾಡುವುದು ಸರಿಯಲ್ಲವೆಂದು ಆತ ವಾದಿಸಿದ್ದುದು, ಅದರಿಂದಾಗಿ, ಆತ ಇಂಗ್ಲೀಷರ ಗೂಢಚಾರನಾಗಿರಬಹುದೆಂದು ತಮಗೆ ಅನುಮಾನವುಂಟಾದುದು, ನರಗುಂದಕ್ಕೆ ಬಂದ ಬಳಿಕ ತಾನು ಅವನನ್ನು ಬಂಧನದಲ್ಲಿರಿಸಿದ್ದುದು–ಇದೆಲ್ಲವೂ ಭಾಸ್ಕರರಾಯನಿಗೆ ನೆನಪಾಯಿತು. ಅನಂತರ, ತಾನೂ ತನ್ನ ಜತೆಗಾರರೂ ಓಡಿಬರುವ ಗಡಿಬಿಡಿಯಲ್ಲಿ ರಾಜಶೇಖರನ ನೆನಪೂ ತಮಗೆ ಉಳಿದಿರಲಿಲ್ಲ. ಮುಂದೆ ಅವನ ಗತಿಯೇನಾಯಿತೊ? ಅವನೇ ತಪ್ಪಿಸಿಕೊಂಡು ಹೋಗಿ ಇಂಗ್ಲೀಷರನ್ನು ಸೇರಿಕೊಂಡನೊ, ಅಥವಾ ಅವರೇ ಬಂದು ಅವನನ್ನು ಬಿಡಿಸಿ ಕೊಂಡರೊ? ಆತ ಇಂಗ್ಲೀಷರ ಗೂಢಚಾರನಾಗಿದ್ದುದಾದರೂ ನಿಜವೋ ಅಲ್ಲವೊ?

"ಇದೊಂದು ಮಹತ್ವದ ಪ್ರಶ್ನೆಯಿದೆ ಭಾಸ್ಕರರಾವ್. ಈಗ ನೀವು ಕೊಡುವ ಉತ್ತರದಿಂದಲೇ ಆ ಬಡಪಾಯಿಯ ಜೀವನ ಮರಣದ ಪ್ರಶ್ನೆ ಇತ್ಯರ್ಥವಾಗಬೇಕಾಗಿದೆ."

"ಅಂದರೆ? ನನಗೆ ಅರ್ಥವಾಗಲಿಲ್ಲ."

ಭಾಸ್ಕರರಾಯನ ಬುದ್ಧಿ ಗೊಂದಲಕ್ಕೊಳಗಾಯಿತು. ರಾಜಶೇಖರನ ಬಗೆಗೆ ಏನನ್ನು ಹೇಳಬೇಕು? ಏನನ್ನು ಹೇಳಬಾರದು?

ನ್ಯಾಯಾಧೀಶರು ಮತ್ತೆ ಹೇಳಿದರು:

"ಕರ್ನಲ್ ಮ್ಯಾನ್‌ಸನ್ ಸಾಹೇಬರನ್ನು ರಾಜಶೇಖರನೆಂಬ ನಿಮ್ಮ ದಳವಾಯಿಯೆ ಕೊಂದನೆಂದು ಒಬ್ಬರು ಸಾಕ್ಷಿ ಹೇಳುತ್ತಿದ್ದಾರೆ. ಅದು ನಿಜ ವಿದ್ದರೆ ಅವನಿಗೂ ಫಾಸೀ ಶಿಕ್ಷೆಯನ್ನೆ ವಿಧಿಸಬೇಕಾಗುವುದು. ಅದಕ್ಕಾಗಿ ನಿಮ್ಮನ್ನು ಕೇಳಿ ತಿಳಿದುಕೊಳ್ಳಬೇಕೆಂದು ನಿರ್ಧರಿಸಿ ಅವನ ವಿಚಾರಣೆಯನ್ನು ತಡೆ ಹಿಡಿದಿದೇವೆ."

ತಲೆಯಲ್ಲಿನ ಗೊಂದಲವೆಲ್ಲಾ ಮಾಯವಾಗಿ ಬುದ್ಧಿಯ ಮೇಲೆ ಮತ್ತೆ ಬೆಳಕು ಹರಿದಂತಾಯಿತು. ರಾಜಶೇಖರನನ್ನೂ ಇವರು ಬಂಧಿಸಿ ವಿಚಾರಣೆ ನಡೆಸಿರುವರೆಂದ ಬಳಿಕ ಅವನು ಇವರ ಗೂಢಚಾರನಲ್ಲವೆಂದೇ ಸ್ಪಷ್ಟವಾದಂತಾ ಯಿತು. ಮೊದಲಿನಿಂದಲೂ ದೇಶ ಪ್ರೇಮಿಯಾದ ಆ ಯುವಕನ ಬಗೆಗೆ ತನಗೂ ಸಂದೇಹವಿರಲಿಲ್ಲ. ಅವನನ್ನು ಕಂಡರೆ ಅಸೂಯೆಪಟ್ಟುಕೊಳ್ಳುತ್ತಿದ್ದ ಅಲ್ಪ ಬುದ್ಧಿಯ ರಾಘೋಬನೇ ಅಂಥ ಸಂದೇಹವನ್ನು ತನ್ನ ಮನಸ್ಸಿನಲ್ಲಿ ತುಂಬಿದ್ದುದು!

ಅಂತೂ ಆ ರಾಜಶೇಖರ ದ್ರೋಹಿಯಲ್ಲ!

ಶರಣು ಬಂದ ವ್ಯಾನ್‌ಸನ್ನನನ್ನು ಬಿಟ್ಟುಬಿಡಬೇಕೆಂದು ಆತ ವಾದಿಸಿದ್ದದೂ ಅವನ ಉದಾತ್ತ ಸ್ವಭಾವಕ್ಕೆ ಸಹಜವಾಗಿದ್ದಿತೆಂದು ಈಗ ಭಾಸ್ಕರರಾಯನಿಗನಿಸಿತು. ಅಷ್ಟು ಮಾತ್ರವಲ್ಲ, ರಾಜಶೇಖರನ ಮಾತಿಗೆ ಮನ್ನಣೆಯಿತ್ತು ತಾನು ವ್ಯಾನ್‌ಸನ್ನನಿಗೆ ಜೀವದಾನ ಮಾಡಿದ್ದರೂ ಒಳ್ಳೆಯದಾಗುತಿದ್ದಿತೆಂದು ಅವನಿಗನಿಸಿತು.

"ಏನಂತೀರಿ ಭಾಸ್ಕರರಾವ್ ?" ನ್ಯಾಯಾಧೀಶರು ಮತ್ತೆ ಪ್ರಶ್ನಿಸಿದರು.

ರಾಜಶೇಖರನ ಪ್ರಾಣವನ್ನುಳಿಸಲೇಬೇಕೆಂದು ಮನಸ್ಸಿನಲ್ಲೇ ನಿಶ್ಚಯಿಸಿ ಭಾಸ್ಕರರಾಯನೆಂದ :

"ಅವನ ವಿಚಾರಣೆಯನ್ನು ತಡೆಹಿಡಿದು ಒಳ್ಳೆಯದನ್ನೇ ಮಾಡಿದಿರಿ. ಇಲ್ಲವಾದರೆ ಒಬ್ಬ ನಿರಪರಾಧಿಯನ್ನು ಶೂಲಕ್ಕೇರಿಸಿದ ಪಾಪ ನಿಮಗೆ ತಟ್ಟುತ್ತಿತ್ತು. ಕರ್ನಲ್ ವ್ಯಾನ್‌ಸನ್ನರನ್ನು ನಾನೇ ಸ್ವತಃ ಕೊಂದಿದೇನೆ. ಆ ಕೊಲೆಗೆ ಪೂರ್ಣವಾಗಿ ಜವಾಬ್ದಾರನಾಗಿರುವವನು ನಾನೊಬ್ಬನೇ. ರಾಜಶೇಖರನ ಬಗ್ಗೆ ಹೇಳುವುದೇ ಆದರೆ ಅವನು ಆ ಕೊಲೆಗೆ ಮುಂದಾಗುವದು ಹಾಗಿರಲಿ, ಕೊಲೆ ಮಾಡಬಾರದೆಂದು ವಿರೋಧ ಮಾಡಿದ್ದಾನೆ—ನನ್ನ ರೋಷವನ್ನೂ ಲೆಕ್ಕಿಸದೆ."

"ಅದೇಕೆ ? ಅವನು ಹಾಗೇಕೆ ಮಾಡಿದ ?"

"ಕರ್ನಲ್ ಸಾಹೇಬರು ಶರಣು ಬಂದಿದ್ದರು. ಶರಣು ಬಂದವರನ್ನು ಹೊಡೆಯಬಾರದೆಂಬುದು ಹಿಂದೂಧರ್ಮದ ಕಟ್ಟಳೆ. ಆ ಪ್ರಕಾರ ರಾಜಶೇಖರ ವಾದಿಸಿದ್ದ."

"ಸರಿ. ಅವನೊಬ್ಬನ ಜೀವವಾದರೂ ಉಳಿದಂತಾಯಿತು. ಆದಿರಲಿ. ಶರಣು ಬಂದವರನ್ನು ಕೊಲ್ಲಬಾರದೆಂಬ ನೀತಿ ನಿಮಗೂ ಗೊತ್ತಿರಲಿಲ್ಲವೇ ಭಾಸ್ಕರರಾವ್ ?"

"ಗೊತ್ತಿರದೇ ಏನು ? ಆದರೆ ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟದ್ದರಿಂದ ಕೊಲೆ ಆಗಿಹೋಯಿತು. ಕರ್ನಲ್ ಸಾಹೇಬರು ನನಗೊಮ್ಮೆ ಅವಮಾನ ಮಾಡಿದ್ದರು. ಅದನ್ನು ನಾನು ಮರೆತಿರಲಿಲ್ಲ.

"ಈಗಲಾದರೂ ಮರೆತಿರುವಿರೋ ಇಲ್ಲವೊ ?"

"ಆ ಕೊಲೆ ನಡೆದಾಗಲೇ ಎಲ್ಲಾ ಮರೆತುಹೋಯಿತು. ಈಗ ನಾನೂ ಅವರ ಬೆನ್ನ ಹಿಂದೆಯೇ ಹೊರಟಿದ್ದೇನೆ. ಅಲ್ಲವೆ ? ಇನ್ನೆಲ್ಲಿಯ ದ್ವೇಷ ?" ಎಂದು ನುಡಿದು ಭಾಸ್ಕರರಾಯ ಕ್ಷೀಣವಾಗಿ ನಕ್ಕ.

ನ್ಯಾಯಾಧೀಶರು ಪುನಃ ಮಾತನಾಡಲಿಲ್ಲ. ಮೊದಲೇ ಬರೆದು ಸಿದ್ಧ ಗೊಳಿಸಿದ್ದ ತೀರ್ಪನ್ನು ಓದತೊಡಗಿದರು.

ತನಗೆ ಫಾಸೀಶಿಕ್ಷೆ ವಿಧಿಸಲ್ಪಡುವುದು ಖಚಿತವೆಂದು ಮೊದಲೇ ತಿಳಿದು ಕೊಂಡಿದ್ದ ಭಾಸ್ಕರರಾಯ, ನ್ಯಾಯಾಧೀಶರು ತೀರ್ಪನ್ನು ಓದುವಾಗ ಯಾವ ಭಾವವನ್ನೂ ವ್ಯಕ್ತಗೊಳಿಸದೆ ಶಾಂತವಾಗಿ ನಿಂತುಕೊಂಡಿದ್ದ.

ಮರಣವನ್ನಿದಿರುನೋಡುತ್ತ ಆತ ಸೆರೆಮನೆಯಲ್ಲಿ ಕಳೆದ ಜೀವನದ ಅಂತಿಮ ದಿನಗಳಲ್ಲೂ ಅವನ ಮನಸ್ಸು ಅದೊಂದು ಬಗೆಯ ಅಪೂರ್ವ ಶಾಂತಿ ಯನ್ನನುಭವಿಸುತ್ತಿತ್ತು. ತಾನು ಮಾಡಿದ ಕೃತ್ಯಗಳ ಬಗೆಗೆ ಪಶ್ಚಾತ್ತಾಪ ವಿರಲಿಲ್ಲ. ಆಯುಷ್ಯ ಇಷ್ಟು ಬೇಗ ಕೊನೆಗಾಣುವುದಲ್ಲಾ ಎಂಬ ಖೇದವಿರಲಿಲ್ಲ. ತಾನು ಇಷ್ಟೇ ವರ್ಷ ಬದುಕಬೇಕೆಂದು ವಿಧಿಯ ಸಂಕಲ್ಪವಿರಬೇಕು ; ಆ ಸಂಕಲ್ಪ ದಂತೆ ಘಟನೆಗಳು ನಡೆಯುತ್ತವೆ – ಎಂದುಕೊಂಡು ಆತ ಸ್ಥಿರಚಿತ್ತದಿಂದಿದ್ದ.

ಫಾಸಿಯ ದಿನವೂ ಆತನ ಮನಸ್ಸು ಪ್ರಶಾಂತವಾಗಿಯೆ ಇತ್ತು. ಅಂದು ಸೂರ್ಯೋದಯವಾಗುವುದರ ಮೊದಲೇ ನೇಣುಗಂಬದ ಹತ್ತಿರ ಸಾಗಿಸಲಾ ಯಿತು. ತನ್ನನ್ನು ಕಡೆಯಬಾರಿಗೆ ನೋಡಲೆಂದು ಅಲ್ಲಿ ನೆರೆದ ಜನರಿಗೆ ಕೈಮುಗಿದು ವಂದಿಸುತ್ತ ಭಾಸ್ಕರರಾಯ ಮುಗುಳ್ನಗು ಬೀರುತ್ತಲೇ ನಡೆದು ಬಂದ.

"ಬಾಬಾಸಾಹೇಬಕೀ ಜೈ!" ಎಂದು ಯಾರೋ ಕೂಗಿದರು.

ಭಾಸ್ಕರರಾಯ ಅತ್ತ ದೃಷ್ಟಿ ಹೊರಳಿಸಿ ಮೂಕವಾಗಿ ಕೃತಜ್ಞತೆ ಸಲ್ಲಿಸಿದ.

ತಿವಿಗತ್ತಿಯ ಬಂದೂಕು ಹಿಡಿದುಕೊಂಡು ಆಂಗ್ಲ ಇಂಗ್ಲೀಷರು ಭಾಸ್ಕರ ರಾಯನನ್ನು ಬಳಸಿಕೊಂಡು ವರ್ತುಲಾಕಾರವಾಗಿ ನಿಂತುಕೊಂಡರು. ಆ ವರ್ತುಲದ ನಡುವೆ ಆತ ಮರೆಯಾದ ಮೇಲೂ ಜನರು ಅವನನ್ನು ನೋಡಲು ಯತ್ನಿಸುತ್ತಲೇ ಇದ್ದರು.

"ಸಮಯವಾಯಿತು ಬಾಬಾಸಾಹೇಬ್," ಎಂದನೊಬ್ಬ ಅಧಿಕಾರಿ.

"ಅಚ್ಛಾ!" ಎಂದಿಷ್ಟೆ ನುಡಿದು ಭಾಸ್ಕರರಾಯ ಗಂಭೀರವಾದ ಮುದ್ರೆ ಯಿಂದಲೇ ಫಾಸೀ ವೇದಿಕೆ ಹತ್ತಿನಿಂತು, ತನ್ನನ್ನು ದುಃಖದಿಂದ ದಿಟ್ಟಿಸುತ್ತಿದ್ದ ಜನರನ್ನು ನೋಡುತ್ತಾ ಮತ್ತೊಂದು ಬಾರಿ ನಮಸ್ಕರಿಸಿದ. ಅಧಿಕಾರಿಯೊಬ್ಬ ರಾಜಾಜ್ಞೆಯನ್ನು ಓದಿ ಹೇಳುತ್ತಲೂ ಇನ್ನೊಬ್ಬ ಅಧಿಕಾರಿ ಭಾಸ್ಕರರಾಯನನ್ನು ಕುರಿತು ಹೇಳಿದ :

"ಸಮಯವಾಯಿತು ಬಾಬಾಸಾಹೇಬ್. ದೇವರ ಪ್ರಾರ್ಥನೆ ಮಾಡುವದಿದ್ದರೆ ಮಾಡಿರಿ."

ಭಾಸ್ಕರರಾಯ ಆಕಾಶದತ್ತ ಮುಖ ತಿರುಗಿಸಿದ. ತನ್ನ ಕುಲದೇವತೆಯಾದ ವೆಂಕಟೇಶ್ವರನ ಮೂರ್ತಿಯನ್ನು ಒಳಗಣ್ಣಿನೆದುರು ತಂದುಕೊಂಡ, ಆ ಮೂರ್ತಿಗೆ ಮತ್ತೆ ಮತ್ತೆ ನಮಸ್ಕಾರ ಮಾಡುತ್ತ ಮೂಕನಾಗಿ ಬೇಡಿಕೊಂಡ :

"ನಡೆಯುವುದೆಲ್ಲಾ ನಿನ್ನ ಇಚ್ಛೆಯಂತೆಯೆ ನಡೆಯುತ್ತಿದೆ. ನನಗೇನೂ ಸಂಶಯವಿಲ್ಲ. ಈ ಲೋಕದಿಂದ ನಾನು ಹೊರಟ ಬಳಿಕ ನನ್ನನ್ನು ಬೇರೆ ಕಡೆ ಎಲ್ಲೂ ಕಳಿಸದೆ ನಿನ್ನ ಚರಣಗಳ ಬಳಿಯಲ್ಲೇ ಆಶ್ರಯ ಕೊಡು. ಇಷ್ಟೇ ನನ್ನ ಪ್ರಾರ್ಥನೆ."

ಭಾಸ್ಕರರಾಯನಿನ್ನೂ ಕೈಮುಗಿದು ನಿಂತುಕೊಂಡಿದ್ದಂತೆಯೆ ಕೊಲೆಗಡಕನೊಬ್ಬ ಅವನ ಬಳಿ ಸಾರಿ ಕಣ್ಣುಗಳಿಗೆ ಬಟ್ಟೆ ಬಿಗಿದ.

ದೂರ ನೆರೆದಿದ್ದ ಜನರು ಹಾಹಾಕಾರ ಮಾಡತೊಡಗಿದರು. ಅದುವರೆಗೂ ದುಃಖವನ್ನು ಬಿಗಿಹಿಡಿದು ನಿಂತಿದ್ದವರು ಆ ಗಳಿಗೆಯಲ್ಲಿ ಗಟ್ಟಿಯಾಗಿ ಧ್ವನಿ ತೆಗೆದು ರೋದಿಸತೊಡಗಿದರು.

ಭಾಸ್ಕರರಾಯನ ಮುಖಮುದ್ರೆ ಮಾತ್ರ ಆಗಲೂ ಗಂಭೀರವಾಗಿಯೆ ಇತ್ತು.

ಕಣ್ಣುಗಳಿಗೆ ಬಟ್ಟೆ ಬಿಗಿದಾದ ಬಳಿಕ ಅವನ ಕುತ್ತಿಗೆಗೆ ಫಾಸಿಯ ನೇಣು ಸಿಕ್ಕಿಸಿದ ಕೊಲೆಗಡಕ.

ಸನಿಯದಲ್ಲಿಯೆ ಇದ್ದ ಇನ್ನೊಬ್ಬ ಕೊಲೆಗಡಕ, ಭಾಸ್ಕರರಾಯನ ಕಾಲುಗಳ ಕೆಳಗಿನ ಹಲಗೆಯನ್ನೆಳೆದ.

ಇನ್ನೇನು ಉರುಳು ಬೀಳಬೇಕು ಅಷ್ಟರಲ್ಲಿಯೆ ಅಕಸ್ಮಾತ್ತಾಗಿ ಹಗ್ಗವೇ ಹರಿದುಹೋಯಿತು. ಕೊರಳು ಸಡಿಲಾಗಿ ಭಾಸ್ಕರರಾಯ ಮತ್ತೆ ಮೊದಲಿನಂತೆಯೆ ನಿಂತುಕೊಂಡ.

ಸುತ್ತಲೂ ನೆರೆದಿದ್ದ ಜನರು ಕ್ಷಣಕಾಲ ರೋದಿಸುವುದನ್ನು ನಿಲ್ಲಿಸಿದರು.

"ಇಂಥಾ ಪುಣ್ಯಾತ್ಮನನ್ನು ದುರ್ಮರಣಕ್ಕೊಳಗುಮಾಡಲು ಪರಮಾತ್ಮನಿಗೂ ಮನಸ್ಸಿರಲಿಕ್ಕಿಲ್ಲ, ಅದಕ್ಕೇ ಹಗ್ಗ ಹರಿಯಿತು," ಎಂದು ಒಬ್ಬರೆಂದರು.

ಹರಿದ ಹಗ್ಗದ ಬದಲು ಬೇರೊಂದು ಹಗ್ಗ ಹಾಕಿ ಭಾಸ್ಕರರಾಯನನ್ನು ಮತ್ತೆ ಏರಿಸಲಾಯಿತು.

ಏನು ಚಮತ್ಕಾರವೊ, ಆಗಲೂ ಹಗ್ಗ ಹರಿದು ಭಾಸ್ಕರರಾಯ ಉಳಿದು ಕೊಂಡ.

"ಜೀವ ಹೋಗುವವರೆಗೂ ಉರ್ಲು ಹಾಕಿ ಕೊಲ್ಲಬೇಕು ಅಂತ ಆಜ್ಞೆ ಯಿದೆ. ಮತ್ತೆ ಏರಿಸಿರಿ," ಎಂದು ಆಂಗ್ಲ ಅಧಿಕಾರಿ ಅಪ್ಪಣೆ ಮಾಡಿದ.

ಮೂರನೆಯ ಬಾರಿ ಮಾತ್ರ ಹಗ್ಗ ಹರಿಯಲಿಲ್ಲ. ಸಂಪೂರ್ಣವಾಗಿ ಉರುಳು ಬಿದ್ದು ಜೀವ ಹೊರಟುಹೋಯಿತು, ಶವ ನೇತಾಡತೊಡಗಿತು.

ಹತ್ತಿರದಲ್ಲಿಯೆ ನಿಂತು ನೋಡುತ್ತಿದ್ದ ಆಂಗ್ಲ ಡಾಕ್ಟರು ಬಂದು ಶವವನ್ನು ಪರೀಕ್ಷಿಸಿ ಹೇಳಿದರು :

"ನರಗುಂದದ ದೊರೆಯ ಕಥೆ ಮುಗಿದು ಹೋಯಿತು."

## ೨೩

ಅನೇಕ ದಿನಗಳ ಕಾಲ ಸ್ನಾನವನ್ನೂ ಮಾಡದೆ, ಮಲಿನವಸ್ತ್ರಗಳನ್ನೂ ತೆಗೆಯದೆ, ಮನಸ್ಸುಗೊಟ್ಟು ಊಟವನ್ನೂ ಮಾಡದೆ, ಮಲಗುವ ಕೊಟಡಿಯಲ್ಲಿ ಬಿದ್ದುಕೊಂಡು ದುಃಖಿಸುತ್ತಿದ್ದ ಮಲಿಕಾ ಅಂದು ಕೊಟಡಿಯಿಂದ ಹೊರಬಂದು ಎಣ್ಣೆನೀರು ಹಾಕಿಕೊಂಡಳು, ಮಲಿನವಸ್ತ್ರಗಳನ್ನು ತೆಗೆದೆಸೆದು ಮಡಿ ಬಟ್ಟೆ ಯುಟ್ಟುಕೊಂಡಳು. ಅನಂತರ ಅದೇ ದಿನವೆ ಕೊಳದಿಂದ ಬಂದಿದ್ದ ಕಮಲಪುಷ್ಪ ವೊಂದನ್ನು ಮುಡಿಯಲ್ಲಿರಿಸಿಕೊಂಡು ತಾಯಿಯೊಡನೆ ಕುಳಿತು ನಗುನಗುತ್ತಾ ಊಟ ಮಾಡಿದಳು.

ಮಗಳ ಮನೋವೃತ್ತಿಯಲ್ಲಾದ ಈ ಬದಲಾವಣೆಯನ್ನು ಕಂಡು ಕೌತುಕ ಪಟ್ಟುಕೊಳ್ಳುತ್ತ ತಾಯಿಯೆಂದಳು :

"ನನ್ನ ಎದೆಯ ಮೇಲಿನ ಭಾರವೊಂದು ಇಳಿದಂತಾಯಿತವ್ವಾ. ನಿನಗೇನು ರೋಗ ಬಡಿದುಕೊಂಡಿತೋ ಅಂತ ಗಾಬರಿಯಾಗಿದ್ದೆ."

ತನಗೆ ಅಂಟಿಕೊಂಡಿದ್ದ ರೋಗದ ಸ್ವರೂಪವನ್ನು ನೆನೆಯುತ್ತಾ ಮಗಳು ಮಂದಹಾಸ ಬೀರಿದಳು. ರಾಜಶೇಖರನ ಜೀವಕ್ಕೇನಾದರೂ ಅಪಾಯವಾಗಿದ್ದಲ್ಲಿ ಆ ರೋಗವೂ ತನ್ನನ್ನು ಬಿಡುತ್ತಿರಲಿಲ್ಲ. ಆ ವ್ಯಥೆಯಲ್ಲಿಯೆ ಕೊರಗಿ ಸೊರಗಿ ತಾನೂ ಅವನ ಹಾದಿಯನ್ನೆ ಹಿಡಿದು ಹೊರಡುವಂತಾಗುತ್ತಿತ್ತು.

ಆದರೆ, ದೇವರು ಒಳ್ಳೆಯವನು. ತನ್ನನ್ನೂ ಉಳಿಸಿದ, ತನ್ನ ಪ್ರಿಯಕರ ನನ್ನೂ ಉಳಿಸಿದ. ಮೃತ್ಯುವಿನ ದವಡೆಯಲ್ಲಿ ಸಿಕ್ಕಿಕೊಂಡಿದ್ದರೂ ಕೊನೆಯ ಗಳಿಗೆ ಯಲ್ಲಿ ದೇವರ ದಯೆಯಿಂದ ಪಾರಾಗಿ ಬಂದ ರಾಜಶೇಖರ. ಅವನನ್ನು ತೀರಿ ಸಿಯೇ ಬಿಡಬೇಕೆಂದು ಆ ನೀಚ ಕೃಷ್ಣಾಜಿಯೂ ಆ ಚಂಡಾಲ ಬನ್ಯಾಬಾಪುವೂ ಎಷ್ಟು ಯತ್ನಿಸಿದರೂ ಅವರ ಆಟ ನಡೆಯಲಿಲ್ಲ. ನಿರಪರಾಧಿಯನ್ನು ನೇಣು ಹಾಕುವುದಿಲ್ಲನಾಗಿ ಹೇಳಿ ಇಂಗ್ಲೀಷರು ಅವನನ್ನು ಮುಕ್ತಗೊಳಿಸಿದ್ದರು. ಸೆರೆ ಮನೆಯಿಂದ ಹೊರಬಂದ ತಕ್ಷಣವೇ ಆತ ತನ್ನಲ್ಲಿಗೆ ಧಾವಿಸಿ ಬಂದು, ಯಾರಿಗೂ ಗೊತ್ತಾಗದಂತೆ ಗುಪ್ತವಾದ ರೀತಿಯಲ್ಲಿ ಭೆಟ್ಟಿಯಾಗಿ ಹೋಗಿದ್ದ. ಅವನು ಬಂದು ಹೋದ ಸಂಗತಿ ತಾಯಿಗೂ ತಿಳಿಯದು, ದಾಸಿಯರಿಗೂ ತಿಳಿಯದು. ಅಂತೆಯೆ, ಇಂದಿನ ತನ್ನ ವರ್ತನೆ ಇವರನ್ನು ಆಶ್ಚರ್ಯಕ್ಕೀಡುಮಾಡಿದೆ.

ಮಗಳು ಸಂತೋಷವಾಗಿದ್ದ ಸಂಧಿ ಸಾಧಿಸಿ ತಾಯಿ ತನ್ನ ನಿತ್ಯರಾಗವನ್ನೆ ಮತ್ತೆ ಆರಂಭಿಸಿದ್ದಳು:

" ಕಾರಭಾರಿಗಳು ಪ್ರತಿದಿನವೂ ಬಂದು ಹೋಗುವದೇ ಆಯಿತಲ್ಲ ಮಲಿಕಾ? ಇಷ್ಟು ದಿನ ಮೈಯಲ್ಲಿ ಸರಿಯಿರಲಿಲ್ಲವೆಂದು ಅವರೂ ಒತ್ತಾಯ ಮಾಡಲಿಲ್ಲ. ಈಗ ನಿನಗೆ ನೆಟ್ಟಗಾದದ್ದಂತೂ ಆಯಿತು...."

"ಆಯಿತು. ನಿಜ. ಆದರೆ ಈಗಲೂ ಆ ಪಿತೂರಿ ನಾಯಿಯ ಮೋರೆ ನೋಡಲು ನನಗೆ ಮನಸ್ಸಿಲ್ಲ," ಎಂದು ಮಲಿಕಾ ಸ್ಪಷ್ಟವಾಗಿ ಹೇಳಿದಳು.

ಮಗಳು ಊಟ ಮುಗಿಸಿ ಏಳುವವರೆಗೂ ಸುಮ್ಮನಿದ್ದು ಅನಂತರ ತಾಯಿ ಮತ್ತೆ ವಾದಿಸತೊಡಗಿದಳು.

"ಪಿತೂರಿ ನಾಯಿ ಗೀಯಿ ಅಂತ ಅವರನ್ನು ಬೈಯಬಾರದು ಮಲಿಕಾ. ಅವರಿಂದ ನಮಗೆಷ್ಟು ಉಪಕಾರವಾಯ್ತು ಅನ್ನುವದನ್ನು ಮರೆಯಬಾರದು ಅವರಿದ್ದರೆಂದೇ ನಮ್ಮ ಮನೆ ಉಳಿಯಿತು, ಜೀವ ಉಳಿದವು, ಬದುಕು ಉಳಿ ಯಿತು. ಆ ವೆಂಕಾಸಾನಿಯ ಗತಿಯೇನಾಯಿತು ಗೊತ್ತಿಲ್ಲವೆ? ಲಕ್ಷಾಂತರ ರೂಪಾಯಿ ಗಳಿಸಿದ್ದಳಲ್ಲ – ಎಲ್ಲಾ ಲೂಟಿಯಾಯಿತು. ಅವಳೂ ಊರು ಬಿಟ್ಟು ಓಡಿಹೋಗಬೇಕಾಯಿತು."

" ನಮಗೂ ಅಂಥ ಸ್ಥಿತಿ ಬಂದಿದ್ದರೆ ನಾನೇನು ದುಃಖಿಸುತ್ತಿರಲಿಲ್ಲ."

" ನಿನಗ್ಯಾಕೆ ದುಃಖವಾದೀತು ಹೇಳು! ನಿನಗಿನ್ನೂ ವಯಸ್ಸಿದೆ, ರೂಪವಿದೆ.

ಮತ್ತೆ ಗಳಿಸಬಲ್ಲೆ. ನಾನು ಮಾತ್ರ ಈ ಮುದಿ ವಯಸ್ಸಿನಲ್ಲಿ ಎಲ್ಲಾ ಕಳೆದು ಕೊಂಡಿದ್ದರೆ ಮಂಗ ಆಗಿ ಕೂಡಬೇಕಾಗುತಿತ್ತು."

"ನಾನಿರುವವರೆಗೆ ನೀನೇನು ಚಿಂತಿಸಬೇಕಾಗಿಲ್ಲವಲ್ಲ ಅವ್ವಾ? ಹೊಲದಲ್ಲಿ ಕೂಲಿ ಕುಂಬಳಿ ಮಾಡಿಯ್ಯಾದರೂ ನಿನ್ನನ್ನು ಸುಖದಿಂದ ಇಡಬಲ್ಲೆ."

"ಏನು ಕೂಲಿ ಕುಂಬಳಿಯ ಮಾತೋ ಬಿಡವ್ವಾ. ನಿನಗ್ಯಾಕೋ ಇತ್ತಿತ್ತಲಾಗಿ ಹುಚ್ಚೇ ಹಿಡಿದ ಹಾಗಿದೆ. ಸಂನ್ಯಾಸಿನಿಯರಂತೆ ಮಾಡುತಾ ಇದ್ದೀಯೆ."

"ಹೌದವ್ವಾ, ಅದೂ ನಿಜ," ಎಂದಳು ಮಲಿಕಾ. ಕೆಲವು ದಿನಗಳಿಂದೀಚೆಗೆ ಆಕೆಯ ಅಂತರಂಗದಲ್ಲಿ ಅದ್ಭುತವಾದ ಬದಲಾವಣೆಯಾಗಿದ್ದುದೂ ನಿಜವೇ ಆಗಿತ್ತು. ರಾಜಶೇಖರನನ್ನು ಫಾಸಿಗೇರಿಸುವರೆಂಬ ವದಂತಿ ಹರಡಿದ ದಿನಗಳಲ್ಲಿ ಅವಳು ಇಹಲೋಕದ ಆಸೆಯನ್ನೆ ತ್ಯಜಿಸಿಬಿಟ್ಟಿದ್ದಳು. ಅವನಿಲ್ಲದ ಸಂಸಾರವೆಂದರೆ ಶ್ಮಶಾನವೆಂದೇ ಅವಳಿಗನ್ನಿಸಿತ್ತು. ಈ ಮನೆ, ಈ ಊರು, ಈ ಜನ, ಎಲ್ಲವೂ ಬೇಡವಾಗಿತ್ತು. ಇಷ್ಟು ದಿನಗಳ ಕಾಲ ತಾನು ನಡಸಿದ ಜೀವನದ ಬಗೆಗೆ ತಿರಸ್ಕಾರವುತ್ಪನ್ನವಾಗಿತ್ತು.

"ಸಂನ್ಯಾಸಿನಿಯರ ಜೀವನ ನಮ್ಮಷ್ಟು ಕೆಟ್ಟದೇನೂ ಅಲ್ಲವಲ್ಲ ಅವ್ವಾ?"

ತಾಯಿ ದಿಗಿಲುಗೊಂಡಳು ಆ ಪ್ರಶ್ನೆಯಿಂದ. ಹೊಸ ಭೀತಿಯೊಂದು ಅವಳನ್ನು ಕಾಡತೊಡಗಿತು. ತನ್ನ ಮಗಳು ಸಂನ್ಯಾಸಿನಿಯೇ ಆಗಿ ಮನೆ ಬಿಟ್ಟು ಹೊರಟುಹೋಗಬಹುದೋ ಏನೊ. "ದೇವರೇ! ಇವಳ ಮನಸ್ಸನ್ನು ಮೊದಲಿನಂತೆಯೇ ಮಾಡು. ಈ ವೃದ್ಧಾಪ್ಯದಲ್ಲಿ ನನ್ನನ್ನು ಅನಾಥಳನ್ನಾಗಿ ಮಾಡಬೇಡ!" ಎಂದು ಆಕೆ ಮನಸ್ಸಿನಲ್ಲಿಯೆ ಪ್ರಾರ್ಥಿಸಿದಳು.

ಅಂದು ರಾತ್ರಿ ಬಂದು ಹೋಗಬಹುದೆಂದು ಕೃಷ್ಣಾಜಿಗೆ ಸಂದೇಶ ಹೋಯಿತು – ಮಲಿಕಳಿಗೆ ತಿಳಿಯದಂತೆ.

ಬಹಳ ದಿನಗಳ ಕಾಲ ತಡೆದಿದ್ದ ಕೃಷ್ಣಾಜಿ ಅಂದು ಚೆನ್ನಾಗಿ ಸಿಂಗರಿಸಿಕೊಂಡು, ಲೂಟಿಯ ಕಾಲಕ್ಕೆ ಸಿಕ್ಕಿದ್ದ ಬಹುಮೂಲ್ಯ ಆಭರಣಗಳನ್ನು ಮಲಿಕಾಗೆ ಅರ್ಪಿಸಲೆಂದು ಜತೆಯಲ್ಲಿ ಕೊಂಡು ಎರಡು ತಾಸು ರಾತ್ರಿಯಾದ ಬಳಿಕ ಅವಳ ಮನೆಗೆ ಬಂದ.

ರಾತ್ರಿಯೂಟ ಮುಗಿಸಿ ವೀಳೆಯವನ್ನು ಮೆಲ್ಲುತ್ತಾ ಮಲಿಕಾ ಕೂಡ ಕಾದು ಕುಳಿತಿದ್ದಳು. ಅಂದು ಮಧ್ಯರಾತ್ರಿಯ ಸಮಯಕ್ಕೆ ಮನೆಗೆ ಬರುವುದಾಗಿ ರಾಜ

ಶೇಖರ ಹೇಳಿಹೋಗಿದ್ದ. ಉಷಃಕಾಲದ ಸಮಯಕ್ಕೆ ಇಬ್ಬರೂ ಕೂಡಿ ಮನೆ ಬಿಟ್ಟು ಹೊರಟು ನರಗುಂದಕ್ಕೆ ಕೊನೆಯ ನಮಸ್ಕಾರ ಹೇಳಿ, ಕಿತ್ತೂರಿನ ಹತ್ತಿರದ ಹಳ್ಳಿಯೊಂದಕ್ಕೆ ಪಯಣ ಬೆಳೆಸುವುದೆಂದು ನಿಶ್ಚಿತವಾಗಿತ್ತು.

"ಅಗಸೆ ಬಾಗಿಲಲ್ಲಿ ನಮ್ಮನ್ನಾರೂ ತಡೆಯಲಿಕ್ಕಿಲ್ಲವಷ್ಟೆ ?" ಎಂದು ಮಲಿಕಾ ಪ್ರಶ್ನಿಸಿದ್ದಳು.

"ಕಾವಲುಗಾರರೂ ನನ್ನ ಗುರುತಿನವರೇ ಇದ್ದಾರೆ. ಅವರು ನಮಗೇನೂ ಮಾಡುವುದಿಲ್ಲ," ಎಂದು ರಾಜಶೇಖರ ಹೇಳಿದ್ದ.

ಹಳ್ಳಿಗೆ ಹೋಗಿ ಮಾಡುವುದೇನನ್ನು ? ಜೀವನ ಸಾಗಿಸುವುದು ಹೇಗೆ? ಎಂಬ ಪ್ರಶ್ನೆಗಳು ಅವಳನ್ನು ಕಾಡಿಸಿರಲಿಲ್ಲ. ರಾಜಶೇಖರನ ಪೌರುಷದಲ್ಲಿ ಅವಳಿಗೆ ಗಾಢವಿಶ್ವಾಸನಿತ್ತು. ಆತ ಎಲ್ಲಿಯೇ ಇದ್ದರೂ ಏನನ್ನಾದರೂ ಮಾಡಬಲ್ಲ, ಸಂಸಾರ ಸಾಗಿಸಬಲ್ಲ ಎಂಬ ನಂಬುಗೆಯಿತ್ತು.

"ಬಲಗೈಯೇನೋ ಹೋಯಿತು. ಚಿಂತೆಯಿಲ್ಲ. ಎಡಗೈಯಾದರೂ ಉಳಿದಿದೆಯಲ್ಲ ಮಲಿಕಾ. ಇದೊಂದು ಕೈಯಿಂದಲೇ ಏನು ಬೇಕಾದ್ದು ಮಾಡಬಹುದು," ಎಂದಿದ್ದ ರಾಜಶೇಖರ.

"ನನಗಾದರೂ ಏನಾಗಿದೆ ? ನಾನೂ ಗಟ್ಟಿಮುಟ್ಟಾಗೇ ಇದೇನಲ್ಲ ? ನಿಮ್ಮ ಜತೆ ನಾನೂ ದುಡೀಬಲ್ಲೆ," ಎಂದು ನುಡಿದಿದ್ದಳು ಮಲಿಕಾ.

"ಇಷ್ಟು ವರ್ಷ ಐಷಾರಾಮದಲ್ಲಿ ದಿನಗಳೆದ ನಿನ್ನಿಂದ ಕಾಯಕಷ್ಟದ ಕೆಲಸ ಹೇಗಾದೀತು ?" ಎಂದು ಆತ ಶಂಕಿಸಿದ್ದ.

"ಸುಡಿರಿ ಈ ಐಷಾರಾಮವನ್ನು ! ಈ ಹೊಲಸು ಬಾಳಿಗಿಂತ ಕೂಲಿಯಾಗಿ ದುಡಿದು ತಿನ್ನುವದೇ ಮೇಲು."

"ಭೇಷ್ ! ಭೇಷ್ !" ಎನ್ನುತ್ತಾ ರಾಜಶೇಖರ ಅವಳ ಬೆನ್ನು ಚಪ್ಪರಿಸಿದ್ದ, ಅಭಿಮಾನದಿಂದ.

ಈಗ, ಅವನ ಮಾತುಗಳನ್ನು ಮತ್ತೆ ನೆನೆಯುತ್ತಾ ಮಲಿಕಾ ಉಲ್ಲಸದಿಂದ ಕಾದು ಕುಳಿತಿದ್ದಳು.

ರಾಜಶೇಖರನ ಜತೆಯಲ್ಲಿ ಹೊರಟುಹೋಗುವ ಯೋಚನೆಗೆ ತಾಯಿಯ ಅನುಮತಿ ಸಿಕ್ಕುವುದು ಅಸಂಭವವೆಂಬುದಂತೂ ತಿಳಿದಹಾಗೇ ಇತ್ತು. ಅಂತೆಯೆ, ತಾಯಿಯ ಹತ್ತಿರ ಈ ವಿಷಯವನ್ನೆ ಪ್ರಸ್ತಾಪಿಸಕೂಡದೆಂದು ಆಕೆ ಮೊದಲೇ ಗೊತ್ತುಮಾಡಿಕೊಂಡಿದ್ದಳು. ವೃದ್ಧಳಾದ ತಾಯಿಯೊಬ್ಬಳನ್ನೆ ಬಿಟ್ಟು ಹೋಗ

ಬೇಕಲ್ಲಾ ! ಎಂದು ಅವಳ ಕರುಳೂ ಕುದಿಯುತ್ತಿತ್ತು. ಆದರೂ ಬೇರೆ ಮಾರ್ಗ ವಿರಲಿಲ್ಲ. ತನ್ನ ವಿಚಾರ ತಾಯಿಗೆ ಹಿಡಿಸದು, ತಾಯಿಯ ವಿಚಾರ ತನಗೆ ರುಚಿಸದು. ಕೃಷ್ಣಾಜಿಯ ಸೂಳೆಯಾಗಿ ಬದುಕುವುದಕ್ಕಿಂತ ಮರಣವೇ ಲೇಸೆಂದು ತನಗೆನ್ನಿಸಿ ದರೆ, ವೇಶ್ಯೆಯರಾದ ತಮಗೆ ಇಂಥ ಬದುಕು ಅನಿವಾರ್ಯವೆಂದೇ ತಾಯಿಗನ್ನಿಸು ತ್ತಿತ್ತು. ಪರಸ್ಪರ ವಿರುದ್ಧವಾದ ಈ ವಿಚಾರಗಳಲ್ಲಿ ಸಾಮರಸ್ಯ ಸಾಧ್ಯವಿರಲಿಲ್ಲ. ಇಂದಿಲ್ಲ ನಾಳೆಯಾದರೂ ತಾನು ತಾಯಿಯನ್ನು ಬಿಟ್ಟು ಹೊರಡಲೇಬೇಕಾದುದು ಅಪರಿಹಾರ್ಯವಾಗಿತ್ತು. ಅಂತೆಯೇ ಮನಸ್ಸನ್ನು ಗಟ್ಟಿಗೊಳಿಸಿ ಈಗಲೇ ಹೊರಡು ವುದಾಗಿ ನಿರ್ಧರಿಸಿಯಾಗಿತ್ತು.

ತಾಯಿಯ ಶೇಷಾಯುಷ್ಯದ ಬಗೆಗೂ ಮಲಿಕಾಗೆ ಚಿಂತೆಯಿರಲಿಲ್ಲ. ಆಕೆ ನೂರು ವರ್ಷ ಕುಳಿತು ತಿಂದರೂ ಮುಗಿಯದಷ್ಟು ಸಂಪತ್ತು ಮನೆಯಲ್ಲಿರುವಾಗ ಚಿಂತಿಸಲು ಕಾರಣವೇ ಇರಲಿಲ್ಲ.

ನಾಲ್ಕಾರು ಒಡವೆಗಳ ಹೊರತು ತಾನು ಈ ಮನೆಯಿಂದ ಇನ್ನೇನನ್ನೂ ಒಯ್ಯಬಾರದೆಂದೇ ಮಲಿಕಾ ನಿರ್ಧರಿಸಿದ್ದಳು.

ಈಗ, ರಾಜಶೇಖರನ ಆಗಮನವನ್ನಿದಿರುನೋಡುತ್ತ ಕುಳಿತಿದ್ದ ಹಾಗೆ ಆಕೆ ತನ್ನ ಆಭರಣಗಳ ಪೆಟ್ಟಿಗೆ ತೆಗೆದು, ಒಯ್ಯಬೇಕೆಂದಿದ್ದ ಒಡವೆಗಳನ್ನು ಮೈಮೇಲಿಟ್ಟುಕೊಂಡಳು. ನಾಲ್ಕಾರು ಸೀರೆ ಕುಬಸಗಳನ್ನು ಕೂಡಿಸಿ ಪುಟ್ಟ ದೊಂದು ಗಂಟನ್ನೂ ಕಟ್ಟಿದಳು.

ಪ್ರಯಾಣದ ಸಿದ್ಧತೆ ಮುಗಿಸಿ ಅವಳು ಮಂಚದ ಮೇಲೆ ಪವಡಿಸುತ್ತಿ ದ್ದಂತೆಯೆ ಕೊಟಡಿಯ ಬಾಗಿಲು ಕಿರ್ರೆಂದಿತು.

ಮಧ್ಯರಾತ್ರಿಯಂತೂ ಇನ್ನೂ ಆಗಿರಲಿಲ್ಲ. ಗೊತ್ತುಪಡಿಸಿದ ಸಮಯಕ್ಕಿಂತ ಸ್ವಲ್ಪ ಮೊದಲೇ ಬಂದನೇನೋ ತನ್ನ ಪ್ರಿಯಕರ – ಎಂದುಕೊಳ್ಳುತ್ತಾ ಆಕೆ ಮತ್ತೆ ಮೇಲಕ್ಕೆದ್ದು ಬಾಗಿಲಿನತ್ತ ದೃಷ್ಟಿ ತಿರುಗಿಸಿದಳು. ಅಲ್ಲಿ, ಮೀಸೆಗೆ ಕಪ್ಪು ಬಣ್ಣ ಹಚ್ಚಿಕೊಂಡು ರೇಶಿಮೆಯ ನಿಲುವಂಗಿ ಧರಿಸಿ, ಬೆಳ್ಳಿಯ ಬೆತ್ತ ಹಿಡಿದು ಕುಲುಕುಲು ನಗುತ್ತಾ ನಿಂತಿದ್ದ ಕೃಷ್ಣಾಜಿ ಕಾಣಿಸುತ್ತಲೂ ಅವಳ ಮುಖದ ಮೇಲಿನ ಉಲ್ಲಾಸ ಜರ್ರನೆ ಇಳಿದುಹೋಯಿತು.

ಬಾಗಿಲನ್ನು ಮುಚ್ಚಿ ಕೃಷ್ಣಾಜಿ ಒಂದೊಂದೇ ಹೆಜ್ಜೆಯಿಡುತ್ತಾ ಅವಳ ಬಳಿ ಬಂದ. ಅವನು ನಡೆದು ಬರುವುದನ್ನೇ ನೋಡುತ್ತಾ ಅವಳು ಸ್ತಬ್ಧವಾಗಿ ನಿಂತು ಕೊಂಡಿದ್ದಳು. ಇಷ್ಟು ಬೇಗ ಈ ಪೀಡೆ ವಕ್ರಿಸಬಹುದೆಂದು ಆಕೆ ನಿರೀಕ್ಷಿಸಿರಲಿಲ್ಲ.

ಅಂತೆಯೆ, ಕೃಷ್ಣಾಜಿಯ ಅನಿರೀಕ್ಷಿತ ಆಗಮನದಿಂದ ಆಕೆ ಗೊಂದಲದಲ್ಲಿ ಸಿಲುಕಿ ಕೊಂಡಿದ್ದಳು. ಅವನಿಗೆ ವೈಯೊಪ್ಪಿಸುವ ಮಾತಂತೂ ದೂರವೆ ಉಳಿಯಿತು, ಅವನೊಡನೆ ಮಾತನಾಡುವ ಮನಸ್ಸು ಕೂಡ ಆಕೆಗಿರಲಿಲ್ಲ.

ಅವಳ ಸಂಗಸುಖ ದೊರಕಿಸುವ ನಿರ್ಧಾರದಿಂದಲೇ ಕೃಷ್ಣಾಜಿ ಅಲ್ಲಿಗೆ ಬಂದುದು ಸ್ಪಷ್ಟವಾಗಿತ್ತು. ತನ್ನ ತಾಯಿಯೇ ಅವನಿಗೆ ಹೇಳಿಕಳಿಸಿ ಅವನನ್ನು ಬರಮಾಡಿಕೊಂಡಿರಲು ಸಾಕು. ಕೊಟಡಿಯ ಹೊರಗೆ, ಬಾಗಿಲಿನ ಬಳಿಯಲ್ಲಿಯೆ ಆಕೆಯೂ ಕಾವಲು ನಿಂತುಕೊಂಡಿರಬಹುದು.

ಏನು ಮಾಡುವುದು ? ಈಗ ಹೇಗೆ ಪಾರಾಗುವುದು ?

ಮತ್ತೂ ಸಮೀಪಕ್ಕೆ ಬಂದ ಕೃಷ್ಣಾಜಿ. ಅವನ ಚಿಕ್ಕ ಮುಖದ ಮೇಲೆ ಆಗಲೂ ರಸಿಕತೆಯ ನಗು ನಲಿಯುತ್ತಲೇ ಇತ್ತು. ಈ ದಿನ ಮಲಿಕಾ ತನ್ನನ್ನು ಆದರದಿಂದ ಸ್ವಾಗತಿಸುವುದು ಖಂಡಿತವೆಂದೇ ಭಾವಿಸಿ ಆತ ಅಲ್ಲಿಗೆ ಧಾವಿಸಿ ಬಂದಿದ್ದ. ಮಗಳು ಪ್ರಸನ್ನಳಾಗಿರುವಳೆಂದು ಅವಳ ತಾಯಿಯೂ ಹೇಳಿಕಳಿಸಿರ ಲಿಲ್ಲವೆ ? ದೀಪದ ಬೆಳಕಿನಲ್ಲಿ ಸೂರ್ಯನಂತೆ ಥಳಥಳಿಸುವ ವಜ್ರವೈಢೂರ್ಯಗಳ ಆಭರಣಗಳನ್ನು ಅರ್ಪಿಸಿದ ತರುವಾಯವಂತೂ ಮಲಿಕಾ ತನ್ನನ್ನು ಪ್ರೇಮದಿಂದ ಅಪ್ಪಿಕೊಳ್ಳಬಹುದು. ವೇಶ್ಯಾಮಣಿಯರ ಒಲವನ್ನು ಸಂಪಾದಿಸಿರುವ ರಹಸ್ಯ ತನಗೆ ತಿಳಿಯದೇ ?

ಹಾಗೆ ಯೋಚಿಸುತ್ತ, ಆತ್ಮವಿಶ್ವಾಸಪೂರಿತನಾಗಿ ಅಲ್ಲಿಗೆ ಬಂದಿದ್ದ ಕೃಷ್ಣಾಜಿ ಆಕೆಯ ಶೀತಲ ವರ್ತನೆಯನ್ನು ಕಂಡೊಡನೆಯೆ ನಿರುತ್ಸಾಹಿಯಾದ. ತನ್ನ ನಗು ವನ್ನು ನೋಡಿ ಅವಳು ನಗಲಿಲ್ಲ, ತನ್ನನ್ನು ಕರೆಯೂ ಇಲ್ಲ, ಕುಳಿತಿರುವಂತೆ ಕೇಳಿ ಕೊಳ್ಳಲೂ ಇಲ್ಲ. ಹಿಂಸ್ರಪಶುವೊಂದನ್ನು ದಿಟ್ಟಿಸುವಂತೆ ತನ್ನನ್ನೂ ದಿಟ್ಟಿಸಿ ನೋಡುತ್ತಿದಾಳೆ. ಇವೆಲ್ಲದರ ಅರ್ಥವೇನು ಹಾಗಾದರೆ? ಇವಳಿಂದು ಪ್ರಸನ್ನ ಳಾಗಿರುವಳೆಂದು ಇವಳ ತಾಯಿ ತಿಳಿದುಕೊಂಡದ್ದೇ ತಪ್ಪಾಗಿರಬೇಕು. ಅಥವಾ... ಅಥವಾ....

ಮುನ್ನಾದಿನ ಬಿಡುಗಡೆ ಹೊಂದಿದ ರಾಜಶೇಖರನಾದರೂ ರಾತ್ರಿ ಬಂದು ಇವಳನ್ನು ಕಂಡು ಹೋಗಿರಬಹುದೇ ? ಇವಳಿಂದು ಸಂತೋಷವಾಗಿರಲು ಅವನ ಸಹವಾಸವೇ ಕಾರಣವಾಗಿರಬಹುದೇ ?

ಯಾರಿಗೆ ಗೊತ್ತು ! ಇವಳ ತಾಯಿಯೂ ಆ ಸಮಾಚಾರವೆತ್ತಲಿಲ್ಲ.

ಇವರ ಮನೆಯೆದುರು ಈಗ ಕಾವಲೂ ಇಲ್ಲದಿರುವುದರಿಂದ ಇಲ್ಲಿಗೆ ಬಂದು ಹೋಗು ವವರ ವಿಚಾರ ತನಗೆ ತಿಳಿಯುವಂತೆಯೂ ಇಲ್ಲ....

ಹಾಗೆ ಯೋಚಿಸುತ್ತಾ ಕೃಷ್ಣಾಜಿ ಮಾತನಾಡಿದ:

"ಏನು ಮಲಿಕಾ, ಈಗ ನಿನಗೆ ಪೂರಾ ನೆಟ್ಟಗಾಯಿತಲ್ಲವೆ? ಆಯಿತೆಂಬ ಸುದ್ದಿ ಕೇಳಿಯೆ ನಾನು ಬಂದೆ."

ಆಗಲೂ ಆಕೆ ಬಾಯಿ ತೆರೆಯಲಿಲ್ಲ. ಮಂಚದ ಭುಜಕ್ಕೊರಗಿ ನಿಂತು ಕೊಂಡಿದ್ದಂತೆಯೇ ಅವನನ್ನು ಮೌನವಾಗಿ ದಿಟ್ಟಿಸುತ್ತಿದ್ದಳು—

"ಹೀಗ್ಯಾಕೆ ಅಪರಿಚಿತರನ್ನು ನೋಡುವಂತೆ ನೋಡುತ್ತೀ ಮಲಿಕಾ? ನಾನೇನು ವೇಷ ಕಟ್ಟಿಕೊಂಡು ಬಂದಿದೇನೆಯೆ?" ಎಂದ ಕೃಷ್ಣಾಜಿ, ಅವಳ ನಗೆ ಯನ್ನು ಕೆರಳಿಸಲು ಯತ್ನಿಸುತ್ತ.

ಆದರೆ, ಆಕೆಗೆ ನಗು ಬರಲಿಲ್ಲ. ಅಣಕದ ಧ್ವನಿಯಲ್ಲಿ ಅವಳು ಹೇಳಿದಳು:

"ವೇಷ ಕಟ್ಟಿಕೊಂಡು ಬಂದಿರುವಿರೋ ಇಲ್ಲವೋ ಎಂಬುದು ಕನ್ನಡಿ ನೋಡಿಕೊಂಡರೆ ತಿಳಿಯಬಹುದು."

ಅಂಥ ಮಾತು ಆಡಿ ಆಕೆ ತನ್ನ ಅವಮಾನ ಮಾಡಿದಳೆಂದೇ ಕೃಷ್ಣಾಜಿ ಗನ್ನಿಸಿತು. ಆಸನವೊಂದರಲ್ಲಿ ದೇಹ ಚೆಲ್ಲುತ್ತಾ ಆತನೆಂದ:

"ನಿನ್ನನ್ನು ಕಂಡರೆ ನನಗೆಷ್ಟು ಪ್ರೀತಿಯಿದೆ ಮಲಿಕಾ! ನೀನು ಮಾತ್ರ ಇಂಥ ಒರಟು ಮಾತು ಆಡುತ್ತೀಯಲ್ಲ?"

"ತಾವು ತಿರಸ್ಕರಿಸುವ ಗಂಡಸರಿಗೆ ಸ್ತ್ರೀಯರು ಯಾವಾಗಲೂ ಆಡುವದು ಒರಟು ಮಾತುಗಳನ್ನೇ."

"ನೀನ್ಯಾಕೆ ನನ್ನನ್ನು ತಿರಸ್ಕರಿಸಬೇಕು ಅಂತೀನಿ."

"ಯಾಕೆಂಬುದನ್ನು ಮತ್ತೆ ಹೇಳುವದರಲ್ಲಿ ಏನು ಅರ್ಥವಿದೆ?"

"ನಾನು ಪಿತೂರಿ, ಮನೆಮುರುಕ, ದ್ರೋಹಿ ಅಂತ ನೀನು ನನ್ನನ್ನು ತಿರಸ್ಕರಿಸುತ್ತಿದ್ದರೆ ಅದು ಕೇವಲ ಅವಿವೇಕ. ಈ ಹಿಂದೂದೇಶದಲ್ಲಿ ನನ್ನಂಥವರು ಲಕ್ಷಾಂತರ ಜನರಿದ್ದಾರೆ. ರಾಜಕಾರಣದಲ್ಲಿ ಮುಂದೆ ಬರಬೇಕಾದರೆ ಇಂಥದೆಲ್ಲಾ ಮಾಡಲೇಬೇಕಾಗುತ್ತದೆ. ನರಗುಂದದ ದೊರೆಗಳೂ ಒಂದು ಕಾಲಕ್ಕೆ ತಮ್ಮ ಯಜಮಾನರಾದ ಪೇಶವೆಯವರಿಗೆ ದ್ರೋಹ ಬಗೆದು ಇಂಗ್ಲೀಷರಿಗೆ ಸಹಾಯ ಮಾಡಿ ತಮ್ಮ ಗಾದಿ ಉಳಿಸಿಕೊಂಡಿದ್ದರೆಂಬ ವಿಷಯ ನಿನ್ನಂಥವಳಿಗೆ ಹ್ಯಾಗೆ ಗೊತ್ತಾದೀತು?"

"ನಿಮ್ಮಂಥ ದೊಡ್ಡ ಮನುಷ್ಯರಿಗೆ ಗೊತ್ತಿದ್ದಷ್ಟು ನನ್ನಂಥ ಅಲ್ಪ ಜೀವಿಗಳಿಗೆ ಹ್ಯಾಗೆ ಗೊತ್ತಾಗಬೇಕು ಬಿಡಿರಿ. ನಿಮ್ಮ ದ್ರೋಹವನ್ನು ಮುಚ್ಚಿಕೊಳ್ಳಲಿಕ್ಕಾಗಿ ಇನ್ನೊಬ್ಬರ ದ್ರೋಹವನ್ನು ಮುಂದೆ ಮಾಡುತ್ತೀರಲ್ಲ! ಒಬ್ಬ ಕಳ್ಳ ಇನ್ನೊಬ್ಬ ಕಳ್ಳನ ಉದಾಹರಣೆ ಕೊಟ್ಟ ಹಾಗೆ!" ಎನ್ನುತ್ತಾ ಅವಳು ಗಹಗಹಿಸಿ ನಕ್ಕಳು.

"ಸರಿಯೆ. ನಾನು ಕಳ್ಳನೇ ಅನ್ನು. ನಾನು ಏನೇ ಆದರೂ ಅದರಿಂದ ನಿನಗೇನಾಗಬೇಕು? ನಾನೇನು ನಿನ್ನನ್ನು ವಿವಾಹವಾಗಲು ಕೇಳುತ್ತಿದ್ದೇನೆಯೆ? ದುಡ್ಡು ಕೊಡುವವರಿಗೆಲ್ಲಾ ದೇಹವೊಪ್ಪಿಸುವ ನಿತ್ಯವಧು ನೀನು. ನಾನು ಹಣ ಕೊಡುವವರೆಗೂ ನನ್ನ ಸಂಬಂಧವಿಟ್ಟುಕೊಳ್ಳಲು ನೀನೇಕೆ ಬೇಡವೆನ್ನಬೇಕು?"

"ನಿನ್ನಂಥ ನಾಯಿ – ಹಣವನ್ನೇಕೆ, ಮೂರು ಲೋಕಗಳನ್ನೇ ಕೊಟ್ಟರೂ ನಿನ್ನನ್ನು ನಾನು ಹತ್ತಿರ ಸೇರಿಸುವುದಿಲ್ಲ."

ಆ ಮಾತು ಕೃಷ್ಣಾಜಿಯನ್ನು ವಿಪರೀತವಾಗಿ ರೇಗಿಸಿತು.

"ಒಬ್ಬ ಯಕಶ್ಚಿತ್ ವೇಶ್ಯೆಯ ಬಾಯಿಂದ ಇಂಥಾ ಮಾತು ಬರಬಾರದು," ಎಂದನಾತ.

"ನಾನು ವೇಶ್ಯೆಯಾಗಿದ್ದುದು ನಿಜ. ನೀನಾದರೂ ಏನಂತೆ? ನೀನೂ ಒಬ್ಬ ವೇಶ್ಯೆಯೆ!" ಎಂದಳು ಮಲಿಕಾ.

"ಆಂ! ನಾನು....ನಾನೂ ವೇಶ್ಯೆ!"

"ವೇಶ್ಯೆಯಲ್ಲದಿನ್ನೇನು! ನಾವು ಹಣಕ್ಕಾಗಿ ದೇಹ ಮಾರಿಕೊಂಡರೆ ನೀನು ಹಣಕ್ಕಾಗಿ ದೇಹ ಆತ್ಮ ಎರಡನ್ನೂ ಮಾರಿಕೊಂಡೆ. ಪಿತೂರಿ ನಾಯಿಯಾ! ನಡೆಯತ್ತ. ನನ್ನ ಕಣ್ಣೆದುರು ನಿಲ್ಲಬೇಡ!" ಎಂದು ಹೇಳುತ್ತಾ ಅವಳು ಕೋಪವನ್ನು ತಡೆದುಕೊಳ್ಳಲಸಮರ್ಥಳಾಗಿ ಅವನಮುಖದ ಮೇಲೆ ಉಗುಳಿದಳು.

"ಅಯ್ಯಯ್ಯೋ! ಚಾಂಡಾಲಿ! ನನ್ನ ಜಾತಿ ಕೆಡಿಸಿಬಿಟ್ಟೆ! ಧರ್ಮ ಕೆಡಿಸಿಬಿಟ್ಟೆ!" ಎಂದು ಆಕ್ರೋಶ ಮಾಡುತ್ತ ಕೃಷ್ಣಾಜಿ ಅವಳನ್ನು ಹೊಡೆಯಲು ಕೈಯೆತ್ತಿದ.

ಅವನ ಕೈಯಿನ್ನೂ ಗಾಳಿಯಲ್ಲಿರುವಾಗಲೆ ಅವಳು ತನ್ನ ಸೊಂಟದಲ್ಲಿ ಅಡಗಿಸಿಟ್ಟುಕೊಂಡಿದ್ದ ಕಿರುಗತ್ತಿಯನ್ನು ಹಿರಿದು ಅವನನ್ನೆದುರಿಸಲು ಸಿದ್ಧಳಾಗಿ ಒಂದು ಹೆಜ್ಜೆ ಮುಂದೆ ಬಂದಳು. ದೀಪದ ಬೆಳಕಿಗೆ ಚಕಚಕನೆ ಮಿಂಚಿದ ಆ ಆಯುಧವನ್ನು ಕಂಡೊಡನೆಯೆ ಕೃಷ್ಣಾಜಿ ಸರಸರನೆ ಹಿಂದೆ ಸರಿದು ಬಾಗಿಲಿನ ಬಳಿ ಬಂದು, ಮಲಿಕಾಳ ತಾಯಿ ತಡೆಯುತ್ತಿದ್ದರೂ ಅವಳನ್ನು ಗಮನಿಸದೆ ಬಂದ ಹಾದಿ ಹಿಡಿದು ಹೊರಟುಹೋದ.

ಕಿರುಗತ್ತಿಯನ್ನು ಮತ್ತೆ ಸೊಂಟಕ್ಕೆ ಸಿಕ್ಕಿಸಿಕೊಂಡು, ಬಟ್ಟೆಗಳ ಗಂಟನ್ನು ಕಂಕುಳಲ್ಲಿಟ್ಟುಕೊಂಡು ಕೊಟಡಿಯಿಂದ ಹೊರಬಂದಳು ಮಲಿಕಾ.

ಬಾಗಿಲಲ್ಲಿಯೆ ನಿಂತಿದ್ದ ತಾಯಿ ಗಾಬರಿಗೊಂಡು ಕೇಳಿದಳು :

" ಎಲ್ಲಿಗೆ ಹೊರಟೆ ಮಲಿಕಾ ?"

" ನನಗಿನ್ನು ನೀನು ಏನನ್ನೂ ಕೇಳಬೇಡ ಅವ್ವಾ," ಎಂದಳು ಮಲಿಕಾ, ಬೆದರಿಸುವ ಧ್ವನಿಯಲ್ಲಿ.

" ಅದೇನೇ ಹೀಗಂದರೆ ? ನೀನು ನಡೆಸಿರುವದಾದರೂ ಏನು ? ಕಾರಭಾರಿ ಸಾಹೇಬರಿಗೆ ಬೇರೆ ಹಾಗೆ ಮಾಡಿದೆ. ಅವರೂ ಇನ್ನು ಸುಮ್ಮನಿರುವದಿಲ್ಲ. ನಮ್ಮಿಬ್ಬರನ್ನೂ ಹಿಡಿದು ಸೆರೆಯಲ್ಲಿಡಬಹುದು. ನಿನ್ನಿಂದಾಗಿ ನಾನೂ ಈ ವಯಸ್ಸಿನಲ್ಲಿ...."

ತಾಯಿಯ ಮಾತನ್ನು ನಡುವೆಯೆ ತಡೆದು ಮಲಿಕಾ ಹೇಳಿದಳು :

" ಇಂದಿಗೆ ನನ್ನ ನಿನ್ನ ಸಂಬಂಧವೇ ಮುಗಿದಂತಾಯ್ತು ಅವ್ವಾ. ಇನ್ನು ನೀನುಂಟು, ಈ ಮನೆಯುಂಟು, ಇಲ್ಲಿಯ ಸಂಪತ್ತುಂಟು. ಇದಾವುದೂ ನನಗೆ ಬೇಕಿಲ್ಲ. ಈ ಮನೆಯಲ್ಲಿ, ಈ ಊರಲ್ಲಿ ಇರುವುದೂ ಬೇಕಿಲ್ಲ. ಇದೋ, ನಾನು ಹೊರಟೆ: ನನ್ನ ಪಾಡಿಗೆ ನನ್ನನ್ನು ಬಿಟ್ಟರೆ ಸರಿ. ಅಡ್ಡ ಬಂದು ತಡೆಯಲು ಯತ್ನಿಸಿದರೆ ಏನು ಅನರ್ಥವಾಗುವುದೋ ಹೇಳಲಾರೆ."

ಅವಳು ಹೇಳಿ ಮುಗಿಸುತ್ತಿದ್ದಂತೆಯೆ ಮನೆಯ ಹೊರಗಡೆ ಅಡಿಗಳ ಸಪ್ಪಳದುದು ಕೇಳಬಂದಿತು. ಅವಳಿಗೆ ಚಿರಪರಿಚಿತವಾದ, ಪ್ರಿಯಕರವಾದ ಸದ್ದು.

" ಅಂತೂ ಯೋಗ್ಯ ಸಮಯಕ್ಕೇ ಬಂದ ರಾಜಶೇಖರ!" ಎಂದು ಮನಸ್ಸಿನಲ್ಲಿಯೆ ಅಂದುಕೊಂಡು, ತನ್ನನ್ನು ದಿಙ್ಮೂಢಳಂತೆ ನೋಡುತ್ತಾ ನಿಂತಿದ್ದ ತಾಯಿಗೆ ಅವಸರದಿಂದ ನಮಸ್ಕಾರ ಮಾಡಿ, ಅವಳು ತಡೆಯಲು ಧ್ವನಿಯೆತ್ತುತ್ತಿದ್ದ ಹಾಗೆಯೇ ಮನೆಯಿಂದ ಹೊರಬಿದ್ದು, ಅಂಗಳದಲ್ಲಿ ಕಾದಿದ್ದ ಪ್ರಿಯತಮನ ಬಳಿ ಸಾರಿದಳು ಮಲಿಕಾ.

" ಈಗಲೇ ಹೊರಟುಬಿಡೋಣವೇ ಮಲಿಕಾ ?" ಎಂದು ಪ್ರಶ್ನಿಸಿದ ರಾಜಶೇಖರ.

" ಎಷ್ಟು ಬೇಗ ಹೊರಟರೂ ಅಷ್ಟು ಒಳ್ಳೆಯದೇ. ಒಂದು ನಿಮಿಷವೂ ಕಾಲಹರಣ ಮಾಡುವಂತಿಲ್ಲ."

ರಾಜಶೇಖರ ಮತ್ತೆ ಮಾತನಾಡಲಿಲ್ಲ; ಪ್ರೇಯಸಿಯ ಕೈಗೆ ಕೈಸೇರಿಸಿ ಆತ ತ್ವರೆಯಿಂದ ನಡೆಯತೊಡಗಿದ.

———

# ಶಾರದಾ ಪ್ರಕಟನಾಲಯದ ಪ್ರಕಟನೆಗಳು

---

| ಸಂ. | ಹೆಸರು | ಬೆಲೆ | | |
|---|---|---|---|---|
| ೧. | ಕಾರವಾನ್ (ದ್ವಿತೀಯ ಮುದ್ರಣ) | ೧ | ೪ | ೦ |
| ೨. | ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) | ೨ | ೪ | ೦ |
| ೩. | ಜೀವನ – ಕಲೆ * | ೧ | ೦ | ೦ |
| ೪. | ಮುಗುಳುನಗೆ * | ೧ | ೪ | ೦ |
| ೫. | ಸ್ವಪ್ನಸುಂದರಿ (ದ್ವಿತೀಯ ಮುದ್ರಣ) | ೧ | ೪ | ೦ |
| ೬. | ಆಲದ ಹೂ | ೧ | ೧೨ | ೦ |
| ೭. | ಹುಡುಗಾಟ | ೧ | ೪ | ೦ |
| ೮. | ಶವದ ಮನೆ * | ೧ | ೪ | ೦ |
| ೯. | ಎದಿರೇಟು | ೧ | ೮ | ೦ |
| ೧೦. | ಸರ್ವಮಂಗಳಾ (ದ್ವಿತೀಯ ಮುದ್ರಣ) | ೩ | ೮ | ೦ |
| ೧೧. | ಕೇಡಿಗನ ಕಿಡಿಗಳು | ೧ | ೦ | ೦ |
| ೧೨. | ದೇವತೆಗಳು ನಕ್ಕಾಗ | ೧ | ೪ | ೦ |
| ೧೩. | ಜ್ವಾಲಾಮುಖಿಯ ಮೇಲೆ | ೪ | ೦ | ೦ |
| ೧೪. | ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ | ೧ | ೮ | ೦ |
| ೧೫. | ಹಾಳು – ಮೂಳು | ೧ | ೦ | ೦ |
| ೧೬. | ನಾಡಿಗೇರರ ನಗೆಬರಹಗಳು ೧ | ೧ | ೪ | ೦ |
| ೧೭. | ಮೋಹದ ಬಲೆಯಲ್ಲಿ (ದ್ವಿತೀಯ ಮುದ್ರಣ) | ೩ | ೮ | ೦ |
| ೧೮. | ಸಾವಿನೊಂದಿಗೆ ಸರಸ | ೧ | ೪ | ೦ |
| ೧೯. | ಅನುರಾಗ | ೧ | ೪ | ೦ |
| ೨೦. | ಬಿಡುಗಡೆಯ ಬೇಡಿ (ದ್ವಿತೀಯ ಮುದ್ರಣ) | ೧ | ೮ | ೦ |
| ೨೧. | ಜೋಳದ-ಬೆಳೆಯ ನಡುವೆ (ದ್ವಿತೀಯ ಮುದ್ರಣ) | ೧ | ೦ | ೦ |
| ೨೨. | ಜರತಾರಿ ಜಗದ್ಗುರು (ದ್ವಿತೀಯ ಮುದ್ರಣ) | ೧ | ೮ | ೦ |
| . | ಕಾನ್ವೆಂಟ್ ಗರ್ಲ್ (ದ್ವಿತೀಯ ಮುದ್ರಣ) | ೦ | ೧೨ | ೦ |
| . | ಖಾನಾವಳಿಯ ನೀಲಾ (ದ್ವಿತೀಯ ಮುದ್ರಣ) | ೧ | ೦ | ೦ |
| . | ಂಗನಾಯಕಿ | ೨ | ೦ | ೦ |
| . | ುದುವೆ ಮಾಡಿ ನೋಡು | ೧ | ೦ | ೦ |
| . | ಲ್ಯಾಣಿ (ದ್ವಿತೀಯ ಮುದ್ರಣ) | ೧ | ೮ | ೦ |
| . | ೀ ನನ್ನ ಮುಟ್ಟಬೇಡ* | ೧ | ೮ | ೦ |

* ತಿಗಳು ಮುಗಿದಿವೆ

| | | | |
|---|---|---|---|
| ೨೯. | ನನ್ನ ದೇವರು (‘ಕುವೆಂಪು’ ರವರ ಕಥಾಸಂಕಲನ) | .... | ೧ |
| ೩೦. | ಕಾಮಿನಿ – ಕಾಂಚನ (ದ್ವಿತೀಯ ಮುದ್ರಣ).... | .... | ೧ |
| ೩೧. | ಜನಿವಾರ ಮತ್ತು ಶಿವದಾರ (ದ್ವಿತೀಯ ಮುದ್ರಣ) | .... | ೧ |
| ೩೨. | ಮಲ್ಲಿ | .... .... | ೧ |
| ೩೩. | ಆನಂದ ಲಹರಿ | .... .... | ೦ ೧ |
| ೩೪. | ಸೀತಾ – ರತ್ನ | .... .... | ೦ ೧ |
| ೩೫. | ನಾಡಿಗೇರರ ನಗೆಬರಹಗಳು ೨ | .... .... | ೧ |
| ೩೬. | ನಾನು ಪೋಲೀಸನಾಗಿದ್ದೆ | .... .... | ೧ ೪ |
| ೩೭. | ರಾಗಿಣಿ | .... .... | ೧ ೪ |
| ೩೮. | ಮಧುಚಂದ್ರ | .... .... | ೦ ೧೨ |
| ೩೯. | ಬಂಗಾರದ ಜಿಂಕೆಯ ಹಿಂದೆ | .... .... | ೧ ೪ |
| ೪೦. | ಬಣ್ಣದ ಮಾಲಿಂಗ | .... .... | ೧ ೪ |
| ೪೧. | ಗೋವಾದೇವಿ | .... .... | ೧ ೪ |
| ೪೨. | ಪಟ್ಟಣದ ಹುಡುಗಿ (ನಾಟಕ) * | .... .... | ೧ ೪ |
| ೪೩. | ಪಾಪಕೂಪ | .... .... | ೧ ೪ |
| ೪೪. | ಪಾತರಗಿತ್ತಿ | .... .... | ೧ ೪ |
| ೪೫. | ರೂಪಸರ್ಪಿಣಿ | .... .... | ೧ ೪ |
| ೪೬. | ಕಾಂಚನ – ಗಂಗಾ | .... .... | ೧ ೪ |
| ೪೭. | ಪಾಂಚಜನ್ಯ | .... .... | ೧ ೪ |
| ೪೮. | ಬೆಳಗಿನ ಗಾಳಿ | .... .... | ೧ ೪ |
| ೪೯. | ಅಕ್ಕಮಹಾದೇವಿ (ನಾಟಕ) | .... .... | ೧ ೧೨ |
| ೫೦. | ಮಣ್ಣಿನ ಮಗಳು | .... .... | ೨ |
| ೫೧. | ರಾಘವಾಂಕನ ಹಲ್ಲು | .... .... | ೧ |
| ೫೨. | ದೇವದಾಸಿ ಮತ್ತು ಎಚ್ಚಮನಾಯಕ | .... .... | ೧ |
| ೫೩. | ಬೀದಿಯಲ್ಲಿ ಬಿದ್ದವಳು | .... .... | ೧ ೦ |
| ೫೪. | ಹೃದಯಾಂತರಾಳ (ನಾಟಕ) | .... .... | ೧ |
| ೫೫. | ಗಿರಿಯ ನವಿಲು | .... .... | ೧ |
| ೫೬. | ಹತ್ಯಾ–ನಾಟಕ | .... .... | ೦ |
| ೫೭. | ಮಾಯಾವತಿ | .... .... | ೧ |
| ೫೮. | ಆಗಸ್ಟ್ ಒಂಭತ್ತು | .... .... | ೧ |
| ೫೯. | ರೂಪರೇಖಾ | .... .... | ೧ |
| ೬೦. | ಸಮರಭೂಮಿ | .... .... | ೧ |

ಪ್ರತಿಗಳು ಮುಗಿದಿವೆ *

# ಸಮರಭೂಮಿ

## ಬಸವರಾಜ ಕಟ್ಟೀಮನಿಯವರು ಬರೆದ
## ಐತಿಹಾಸಿಕ ಕಾದಂಬರಿ

ನೂರು ವರ್ಷಗಳ ಹಿಂದೆ, ೧೮೫೭ರಲ್ಲಿ ಭಾರತದಲ್ಲಿ ನಡೆದ ಬಂಡಾಯದ ವಿಚಾರ ಎಲ್ಲರೂ ಕೇಳಿ ಬಲ್ಲರು. ಆಂಗ್ಲರಾಳಿಕೆಯನ್ನು ಕಿತ್ತೆಸೆಯಲು ಉತ್ತರ ಭಾರತದಲ್ಲಿ ಸಂಘಟಿತ ಸ್ವರೂಪದಲ್ಲಿ ಹೋರಾಟ ನಡೆದಂತೆ ದಕ್ಷಿಣ ಭಾರತದಲ್ಲಿ ನಡೆಯಲಿಲ್ಲವಾದರೂ ಅಂದಿನ ಕಂಪನಿ ಸರಕಾರವನ್ನು ಕೆಲದಿನಗಳ ಮಟ್ಟಿಗಾದರೂ ನಡುಗಿಸುವಂಥ ಪುಟ್ಟ ಬಂಡಾಯವೊಂದು ನಮ್ಮ ಕರ್ನಾಟಕದಲ್ಲೂ ನಡೆಯಿತು.

ಇಂದು ಧಾರವಾಡ ಜಿಲ್ಲೆಯಲ್ಲೊಂದು ಪಟ್ಟಣವಾಗಿರುವ ನರಗುಂದಕ್ಕೆ ಅಂದು ದೊರೆಯಾಗಿದ್ದ, ನಿಷ್ಪುತ್ರಕನಾಗಿದ್ದ ಭಾಸ್ಕರರಾಯನಿಗೆ ಕಂಪನಿ ಸರಕಾರದವರು ದತ್ತು ಸ್ವೀಕಾರಕ್ಕೆ ಅನುಮತಿ ಕೊಡಲಿಲ್ಲವಾದುದರಿಂದ ಆತ ಕೆರಳಿ ಬಂಡಾಯದ ಬಾವುಟವೆತ್ತಿದ.

ಆ ಚಾರಿತ್ರಿಕ ಬಂಡಾಯವೇ ಈ ಕಾದಂಬರಿಯ ವಸ್ತುವಾಗಿದೆ.

